# ಕಸ್ತೂರಿ

ನವೆಂಬರ್ 1990 ರೂ. 3-00



ಮಾಗಿದ ಜೀವ, ಮಾಸದ ರಂಗು



ನೆಲನಲೋಕದ ಹೂಗಳು!



# ಕಸ್ತೂರಿ

ಕನ್ನಡ ಡೈಜೆಸ್ಟ್


ವರ್ಷ: 35

ಸಂಚಿಕೆ: 3

ನವೆಂಬರ್ 1990

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಆರ್. ಎ. ಉಪಾಧ್ಯ

ಮುಖಪುಟ
ಬಳ್ಳಿಗೆ ಕಾಯಿ ಭಾರವೆ?

ವರ್ಣ ಪಾರದರ್ಶಿಕೆ:
ಎಂ. ವಿಶ್ವನಾಥ್

ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-580020


## ಬೆಳಕಿಂಡಿ

★ ಸಾಕು ಎಂಬುದು ಸಾವಿಗೆ ಔತಣ; ಬೇಕು ಎಂಬುವವನೇ ಬೆಳೆಯುವನು.

- ಶಂ. ಬಾ. ಜೋಶಿ

★ ಸಂಪತ್ತನ್ನು ಉತ್ಪಾದಿಸದೆ ಅದನ್ನು ಅನುಭವಿಸಲು ಯಾರಿಗೂ ಹಕ್ಕಿಲ್ಲ.

- ಬರ್ನಾರ್ಡ್ ಷಾ

★ ನೀವು ಮಾಡಿದ್ದನ್ನೆಲ್ಲ ಮೆಚ್ಚುವ ಮಿತ್ರರನ್ನು ನಂಬಬೇಡಿ, ತಪ್ಪನ್ನು ತೋರಿಸಿಕೊಡುವವರನ್ನು ಮೆಚ್ಚಿಕೊಳ್ಳಿ.

- ಸಾಕ್ರೆಟಿಸ್

★ ನಕ್ಷತ್ರಗಳು ಮಿಣುಕರು ಹುಳುವಿನಂತೆ ಕಾಣುವುದಕ್ಕೆ ಸಂಕೋಚ ಪಡುವುದಿಲ್ಲ.

- ವಿವೇಕಾನಂದ


### ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆ ಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಚ್ಚೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಸಹಚಿಂತನ

## ಅಚ್ಚುಕಟ್ಟು

ನನ್ನ ಮನೆ ಮಂದಿಯೆಲ್ಲರ ನೆಚ್ಚಿನ 'ಕಸ್ತೂರಿ'ಯ ಅಕ್ಟೋಬರ್ 90ರ ಸಂಚಿಕೆ ನಿಜಕ್ಕೂ ಚೇತೋಹಾರಿಯಾಗಿತ್ತು. ಖ್ಯಾತ ಲೇಖಕ ಆದ್ಯ ರಾಮಾಚಾರ್ಯರ 'ಕಾಶ್ಮೀರದ ಜ್ವಾಲಾಮುಖಿ'ಯ ಸಂಗ್ರಹ ತುಂಬ ಅಚ್ಚುಕಟ್ಟಾಗಿ ಆಗಿದೆ.

ಹಾಸಣಗಿ ವಿದ್ಯಾ

## ಅಚ್ಚರಿ!

ಅಕ್ಟೋಬರ್, 1990ರ 'ಕಸ್ತೂರಿ'ಯಲ್ಲಿ ಪ್ರಕಟವಾದ 'ಮೈಕ್ರೋಪ್ರಿಂಟಿಂಗ್' ಕುರಿತಾದ ಲೇಖನವನ್ನು ತುಂಬ ಆಸಕ್ತಿಯಿಂದ ಓದಿದೆ. ಒಂದು ಹೊಸ ಅಚ್ಚರಿಯನ್ನು ಅನುಭವಿಸಿದೆ.

ಶಿರಸಿ ಉಷ

## ಉತ್ತಮ ಕಥೆ

ಗಂಗಾ ಪಾದೇಕಲ್ ಅವರ 'ಹಣವೇ ನಿನ್ನಯ ......' ಕತೆ ತುಂಬ ಮಾಮೂಲಿಯಾಗಿ ಪ್ರಾರಂಭವಾಗಿ ಅತ್ಯಂತ ಪರಿಣಾಮಕಾರಿಯಾಗಿ ಕೊನೆಗೊಳ್ಳುವ ಉತ್ತಮ ಕಥೆ. ನಿಮಗೆ ಧನ್ಯವಾದಗಳು.

ವೀರೇಶ ಶೆಟ್ಟರ ಬೆಳಗಾವಿ

## ಸಮರ್ಪಕ

ತರ್ಜುಮೆಯಾದರೂ ಸರಿಯೇ, ಅನೇಕ ದಿನಗಳ ನಂತರ ಒಂದು ಒಳ್ಳೆ ಕಥೆ ಓದಿದೆವು. ಎಸ್.ಕೆ. ಪೊಟ್ಟೆಕಾಟ್‌ರ 'ಮಮ್ಮ ಎಂಬ ದೋಣಿಯಾತ' ದಣಿವಾಗುವಷ್ಟು ತನ್ಮಯತೆ ಮೂಡಿಸಿದ ಕಥೆ. ಅನುವಾದಕ ಡಾ. ಅಶೋಕ ಕುಮಾರ್ ತುಂಬ ಸಮರ್ಪಕವಾಗಿ ಕನ್ನಡಿಸಿದ್ದಾರೆ.

ಎ.ನಾಗಪ್ಪ ಬಳ್ಳಾರಿ

## ಜಾಸ್ತಿಯಾಯ್ತು

ವಾಮನ ನಾಡಿಗೇರರು 'ಕೊಲಂಬಿಯಾದ ಕೊಕೇನ್ ಸಾಮ್ರಾಟರ' ಕುರಿತಂತೆ ಬರೆದದ್ದು ಇವತ್ತಿನ 'ಡ್ರಗ್ ಮೆನೇಸ್' ದಿನಗಳಲ್ಲಿ ಅತ್ಯಂತ ಉಪಯುಕ್ತ ಲೇಖನವಾಗಿತ್ತು. ಆದರೆ ಅವಶ್ಯಕತೆಗಿಂತ ಹೆಚ್ಚು ವಿಸ್ತಾರವಾಗಿತ್ತು.

ಹುಬ್ಬಳ್ಳಿ ಶ್ರೀನಿವಾಸ

## ಅರ್ಥವುಂಟೆ

ಕೊಲಂಬಿಯವನ್ನು ಕೋಲಂಬಿಯಾ ಎಂದೂ, ಕೋಕೇನ್ ಎಂಬುದನ್ನು ಕೊಕೇನ್ ಎಂದೂ ಮುದ್ರಿಸಲಾಗಿದೆ. ಇದಕ್ಕೆ ಮತ್ತೇನಾದರೂ ವಿಶಿಷ್ಟ ಅರ್ಥವುಂಟೆ?

ಬೊಮ್ಮನ ಹಳ್ಳಿ ಜ್ಯೋತಿ

## ಹೊಸ ಮೆರುಗು

ಈಗ ಹಳತಾಗುತ್ತಿರುವ ತಲೆಮಾರಿನ ಸಮರ್ಥ ಲೇಖಕರಾದ ಗೌರೀಶಕಾಯ್ಕಿಣಿಯವರು ಬರೆದ 'ಸೇನಾ ಶಕ್ತಿಯ ಷಣ್ಮುಖಗಳು' ಅಕ್ಟೋಬರ್ ತಿಂಗಳ ಕಸ್ತೂರಿಗೆ ಹೊಸ ಮೆರುಗು ನೀಡಿದ ಲೇಖನವಾಗಿತ್ತು.

ಮುರ್ಡೇಶ್ವರ ನಾರಾಯಣ

## ಬಹುಮುಖ ಪ್ರತಿಭೆ

ಬಹುಮುಖ ಪ್ರತಿಭೆಯ ಬೂದಿ ರಾಮಭಟ್ಟರನ್ನು ಪರಿಚಯಿಸಿದ್ದಕ್ಕೆ ವಿ.ಪ್ರಾಣೇಶರಾವ್ ಅವರಿಗೂ, ಕಸ್ತೂರಿಗೂ ನಮ್ಮ ವಂದನೆಗಳು.

ಕೂಡ್ಲಿಗಿ ಆರ್.ಟಿ.ಪಾಟೀಲ, ಗೆಳೆಯರು

## ಸಮಗ್ರ ಲೇಖನ

ಹುಬ್ಬಳ್ಳಿಯ ವೈದ್ಯರಾದ ಡಾ ಗಂಗಲ್ ಅವರ ಬಗ್ಗೆ ಅಲ್ಲಲ್ಲಿ ಓದಿ, ಕೇಳಿ ಬಲ್ಲವನಾಗಿದ್ದೆ. ಆದರೆ ಅವರ ಅನನ್ಯ ಕಾರ್ಯ ಸಾಧನೆಯ ಬಗ್ಗೆ ಸಮಗ್ರ ಲೇಖನ ಓದುವ ಅವಕಾಶವನ್ನು ಅಕ್ಟೋಬರ್ ತಿಂಗಳ ಕಸ್ತೂರಿ ಒದಗಿಸಿತು. ಡಾ. ಕ್ಯಾಲಕೊಂಡರಿಗೆ ನಾವು ಋಣಿಗಳು.

ಶಿವಮೊಗ್ಗ ಎಸ್.ಕೆ.ಸಿಂದಗಿ

## ನಿರ್ಧರಿಸಿದ್ದೇನೆ

ಇನ್ನೇನು ಸ್ಕೂಟರು ಕೊಳ್ಳಲಿದ್ದೆ. ಅದರಲ್ಲೂ ಸೆಕೆಂಡ್ ಹ್ಯಾಂಡು! ರಾಮಪ್ರಸಾದ್ ಟಿ.ವಿ. ಅವರ ಲೇಖನ ಓದಿ ಕೊಳ್ಳುವುದನ್ನು ಒಂದು ವಾರಕ್ಕೆ ಮುಂದೂಡಿದೆ. ಈಗ ನಿರ್ಧರಿಸಿದ್ದೇನೆ, ಸೆಕೆಂಡ್ ಹ್ಯಾಂಡ್ ಕೊಳ್ಳಬೇಕು! ಆದರೆ ಪರೀಕ್ಷಿಸಿ.

ಕುಮಟಾ ಗೋಪಾಲಕೃಷ್ಣ

## ಶ್ರೇಷ್ಠ

ಮೊಘಲರ ಕೊನೆಯ ದೊರೆ ಬಹದೂರ್ ಷಾ ಜಫರನ ದಾರುಣ ಬದುಕು ಮನ ಕಲುಕಿತು. ಲೇಖನದ ಕೊನೆಯಲ್ಲಿ ಆತನ ಕವಿತೆಯನ್ನು ಪುನರುದ್ಧರಿಸಿರುವುದೂ ಮತ್ತು ಅದರ ಕನ್ನಡಾನುವಾದವನ್ನು ಅಷ್ಟೇ ಕಾವ್ಯಮಯವಾಗಿ ನೀಡಿದುದೂ 'ಕಸ್ತೂರಿ'ಯ ಶ್ರೇಷ್ಠತೆಗೆ ಸಾಕ್ಷಿ. ವಂದನೆಗಳು.

ಹೊಳೆನರಸೀಪುರ ಅನುಪಮ

# ಆಶಾಕಿರಣ

ಇತಿಹಾಸದ ಸವಿಸ್ತಾರ ನೆನಪಿನಲ್ಲಿ ಅತ್ಯಂತ ಯಾತನಾಮಯ ನೆನಪಾಗಿ ಉಳಿದಿರುವುದು ದಿಲ್ಲಿಯು ಅನುಭವಿಸಿದ ೧೮೫೭-೫೮ರ ಘಟನಾವಳಿಗಳು. ಕಂಪೆನಿ ಸೈನ್ಯ ಮೃತ್ಯುಸದೃಶವಾಗಿ ಒಂದೆಡೆಯಿಂದ ಆಕ್ರಮಣ ನಡೆಸುತ್ತಾ ಬರುತ್ತಿದ್ದರೆ ಮತ್ತೊಂದೆಡೆ ಕಂಗಾಲಾದ ಪ್ರಜೆಗಳು ನಿಸ್ಸಹಾಯಕ ಅರಸರೆಡೆಗೆ ನೋಡುತ್ತಿದ್ದರು. ಸಾವು, ಬಡತನ ಮತ್ತು ಅಭದ್ರತೆಗಳು ಎಲ್ಲೆಡೆಗೂ ತಾಂಡವವಾಡುತ್ತಿದ್ದವು. ಅಂಥದರಲ್ಲೂ ಒಂದು ಹೋರಾಟ, ಒಂದು ಪ್ರತಿಭಟನೆ ಜಾಗೃತವಾಗಿತ್ತು. ಅದಲ್ಲವೆ ಆಶಾಕಿರಣವಾಗಿದ್ದ ಅಂಶ? ಕಿಬ್ಬಳ್ಳಿ ಗಣಪತಿ ಶರ್ಮ ಅವರ 'ದಿಲ್ಲಿ ಕಂಡ ೧೮೫೭ - ೫೮' ಲೇಖನ ತುಂಬ ಚೆನ್ನಾಗಿತ್ತು.

ಬಿ.ಎಸ್.ರಮೇಶ್, ಹಾಸನ.

## ಈ ಸಂಚಿಕೆಯಲ್ಲಿ

# ಬೈಬಲ್ ಕಥೆ

ಹಿಂದೆ ಸಿರಿಯಾ ದೇಶಗಳಲ್ಲಿ ನರಿಗಳು ಅಪರಿಮಿತವಾಗಿರುತ್ತಿದ್ದವು. ಇವು ಅಲ್ಲಿನ ದ್ರಾಕ್ಷಿ ತೋಟಗಳಿಗೆ ನುಗ್ಗಿ ಹೂ ಹೀಚುಗಳನ್ನೆಲ್ಲಾ ಧ್ವಂಸ ಮಾಡುತ್ತಿದ್ದವು. ಒಂದಾನೊಂದು ಕಾಲದಲ್ಲಿ ಆ ದೇಶದಲ್ಲಿ ಡೇವಿಡ್ ಎಂಬ ಒಬ್ಬ ಮನುಷ್ಯನಿದ್ದನು. ಅವನಿಗೆ ಒಂದು ದ್ರಾಕ್ಷಿ ತೋಟವಿದ್ದಿತು. ಆ ತೋಟದಲ್ಲಿದ್ದ ದ್ರಾಕ್ಷಿ ಗಿಡಗಳ ಪೈಕಿ ಒಂದು ಅಸಾಧಾರಣ ಗಿಡವಿತ್ತು. ಅದರಲ್ಲಿ ಹಣ್ಣುಗಳು ಗೊಂಚಲು ಗೊಂಚಲಾಗಿ ಬಿಟ್ಟಿದ್ದವು. ಡೇವಿಡ್‌ನಿಗೆ ಆ ದೇಶದ ರಾಜನಿಂದ ಬಹು ಉಪಕಾರವಾಗಿದ್ದಿತು. ಆ ಕೃತಜ್ಞತೆಗೆ ಸಲುವಾಗಿ ಇವನು ಆ ಹಣ್ಣುಗಳನ್ನು ಅರಸನಿಗೆ ಕಾಣಿಕೆಯಾಗಿ ಒಪ್ಪಿಸಬೇಕೆಂದಿದ್ದನು. ಇದಕ್ಕಾಗಿ ಇವನು ತನ್ನ ತೋಟಕ್ಕೆ ಸುತ್ತಲೂ ಬಲವಾದ ಬೇಲಿ ಹಾಕಿಸಿದ್ದುದು ಮಾತ್ರವಲ್ಲದೆ ಅದನ್ನು ರಾತ್ರಿ ಹಗಲೂ ಜೋಪಾನವಾಗಿ ಕಾಯುವುದಕ್ಕಾಗಿ ಆಳುಗಳನ್ನಿಟ್ಟಿದ್ದನು. ಹೀಗಿರಲು ಒಂದು ದಿನ ರಾತ್ರಿ ಇದಕ್ಕೆ ನರಿಗಳು ನುಗ್ಗಿದವು. ಇವು ನೋಡುವುದಕ್ಕೆ ಸಣ್ಣ ಪ್ರಾಣಿಗಳೂ ಅಲ್ಪ ಬಲವುಳ್ಳವುಗಳೂ ಆಗಿದ್ದರೂ ಬಹುಯುಕ್ತಿಯುಳ್ಳವು. ಇವು ಬೇಲಿಯಲ್ಲಿ ಒಂದು ಕಡೆ ಸಂದುಮಾಡಿಕೊಂಡು ಒಳಗೆ ನುಗ್ಗಿ ಗಿಡಗಳಲ್ಲಿದ್ದ ಹಣ್ಣು ಕಾಯಿ ಮೊದಲಾದವುಗಳಲ್ಲಿ ಕೆಲವನ್ನು ತಿಂದು ಕೆಲವನ್ನು ಅರ್ಧಾರ್ಧವಾಗಿ ಕಚ್ಚಿಹಾಕಿದವು. ಈ ರೀತಿ ಅವು ತೋಟವನ್ನೆಲ್ಲಾ ನಾಶಮಾಡಿ ಪಲಾಯನ ಮಾಡಿದವು. ಬಳಿಕ ಒಂದು ದಿನ ಯಜಮಾನನು ತಾನು ನಜರು ಮಾಡಬೇಕೆಂದಿದ್ದ ಹಣ್ಣುಗಳು ಪಕ್ವವಾಗಿರುವುದೆಂದೆಣಿಸಿ ತೋಟಕ್ಕೆ ಬಂದು ಅಲ್ಲಿಯ ಸ್ಥಿತಿಯನ್ನು ನೋಡಲಾಗಿ ಪ್ರತಿಯೊಂದು ಗೊಂಚಲೂ ವಿಕಾರವಾಗಿದ್ದಿತು. ಅದನ್ನು ಕಂಡು ಅವನಿಗೆ ಬಹು ಸಂಕಟವುಂಟಾಗಿ ಅಯ್ಯೋ ಗಣನೆಗೆ ಬಾರದ ಈ ಅಲ್ಪ ಜಂತುಗಳು ಎಷ್ಟು ನಷ್ಟ ಮಾಡಿದವು? ಬಲಶಾಲಿಗಳಾದ ಹುಲಿ, ಸಿಂಹ, ಮೊದಲಾದ ಕ್ರೂರ ಮೃಗಗಳಿಂದಾಗುವ ತೊಂದರೆಗಿಂತ ಈ ಅಲ್ಪ ಜೀವಿಗಳಿಂದಾಗುವ ತೊಂದರೆಯನ್ನು ನಿವಾರಿಸಿಕೊಳ್ಳುವುದು ಅಸಾಧ್ಯವಾಗಿದೆಯಲ್ಲಾ ಎಂದು ದುಃಖಪಟ್ಟನು. ಈ ಚಿಕ್ಕ ಕಥೆಯಿಂದ ನಮಗೆ ಗೊತ್ತಾಗುವ ನೀತಿ ನಮ್ಮ ಹೃದಯವೆಂಬ ದ್ರಾಕ್ಷಾವನದಲ್ಲಿ ಸದ್ಗುಣಗಳೆಂಬ ಫಲವನ್ನು ಬೆಳೆಸಿ ರಾಜಾಧಿರಾಜರೂ ಪರಮೋಪಕಾರಿಯೂ ಆದ ನಮ್ಮ ದೇವರಿಗೆ ನಜರೊಪ್ಪಿಸಬೇಕಾಗಿದೆ. ಆದರೆ ಇಂಥಾ ಫಲವು ಅನೇಕ ವೇಳೆ ಅಲ್ಪಸಂಗತಿಗಳೆಂದು ನಾವು ಎಣಿಸಿರುವ ಸುಳ್ಳು, ಅವಿಧೇಯತೆ, ನಿರ್ದಯೆ, ಮೋಸ, ಕೃತಘ್ನತೆಗಳೆಂಬ ಕ್ಷುದ್ರ ಪ್ರಾಣಿಗಳಾದ ನರಿಗಳಿಂದ ಮಾಲಿನ್ಯ ಹೊಂದಿರುತ್ತವೆ. ನಾವು ಅಂಥಹ ಕೇಡಿಗೆ ಒಳಗಾಗದಂತೆ ನಮ್ಮ ಹೃದಯ ದೌರ್ಬಲ್ಯವನ್ನು ಹೋಗಲಾಡಿಸತಕ್ಕ ಶಕ್ತಿಯನ್ನು ಹೊಂದಬೇಕು.

*ಶಾರದಾ ಶಾಮಣ್ಣ*

# ಆದಾಯದ ಬೆಳೆ: ಅಣಬೆ

ಟಿ.ಎಂ.ಸುಬ್ಬರಾಯ
ಚಿತ್ರ: ಶ್ರೀರಾಜ್ ಶಿರಸಿ



ಒಂದು ರೂಪಾಯಿ ವೆಚ್ಚದಲ್ಲಿ ಐದು ರೂಪಾಯಿಗಳನ್ನು ಗಳಿಸಬಹುದಾದ ಬೆಳೆ 'ಅಣಬೆ' ಮಾಂಸದ ಬೆಲೆ ತುಟ್ಟಿಯಾಗುತ್ತಿರುವ ಈ ದಿನಗಳಲ್ಲಿ ಅಣಬೆ ಮಾಂಸಕ್ಕೆ ತುಸು ಮಟ್ಟಿಗೆ ಪರ್ಯಾಯವೂ ಆಗಬಹುದು. ಔಷಧೀಯ ಹಾಗೂ ಮಾದಕ ಗುಣಗಳಿಂದಾಗಿ ಅಣಬೆಗೆ ಇತ್ತೀಚಿನ ದಿನಗಳಲ್ಲಿ ಮಾರುಕಟ್ಟೆಗಳಲ್ಲಿ ಬೇಡಿಕೆ ಹೆಚ್ಚುತ್ತಿದೆ.

ಮಾನವ ಜನಾಂಗಕ್ಕೆ ಬಹು ಹಿಂದಿನಿಂದಲೂ ಅಣಬೆಗಳ ಪರಿಚಯವಿದೆ. ತಿನ್ನಲು ಯೋಗ್ಯವಾದ ಹಾಗೂ ವಿಷಕಾರಿ ಅಣಬೆಗಳನ್ನು ಕೆಲವು ಪ್ರಾಚೀನ ಭಿತ್ತಿ ಚಿತ್ರಗಳಲ್ಲಿ ಕೆತ್ತಲಾಗಿದೆ. ಪ್ರಾಚೀನ ರೋಮನ್ನರೂ, ಗ್ರೀಕರೂ ಅಣಬೆಗಳನ್ನು ತುಂಬಾ ಇಷ್ಟಪಡುತ್ತಿದ್ದರಂತೆ. ರೋಮನ್ ಚಕ್ರವರ್ತಿ ಕ್ಲಾಡಿಯಸ್ ಸೀಸರನಿಗೆ ವಿಷಯುಕ್ತ ಅಣಬೆಯನ್ನು ಕೊಟ್ಟು ಕೊಲ್ಲಲಾಯಿತೆಂದು ಪ್ರತೀತಿ ಉಂಟು. ಬೀಜಗಳ ಸಹಾಯವಿಲ್ಲದೆ ಕೊಳೆತ ವಸ್ತುಗಳಿಂದ ಅಣಬೆಗಳು ಇದ್ದಕ್ಕಿದ್ದಂತೆಯೇ ಉದ್ಭವಿಸುತ್ತವೆ ಎಂಬುದಾಗಿ ಹದಿನೇಳನೆಯ ಶತಮಾನದವರೆಗೂ ಎಲ್ಲರೂ ನಂಬಿದ್ದರು. ಆದರೆ, 1665ರಲ್ಲಿ ರಾಬರ್ಟ್ ಹುಕ್ ಎನ್ನುವ ಸಸ್ಯಶಾಸ್ತ್ರಜ್ಞ, ಇತರ ಸಸ್ಯಗಳಂತೆಯೇ ಅಣಬೆಗಳೂ ಜನ್ಮ ತಳೆಯುತ್ತವೆ ಎಂಬುದನ್ನು ಖಚಿತಪಡಿಸಿದ.

ಅಣಬೆಯನ್ನು ಒಂದು ವಾಣಿಜ್ಯ ಬೆಳೆಯಾಗಿ ಫ್ರಾನ್ಸ್ ದೇಶದ ಪ್ಯಾರಿಸ್‌ನ ಆಸುಪಾಸಿನಲ್ಲಿ

ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಬೆಳೆಸಲಾರಂಭಿಸಿದರು. ಇಂದು ಪ್ರಪಂಚದ ಹಲವು ದೇಶಗಳಲ್ಲಿ ಅಣಬೆಯನ್ನು ವಾಣಿಜ್ಯ ಹಾಗೂ ಆಹಾರ ಬೆಳೆಯಾಗಿ ಅಭಿವೃದ್ಧಿಪಡಿಸಲಾಗುತ್ತಿದೆ. 1970-80ರ ದಶಕದಲ್ಲಿ ಬ್ರಿಟನ್ನಿನಲ್ಲಿ 75,000;000 ಪೌಂಡ್‌ಗಳಷ್ಟು ಅಣಬೆಯನ್ನು ಬೆಳೆಸಲಾಗಿತ್ತು. ಪೀಟರ್ ಬರೋಬಳಿಯ ಯೂಕ್ಲೇ ಎನ್ನುವಲ್ಲಿ 1949ರಲ್ಲಿಯೇ ಅಣಬೆ ತಳಿ ಅಭಿವೃದ್ಧಿ ಹಾಗೂ ಸಂಶೋಧನಾ ಕೇಂದ್ರವೊಂದನ್ನು ಸ್ಥಾಪಿಸಲಾಗಿತ್ತು.

ಫ್ರಾನ್ಸ್, ಪೋಲೆಂಡ್, ರಶಿಯಾ, ಬರ್ಮಾ, ಅಮೇರಿಕ ಸಂಯುಕ್ತ ಸಂಸ್ಥಾನ, ಜೆಕೋಸ್ಲಾವಾಕಿಯಾ, ಪೂರ್ವ ಯುರೋಪ್, ಇಟಲಿ, ಚೈನಾ, ಜಪಾನ್, ಭಾರತ ಇವು ಅಣಬೆಯನ್ನು ಬೆಳೆಸುವ ದೇಶಗಳು. ಇವುಗಳಲ್ಲಿ ಅಮೇರಿಕ ಸಂಯುಕ್ತ ಸಂಸ್ಥಾನ, ಯುರೋಪ್, ಜಪಾನ್, ಬರ್ಮಾಗಳಲ್ಲಿ ಅಣಬೆಯ ವ್ಯವಸಾಯ ಪ್ರಮುಖ ಉದ್ಯಮವಾಗಿ ಬೆಳೆದಿದೆ. ಅಮೇರಿಕ ಸಂಯುಕ್ತ ಸಂಸ್ಥಾನ ಒಂದರಲ್ಲೇ ಪ್ರತಿ ವರುಷ ಸುಮಾರು ಅರವತ್ತು ದಶಲಕ್ಷ ಪೌಂಡ್ ಅಣಬೆ ಬೆಳೆಯುತ್ತದೆ. ಅಲ್ಲಿಯ ಲಾಂಗ್‌ದ್ವೀಪ, ಚೆಸ್ಟರ್ ಕೌಂಟಿ, ಪೆನ್‌ಸಿಲ್‌ವೇನಿಯಾ ಪ್ರದೇಶಗಳು ಅಣಬೆ ಬೆಳೆಗೆ ಪ್ರಸಿದ್ಧವಾಗಿವೆ. ಅಣಬೆ ಬೆಳೆಯುವಲ್ಲಿ ಜಪಾನ್ ಎರಡನೇ ಸ್ಥಾನದಲ್ಲಿದೆ. ಆದರೆ, ಫ್ರಾನ್ಸ್ ದೇಶದಲ್ಲಿ ಬೆಳೆಯುವಷ್ಟು ವಿವಿಧ ಬಗೆಯ ಅಣಬೆಗಳು ಬೇರೆ ಯಾವ ದೇಶದಲ್ಲಿಯೂ ಬೆಳೆಯುವುದಿಲ್ಲ. ವಿವಿಧ ಬಗೆಯ ಅಣಬೆಗಳಿಗೆ ಫ್ರಾನ್ಸ್ ತಾಯಿನಾಡು. ಫ್ರಾನ್ಸ್‌ನಲ್ಲಿ ಅಣಬೆಯ ಬಗೆಗಳು ಅಧಿಕ; ಬೆಳೆಯುವಲ್ಲಿ ಪ್ರಮಾಣ ಕಡಿಮೆ.

**ಛತ್ತರಿಯ ಕೆಳಗೆ**

ಅಣಬೆಯು ಅಗ್ಯಾರಿಕೇಲಿಸ್ ಕುಟುಂಬದ ಬೆಸಿಡಿಯೋ ಬೀಜಾಣು ವರ್ಗಕ್ಕೆ ಸೇರಿದೆ. ಅಣಬೆಯಲ್ಲಿ ಸುಮಾರು 125 ಜಾತಿಗಳೂ, 4,000 ಪ್ರಬೇಧಗಳೂ ಇವೆ.

ಅಣಬೆಯ ರಚನೆಯೇ ವಿಶಿಷ್ಟ ರೀತಿಯದು. ಕಣ್ಣಿಗೆ ಕಾಣುವ ಭಾಗದಲ್ಲಿ ಮೇಲುಗಡೆ ಛತ್ರಿಯಾಕಾರದ ಹಣ್ಣಿನ ಭಾಗವಿದ್ದು, ಅದರ ಕೆಳಭಾಗದಲ್ಲಿ ಒಂದು ತೊಟ್ಟು ಹಾಗೂ ಟೊಪ್ಪಿಗೆ ಇರುತ್ತದೆ. ಈ ಛತ್ರಿಯಾಕಾರದ ಭಾಗದ ಒಳಭಾಗದಲ್ಲಿ ಹಲವು ಪದರುಗಳನ್ನೊಳಗೊಂಡ ಹಾಳೆ ಪದರುಗಳಿರುತ್ತವೆ. ಇವನ್ನು 'ಗಿಲ್ಸ್' ಎಂಬುದಾಗಿ ಕರೆಯುತ್ತಾರೆ. ಈ ಗಿಲ್ಸ್‌ನಲ್ಲಿ ಬೆಸಿಡಿಯೋ ಜೀವಾಣುಗಳು ಹುಟ್ಟುತ್ತವೆ. ಅಣಬೆಯ ಪದರು ಬೂಸ್ಟು ಸಸ್ಯದ ಹಣ್ಣಿನ ಭಾಗ. ಇದರ ನಿರ್ಲಿಂಗ ಭಾಗವನ್ನು ಕವಕಜಾಲ ಎಂಬುದಾಗಿ ಕರೆಯುತ್ತಾರೆ. ಈ ಕವಕ ಜಾಲ ಮಣ್ಣಿನಲ್ಲಿಯೋ, ಕೊಳೆತ ಮರಗಿಡಗಳಲ್ಲಿಯೋ ಅಡಗಿರುತ್ತವೆ. ಇಂಥ ಬೂಸ್ಟಿನ ಬೆಸಿಡಿಯೋ ಬೀಜಾಣುಗಳು ಕಾಲಕ್ರಮೇಣ ಮೊಳೆತು ಕವಕಜಾಲವನ್ನು ಪಡೆಯುತ್ತವೆ. ಇವು ಏಕಕೋಶ ಬೀಜಯುಕ್ತವಾಗಿ ಕೆಲವು ಕಾಲ ಹಾಗೆಯೇ ಇರುತ್ತವೆ. ಅನಂತರ ಅನುಷಂಗಿಕ ಕವಕಜಾಲಗಳ ಪರಸ್ಪರ ಕೂಡುವಿಕೆಯಿಂದ ದೇಹದ ಭಾಗ ವೃದ್ಧಿಹೊಂದುತ್ತದೆ. ನಿರ್ಲಿಂಗ ಭಾಗದ ಕವಕಜಾಲ ದಾರದಂತಿದ್ದು ಶಾಖೋಪಶಾಖೆಗಳಾಗಿ ಕವಲೊಡೆದಿರುತ್ತದೆ. ವಂಶಾಭಿವೃದ್ಧಿ ವೇಳೆಯಲ್ಲಿ ಬೀಜಾಣು ತಂತುಗಳು ಉಂಗುರಾಕಾರವನ್ನು ಪಡೆಯುತ್ತವೆ. ಇಂತಹ ಉಂಗುರಾಕೃತಿಯ ಅಣಬೆಗಳನ್ನು 'ಕಿನ್ನರ ನೃತ್ಯರಂಗ' ಎಂಬುದಾಗಿ ಕರೆಯುತ್ತಾರೆ. ಮರಾಸ್ಮಿಯಸ್ ಒರಿಡೆಸ್, ಲೆಪಿಯೋಟ ಲೋಲಿಬ್‌ಡೈಟಸ್, ಲೆಪಿಯೋಟ ಮಾರ್ಗನಿ, ಲೈಕೋಪರ್‌ಡಾನ್ ಜೆಮ್ಮೇಟಂ, ಅಗ್ಯಾರಿಕಸ್ ಪ್ಲಾತ್ತೊಮೈಸಿಸ್ ಮೊದಲಾದ ಪ್ರಬೇಧಗಳ ಅಣಬೆಗಳು ನೃತ್ಯರಂಗಾಕಾರದವು. ಮರಾಸ್ಮಿಯಸ್ ಒರಿಡೆಸ್ ಎಂಬ ಅಣಬೆ 400 ವರುಷ ಬದುಕಿದ್ದು ಪ್ರತಿವರುಷವೂ ಬೆಳೆಯನ್ನೀಯುತ್ತಿತ್ತು ಎಂಬುದಾಗಿ ಬಟ್ಲರ್ ಜೋನ್ಸ್ ಎಂಬಾತ 1940ರಲ್ಲಿ ತಿಳಿಸಿದ್ದ. ಭಾರತದ ಅಣಬೆಗಳು ಹೆಚ್ಚಾಗಿ ಕಾಲಿಕವಾದವು. ಇವುಗಳ ಜೀವಿತಾವಧಿ ಕೇವಲ ಕೆಲವು ದಿನಗಳಷ್ಟೆ. ದುಂಡಾಗಿಯೋ, ಮೊಟ್ಟೆಯಾಕಾರಾದ

ಲ್ಲಿಯೋ, ಸಣ್ಣ ಸಣ್ಣ ಗಂಟಿನಾಕಾರದಲ್ಲಿಯೋ ಅಣಬೆಗಳು ಬೆಳೆಯುವುದುಂಟು. ಸಾಮಾನ್ಯವಾಗಿ ಇಂಥವನ್ನು ಗುಂಡಿ ಅಣಬೆಗಳೆಂದು ಕರೆಯುತ್ತಾರೆ. ಉಂಗುರ, ಪದರು, ಗಂಟು ಮೊದಲಾದ ಆಕಾರಗಳಿಂದಾಗಿ ಅಣಬೆಗಳ ವರ್ಗೀಕರಣ ಸುಲಭವಾಗಿದೆ.

**ಕೊಳೆತ ಮೈಯ ಮೇಲೆ**

ಅಣಬೆಗಳು ಕೊಳೆತ ರಾಸಾಯನಿಕ ವಸ್ತು ಹಾಗೂ ಸತ್ತ ಪ್ರಾಣಿಗಳ ಮೇಲೆ ಹೊರವಾಗಿ ಬೆಳೆಯುತ್ತವೆ. ಪರ್ವತ ಪ್ರದೇಶಗಳಲ್ಲಿ, ಬೆಟ್ಟಗುಡ್ಡಗಳ ಬಯಲಿನಲ್ಲಿ, ಮಾನ್ಸೂನ್ ಕಾಡುಗಳಲ್ಲಿ ಇವು ಹೆಚ್ಚು. ವಲ್ವಾರಿಲ್ಲಾ ವಾಲ್ವೆಟಿ, ಮರಾಸ್ಮಿಯಸ್ ಒರಿಡೆಸ್ ಪ್ರಬೇಧಗಳು ಕೊಳೆತ ಪ್ರದೇಶ, ಗೊಬ್ಬರ ಮತ್ತು ರಾಸಾಯನಿಕ ವಸ್ತುಗಳ ಮೇಲೆ ಬೆಳೆಯುತ್ತವೆ. ಪುರೋಟಸ್ ಮತ್ತು ಲೆಂಟಿನಸ್ ಜಾತಿಯ ಅಣಬೆಗಳು ಬದನಿಕೆಗಳು. ಇವು ಮರಗಳ ಮೇಲೆ ಬೆಳೆಯುತ್ತವೆ. ಕೊಪ್ರಿನಸ್, ಮರಾಸ್ಮಿಯಸ್ ಮತ್ತು ಅಗ್ಯಾರಿಕಸ್ ಅಣಬೆಗಳು ಸೆಗಣಿಯ ಮೇಲೆ ಬೆಳೆಯುತ್ತವೆ. ಟ್ರೈಕೋಲೋನಾ ಪ್ರಬೇಧ ಹೆಚ್ಚಾಗಿ ಮರಳುಗಾಡಿನಲ್ಲಿ ಕಾಣಿಸುವ ಅಣಬೆ, ಉಷ್ಣಾಂಶ, ಮಣ್ಣಿನಲ್ಲಿರುವ ಶೈತ್ಯ ಮತ್ತು ದೊರಕುವ ಕೊಳೆತ ರಾಸಾಯನಿಕ ಅಂಶಗಳು ಅಣಬೆಗಳ ಬೆಳವಣಿಗೆಗೆ ಬಹು ಮುಖ್ಯವಾದವು. ಈ ರೀತಿಯ ಗುಣವಿರುವ ಜಾಗಗಳಲ್ಲಿ ಅಣಬೆ ಹೆಚ್ಚು.

ಅಣಬೆಗಳು ಹಲವು ಬಗೆಯಲ್ಲಿ ಉಪಯುಕ್ತವಾದವು ಎನ್ನಿಸಿದೆ. ಹಲವು ಜಾತಿಯ ಅಣಬೆಗಳು ತಿನ್ನಲು ಯೋಗ್ಯವಾದವು. ಇವುಗಳಿಂದ ರುಚಿಕರವಾದ ಪದಾರ್ಥ ವ್ಯಂಜಕಗಳನ್ನು ತಯಾರಿಸಬಹುದು. ರಶಿಯಾ ಮತ್ತು ಯುರೋಪಿನ ಕೆಲವು ಪ್ರದೇಶಗಳಲ್ಲಿ ಅಣಬೆಯಿಂದ ಉಪ್ಪಿನಕಾಯಿ ತಯಾರಿಸುತ್ತಾರೆ. ಆಗತಾನೆ ಕಿತ್ತು ತಯಾರಿಸಿದ ಅಣಬೆಯ ಭಕ್ಷ್ಯದಲ್ಲಿ ರುಚಿ ಹೆಚ್ಚು. ರುಚಿಕರವಾದ ಭಾತ್. ಫಲವ್, ಬಿರಿಯಾನಿಗಳ ತಯಾರಿಗೆ ಅಣಬೆಗಳನ್ನು ಬಳಸುವುದುಂಟು. ಮೆಕ್ಸಿಕೋ ದೇಶದಲ್ಲಿ ಬೆಳೆಯುವ



ಸಿಲೋಸೈಟಿ ಮೆಕ್ಸಿಕಾನಾ ಎನ್ನುವ ಜಾತಿಯಲ್ಲಿ ಹಲ್ಲೊಸಿನೊಜಿಕ್ ಎನ್ನುವ ರಾಸಾಯನಿಕ ವಸ್ತು ಇದೆ. ಈ ವಸ್ತುವನ್ನು ಮನೋರೋಗ ಚಿಕಿತ್ಸೆಯಲ್ಲಿ ಬಳಸುತ್ತಾರೆ. ಅಮಾನಿಟ ಮಸ್‌ಕೇರಿಯಾ ಎನ್ನುವ ಅಣಬೆಯನ್ನು ಕೆಲವು ಬಗೆಯ ಔಷಧ ತಯಾರಿಕೆಗೆ ಬಳಸಲಾಗುತ್ತಿದೆ. ಅಣಬೆಗಳಿಂದ ಜೀವಿರೋಧಕ ಆ್ಯಂಟಿಬಯೋಟಿಕ್‌ಗಳನ್ನು ತಯಾರಿಸುತ್ತಾರೆ. ಡಿಕ್ಲೋ ಸೈಬಿನ್. ಲಾಕ್ಟಾರಿವಿಯೋಲಿನ್ ಪ್ಲುರೋಟಿನ್ ಮುಂತಾದ ಆ್ಯಂಟಿಬಯೋಟಿಕ್‌ಗಳನ್ನು ವಿವಿಧ ಬಗೆಯ ಅಣಬೆಗಳಿಂದ ತಯಾರಿಸುತ್ತಾರೆ. ಆರ್ಮೆಲ್ಲೆರಿಯಾ ಮಿಲಿಯಾ, ಲೆಪಿಯೋಬಾಮಸಾಕಾಯ್ಡಿಯಾ, ಮರಾಸ್ಮಿಯಸ್ ಕಾಂಪೆನೆಲ್ಲಾ, ಲೆಂಡಿನಸ್ ಪುರೆಬ್ಲಿಸ್, ಲೆಂಟನಸ್ ಸಬ್‌ಮಿಡಸ್ ಮೊದಲಾದ ಅಣಬೆಗಳು ಕೆಲವು ಬಗೆಯ ಬ್ಯಾಕ್ಟೀರಿಯಾಗಳನ್ನು ನಾಶಪಡಿಸುವ ಸಾಮರ್ಥ್ಯ ಹೊಂದಿವೆ ಎಂದು ಕಂಡು ಹಿಡಿಯಲಾಗಿದೆ. ಅಗ್ಯಾರಿಕಸ್ ಕಂಪೆಸ್ಟ್ರಿಸ್ ಎನ್ನುವ ಅಣಬೆ ವಿಷಮ ಶೀತಜ್ವರ, ರಕ್ತದ ಒತ್ತಡ ಮುಂತಾದುವನ್ನು ಗುಣಪಡಿಸುವುದರಲ್ಲಿ ಯಶ

ಸ್ವಿಯಾಗಿದೆ. ಕೆಲವು ಅಣಬೆಗಳನ್ನು ಹೋಮಿಯೋಪತಿ ಔಷಧ ಪದ್ಧತಿಯಲ್ಲಿಯೂ ಬಳಸುತ್ತಾರೆ. ಕಾಡುಗಳಲ್ಲಿ ಬೆಳೆಯುವ ಮರಾಸ್ಮಿಯಸ್ ಕ್ರಿನಿಸ್ ಈಕ್ವಿ ಎನ್ನುವ ಅಣಬೆಯನ್ನು ಎಳೆಯದಾಗಿರುವಾಗ ದಾರದಂತಿರುವ ಅದರ ರೈಜೋಮಾರ್ಫದಿಂದ ಯುದ್ಧ ಸಮಯದಲ್ಲಿ ಗುಂಡಿಗಳನ್ನು ಹೊಲಿಯಲು ಉಪಯೋಗಿಸುತ್ತಿದ್ದರು ಎನ್ನಲಾಗಿದೆ.



ಅಣಬೆಯಲ್ಲಿ ಪೌಷ್ಟಿಕಾಂಶ ಅಧಿಕ ಇದರಲ್ಲಿರುವ ಪೌಷ್ಟಿಕಾಂಶವನ್ನು ತಾಜಾ ತರಕಾರಿಯಲ್ಲಿರುವ ಪೌಷ್ಟಿಕಾಂಶಕ್ಕೆ ಹೋಲಿಸಬಹುದಾಗಿದೆ. ಸುಮಾರು 100 ಗ್ರಾಂ ಅಣಬೆಯಲ್ಲಿ ಒಬ್ಬ ಆರೋಗ್ಯವಂತನಿಗೆ ಬೇಕಾಗುವಷ್ಟು (ಶೇ. 72-ಶೇ. 83) ಪೌಷ್ಟಿಕಾಂಶವು ಸಾರಜನಕ ಪ್ರೊಟೀನ್ ರೂಪದಲ್ಲಿ ಇರುವುದೆಂದು ಪ್ರಯೋಗಗಳಿಂದ ತಿಳಿದು ಬಂದಿದೆ. ಅಮೆನಿಟಾ ಪ್ರಭೇಧಕ್ಕೆ ಸೇರಿದ ಸುಮಾರು ಹನ್ನೆರಡು ಬಗೆಯ ಅಣಬೆಗಳು ತುಂಬಾ ವಿಷಯುಕ್ತವಾದವು ಎಂದು ಗುರುತಿಸಲಾಗಿದೆ. ಅಣಬೆಯ ಈ ವಿಷಕಾರಿ ಗುಣಗಳಿಂದಾಗಿ ಕೆಲವೆಡೆ ಇವನ್ನು ಕ್ರಿಮಿನಾಶಕಗಳಾಗಿಯೂ ಬಳಸುತ್ತಾರೆ. ಕೆಲವು ಜಾತಿಯ ಅಣಬೆಗಳಲ್ಲಿ ಮಸ್‌ಕಾರಿನ್, ಚೋಲಿನ್ ಮತ್ತು ಮೈಸೆಟೋ ಟ್ರೋಪಿನ್ ಮುಂತಾದ ಮತ್ತು ಬರಿಸುವ ವಸ್ತುಗಳಿರುವುದರಿಂದ ಮಾದಕ ಪೇಯ ತಯಾರಿಕೆಗೂ ಬಳಸುವುದುಂಟು. ಅಮಾನಿಟಾ ಪಾಂಥರೀನಾ, ರುಸುಲಾ ಎಮೆಟಿಕಾ, ಗೈರೊಮಿಟ್ರಾ ಎಸ್‌ಕ್ಯುಲೆಂಟಾ, ಸ್ಕ್ಲೆರೋಡರ್ಮಾ ಸೆಮಿಗ್ಲೋಬೆಲಾ, ಲಾಕ್ಟೇರಿಯಸ್ ವೆಲ್ಲಾರಿಸ್, ಲೆಪಿಯೋಟಾ ಎರಸ್‌ಟೇಟ, ಮರಾಸ್ಮಿಯಸ್ ಎರೆಸ್ ಇವು ವಿಷಕಾರಿ ಅಣಬೆಗಳು ಎಂಬುದಾಗಿ ಗುರುತಿಸಲಾಗಿದೆ.

**ನಮ್ಮಲ್ಲೇಕಿಲ್ಲ**

ಅಣಬೆ ಪೂರ್ಣ ಸಸ್ಯಾಹಾರಿ ವಸ್ತುವಲ್ಲ ಎನ್ನುವುದರಿಂದ ಭಾರತದಲ್ಲಿ ಸಂಪ್ರದಾಯಸ್ಥರು ಇದನ್ನು ಬಳಸಲು ಹಿಂದೇಟು ಹಾಕುತ್ತಾರೆ. ಈ ಕಾರಣದಿಂದ ಅಣಬೆಯ ವ್ಯವಸಾಯ ನಮ್ಮ ದೇಶದಲ್ಲಿ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿಲ್ಲ. ಅಣಬೆಯ ಒಟ್ಟು ಉತ್ಪಾದನೆ ಒಂದು ಮಿಲಿಯನ್ ಟನ್ ಆಗಿದ್ದು, ಇದರಲ್ಲಿ ನಮ್ಮ ದೇಶದಲ್ಲಿ ಬೆಳೆಯುವುದು ಕೇವಲ ಒಂದು ಸಾವಿರ ಟನ್ ಮಾತ್ರ. ತಿನ್ನಲು ಯೋಗ್ಯವಾದ ಹಲವು ಜಾತಿಯ ಅಣಬೆಗಳು ನಮ್ಮ ದೇಶದ ಹಲವೆಡೆ ಕಾಣಸಿಗುತ್ತವೆ. ಅವುಗಳಲ್ಲಿ ಅರ್ಮಿಲೆರಿಯಾ ಮಿಲಿಯಾ, ಬೆಲೆಟಸ್, ಕಾಂತ್ರಲ್ಲಸ್ ಸಿಬೇರಿಸ್, ಕಾಂತ್ರಲ್ಲಸ್ ಆರಾಂಸಿಕಸ್, ಕೊಲ್ಲಿಬಿಯಾ ಅಳ್ಬಿಮಿನೋಸಾ, ಕೊವಾಲು ಟ್ರೈಪಸ್ ಕೊಲ್ಬಿನಸ್ ಕೊಮೆಟಸ್, ಫಿಸ್ಟುಲಿನಾ ಬೆಪಾಟಿಕಾ, ಲಾಕ್ಟರಿಯಸ್ ಡೆಲಿಸಿಯೋಸಸ್, ಮರಾಸ್ಮಿಯಸ್ ಅರ್ಡಿಸ್ ಇವು ಮುಖ್ಯವಾದವು.

ಹೆಚ್ಚು ಖರ್ಚಿಲ್ಲದೆ, ನಾಲ್ಕು ಗೋಡೆಗಳ ನಡುವೆ ತುಸುವೇ ನೀರಿನ ನೆರವಿನಿಂದ ಅಣಬೆಯನ್ನು ಬೆಳೆಯುವ ಬಗ್ಗೆ ಬೆಂಗಳೂರು ಸನಿಹದ ಹೆಬ್ಬಾಳ ಕೃಷಿ ವಿಶ್ವವಿದ್ಯಾನಿಲಯ ಯಶಸ್ವೀ ಪ್ರಯೋಗವೊಂದನ್ನು ನಡೆಸಿದೆ. ಈ ಪ್ರಯೋಗಕ್ಕಾಗಿ ಬೆಂಗಳೂರು ಜಿಲ್ಲೆಯ ನೆಲಮಂಗಲ ಹೋಬಳಿಯ ಒಂಬತ್ತು ಹಳ್ಳಿಗಳನ್ನು ಆಯ್ಕೆ

# ಅಮೆರಿಕದ ಭಿಕ್ಷುಕರು

"ಅಮೆರಿಕಾದಲ್ಲಿ ಭಿಕ್ಷುಕರೇ ಇಲ್ಲ ಎಂದು ಹೇಳುವುದು ನಿಜವಲ್ಲ. ಹಾಗೆ ಹೇಳುತ್ತಿದ್ದವರು ಸುಳ್ಳು ಪ್ರಚಾರಕರಷ್ಟೆ" - ಈ ಗಂಭೀರ ಆರೋಪ ಮಾಡಿದವರು ಈಚೆಗೆ ತಾನೇ ಅಲ್ಲಿಯ ಪ್ರವಾಸ ಮಾಡಿ ಬಂದ ನನ್ನ ಹಿರಿಯ ಸ್ನೇಹಿತರೊಬ್ಬರು. ನಾನು ಹಲವು ಬಾರಿ ಹೋದಾಗಲೂ ಭಿಕ್ಷುಕರನ್ನು ಕಂಡಿರಲಿಲ್ಲ; ಆದ್ದರಿಂದ ಈ ಹೇಳಿಕೆ ನನಗೂ ಆಶ್ಚರ್ಯವನ್ನುಂಟುಮಾಡಿತು. ತಾವು ಹೇಳಿದ್ದನ್ನು ಸಾಕ್ಷಿಸಮೇತ ವಿವರಿಸುವಂತೆ ಕೇಳಿದೆವು. ಅವರು ಗಂಭೀರವದನರಾಗಿ ಹೇಳಿದರು. - "ನಮ್ಮಲ್ಲಿಯ ಭಿಕ್ಷುಕರನ್ನು ಏನೂ ಕೊಡದೆ ಕಳುಹಿಸಬಹುದು. ಬೈದುಕೊಂಡಾದರೂ ಮುಂದೆ ಹೋಗುತ್ತಾರೆ. ಅಲ್ಲಿಯವರು ಹಾಗಲ್ಲ; ಕೊಟ್ಟರೇ ಸರಿ, ಇಲ್ಲವಾದರೆ ಮುಂದಕ್ಕೆ ಹೋಗುವುದಕ್ಕೆ ಬಿಡುವುದಿಲ್ಲ. ಉದಾಹರಣೆಗೆ ಮುಖ್ಯ ಹೆದ್ದಾರಿಗಳಲ್ಲಿರುವ Toll ಗಳು ೩೦ ಅಥವಾ ೪೦ ಸೆಂಟ್‌ಗಳನ್ನು ಅವು ಹಿಡಿದುಕೊಂಡಿರುವ ಭಿಕ್ಷಾ ಪಾತ್ರೆಗೆ ಹಾಕಿದರೆ ಮಾತ್ರ ದಾರಿಗೆ ಅಡ್ಡವಿರುವ ಪಟ್ಟಿ ಮೇಲೆ ಹೋಗಿ Thanks ಎಂದು ಹಸಿರು ದೀಪ ಬರುತ್ತೆ;

ಮತ್ತೊಂದು ಉದಾಹರಣೆ ಟಿಪ್ಸ್! ಯಾವ ಹೋಟೆಲಿನಲ್ಲಾಗಲೀ, ಟ್ಯಾಕ್ಸಿ ಸವಾರಿ ಮಾಡಿದ ಮೇಲಾಗಲಿ ಶೇಕಡ ೧೦ ರಷ್ಟು ಟಿಪ್ಸ್ ಕೊಟ್ಟೇ ತೀರಬೇಕು. ಇಲ್ಲವಾದರೆ ಸಂಬಂಧಪಟ್ಟ ತಿಂಡಿ ಸರಬರಾಜು ಮಾಡಿದವನಾಗಲಿ, ಟ್ಯಾಕ್ಸಿ ಡ್ರೈವರ್ ಆಗಲಿ ನಿಮ್ಮನ್ನು ತಿಂದುಹಾಕುವ ಹಾಗೆ ದುರುಗುಟ್ಟಿ ನೋಡುವುದಲ್ಲದೆ ನಾವು ಬಹಳ ಕೀಳು ಜನ ಎಂದು ಅವರ ಮುಖದಲ್ಲೇ ತಿಳಿಸುತ್ತಾರೆ. ಇದೆಲ್ಲಾ ಭಿಕ್ಷೆಯಲ್ಲದೆ ಮತ್ತೇನು?"

● ಎಸ್.ಸಿ. ಶಿವನಂಜಪ್ಪ

## ಧರೆಗಿಳಿದು ಬರುವ

# : ದೇವಲೋಕದ ಹೂಗಳು :

ರವಿ ಬೆಳಗೆರೆ

ದೇವಲೋಕದ ಹೂವು ನಸುನಗುತ್ತ ಧರೆಗಿಳಿದು ಬಂದು ಮನುಕುಲದ ಮುಂದು ಪಂಕ್ತಿಗೆ ಅಣಿಯಾದಾಗ ಅದಕ್ಕೆ ನಾವಿಡುವ ಹೆಸರು 'ತಾಯಿ'.

ಆ ತನಕ ಎಂದೂ ಕಾಣದ ಗುಪ್ತ ಚೇತನವೊಂದು ಬಸಿರ ಚೀಲದಿಂದ ಜಾರಿ ಹೊರಬಿದ್ದು ಜಗತ್ತಿನ ಜೀವಜಾಲದೊಳಕ್ಕೆ ಸಾಗಿ ಬರುವ ಮೋದ! ಅದು ಅದ್ಭುತವಾದದ್ದು. ಹಾಗೆ ಬಂದ ಮತ್ತೊಂದು ಜೀವಕ್ಕೆ ನಾವನ್ನುವುದು 'ಮಗು!'

ಈ ತಾಯಿ-ಮಗುವಿನ ಸರಪಳಿ ನಿತ್ಯ ನೂತನವಾಗಿ, ನಿರಂತರವಾಗಿ ಸಾಗಿ ಬಂದ, ಬರುತ್ತಿರುವ ಒಂದು ಅಚ್ಚರಿ. 'ಜಗತ್ತಿನಲ್ಲಿ ಕ್ಷಣಕ್ಕೊಂದು ಮಗುವಿನ ಜನನವಾಗುತ್ತಿದೆ' ಎಂದು ಜನಸಂಖ್ಯಾ ನಿಯಂತ್ರಣ ಸಂಸ್ಥೆಗಳು ಹೇಳಿಕೆ ಕೊಡುತ್ತಿರುವ ಸಂದರ್ಭದಲ್ಲೇ 'ಈ ಜಗತ್ತಿಗೆ ಪ್ರತಿ ಕ್ಷಣವೂ ಎರಡು ದೇವಲೋಕದ ಹೂಗಳು ಧಾವಿಸುತ್ತಿವೆ' ಎಂಬ ಸತ್ಯ ಅನುಭೂತಿಗೆ ಬರುತ್ತದೆ. ಪ್ರತಿ ಮಗುವೂ ಒಂದು ನೂತನ ಸೃಷ್ಟಿ. ಅದು ತನ್ನೊಂದಿಗೇ



ಚಿತ್ರ: ಪ್ರಭಾಕರ ಹಿರೇಮಠ

ಒಂದು ತಾಯಿಯನ್ನು ಸೃಷ್ಟಿಸುತ್ತದೆ.

ಮಾತು ಜನಸಂಖ್ಯೆಯತ್ತ, ಆಹಾರ ಸಮಸ್ಯೆಯತ್ತ, ಸಂಭವಿಸ ಬಹುದಾದ ಮೂರನೇ ಜಾಗತಿಕ ಯುದ್ಧದತ್ತ ಹೊರಳುವುದು ಬೇಡ. ದೇವಲೋಕದ ಹೂವಿನ ಮುಗುಳ್ನಗುವಿನ ಬಗ್ಗೆ ಮಾತನಾಡುವಾಗ ಅಳು, ಆಕ್ರಂದನ, ಬಾಂಬುಗಳ ಸಿಡಿತದ ಸದ್ದು ಬೇಡ.

ಒಂದು ಮಗು ಜನಿಸಿದೆ. ಮತ್ತು ಒಬ್ಬ ತಾಯಿ ಸೃಷ್ಟಿಯಾಗಿದ್ದಾಳೆ. ಅವರಿಬ್ಬರನ್ನೂ ಸ್ವಾಗತಿಸಿ, ಕರೆತಂದು, ಬೆಚ್ಚಗಿನ ಮನೆ ಕೊಟ್ಟು, ಮನಸ್ಸಿಗಿಷ್ಟು ನೆಮ್ಮದಿ ನೀಡಿ ಸಾಕಿಕೊಳ್ಳುವ ಸಹನೆ ನಮಗಿದೆಯೇ? ಅಂತಹ ಚೈತನ್ಯ ಇವತ್ತಿನ ವಾತಾವರಣಕ್ಕಿದೆಯೆ? ಇದು ಪ್ರಶ್ನೆ.

ಅದೊಂದು ಕಾಲವಿತ್ತು.

ಕರೆಸಿದ ಸೂಲಗಿತ್ತಿ ಅನುಭವದ ಹೆಮ್ಮೆಯನ್ನೆಲ್ಲ ಸೆರಗಿಗೆ ಕಟ್ಟಿಕೊಂಡು ಬೀಗುತ್ತ ಬಸುರಿ ಹುಡುಗಿಗೆ ಧೈರ್ಯ ತುಂಬಿ, ಉಳಿದದ್ದನ್ನು ಅವಳ ಅತ್ತೆ, ಮಾವ, ಗಂಡ ಮುಂತಾದ ಬಳಗಕ್ಕೆಲ್ಲ ಹಂಚಿ ನೋವು ತಿನ್ನುವ ಹುಡುಗಿಯನ್ನು ಕೋಣೆಗೆ ಕರೆದೊಯ್ಯುತ್ತಾಳೆ. ಹೊರಗೆ ಹಜಾರದಲ್ಲಿ ಗಂಡ ಶತಪಥಿಸುತ್ತಾನೆ. ಎಷ್ಟೋ ಹೊತ್ತಿನ ಯುದ್ಧದ ನಂತರ ಒಂದು ಚೀತ್ಕಾರ! ಹಿಂದೆಯೇ ಎಳಸು ದನಿಯ ಅಳು. ನೆಮ್ಮದಿಯ ಕಿರುಲುವಿಕೆ. ಸರಿಯುವ ಕೋಣೆ ಬಾಗಿಲಿನಿಂದ ಬೆವೆತ ಹಣೆ ಹೊರಗಿಕ್ಕುವ ಸೂಲಗಿತ್ತಿ ಕಾತರಗೊಂಡ ಬಳಗದವರನ್ನು ನಗುತ್ತ ನೋಡಿ 'ಮಗ ಹುಟ್ಟಿದ' ಅನ್ನುತ್ತಾಳೆ. ಒಂದು ಆನಂದದ ಗಾಳಿಯಲೆ ಅಲ್ಲಿ ಬೀಸಿ ನಲಿಯುತ್ತದೆ.

ಅನುಭವವೇ ಮೂರ್ತಿವೆತ್ತಂತ ನಿಂತ ಸೂಲಗಿತ್ತಿ ಎಲ್ಲವನ್ನೂ ಮಾಡಿ, ಮಗುವನ್ನು ಬಿಳಿಯ ವಸ್ತ್ರದಲ್ಲಿ ಸುತ್ತಿ ತಂದು ತಾಯಿ ಮಗ್ಗುಲಿಗೆ ಮಲಗಿಸಿ 'ನೋಡು' ಎನ್ನುತ್ತಾಳೆ. ನೋವನ್ನೆಲ್ಲ ಮರೆತು, ತಾಯಿಯಾಗುವ ಸಂಭ್ರಮ ತಂದಿತ್ತ ತನ್ನ ಕಂದಯ್ಯನನ್ನು ನೋಡಿ ಹುಡುಗಿ ಅಮ್ಮನಾಗುತ್ತಾಳೆ. ಸಡಗರಿಸಿ ಒಳ ಬರುವ ಅತ್ತೆ ಅಜ್ಜಿಯಾಗುತ್ತಾಳೆ. ಮಾವ ಅಜ್ಜನಾಗುತ್ತಾನೆ, ಗಂಡನಿಗೆ ಅಪ್ಪನಾದ ಹೆಮ್ಮೆ! ಒಂದು ಪುಟ್ಟ ಜೀವ ಏನೆಲ್ಲ ಬದಲಾವಣೆ ತಂದು ಬಿಡುತ್ತದೆ. ಮತ್ತೊಂದಿಷ್ಟು ದಿನ ಸಾಕು, ಮನೆಯ ಅಂಗಳದ ತುಂಬೆಲ್ಲ ಕಂದಯ್ಯನ ಅಂಬೆಗಾಲಿನ ಲಿಲ್ಲಿ ಹೂವು ಅರಳುತ್ತವೆ.

ಆದರೆ ಇವತ್ತು ಇದೆಲ್ಲ ಇಷ್ಟು ಸರಳ ಇಲ್ಲ.

ಎಲ್ಲವನ್ನೂ ಸರಳಗೊಳಿಸಲು ಹೊರಟ ವಿಜ್ಞಾನಕ್ಕೆ, ಮೆಡಿಕಲ್ ಸೈನ್ಸಿಗೆ ಅಡ್ಡವಾಗಿ ಕಾಲುಕೊಟ್ಟು ಕೆಡವಿದ 'ಎಕಾನಮಿಕ್ಸ್'

ಆಗಸದ ಅಂಗಳದಿ
ತೇಲುವ ಚಂದಿರನ
ತೋರಿಸಿ
ವೈ ಮರೆಸಿ
ಅಳುವ ಮಗುವಿಗೆ ತುತ್ತು
ತಿನಿಸುವ
ತಾಯೊಬ್ಬಳು!

* * *

ಅಳುವ ಮಗುವನು
ತಂದು ಗುಡಿಸಲ ಅಂಗಳಕಿಟ್ಟು
ಚಂದಪ್ಪನನು ತೋರಿ
ಒಂದು ಕ್ಷಣಕಾದರೂ
ಅಳುವ ಮರೆಸುವ
ತಾಯಿ ಮತ್ತೊಬ್ಬಳು!

ರವೀ

ನಮ್ಮ ದೇವಲೋಕದ ಹೂಗಳನ್ನು ನಸು ನಗಲು ಬಿಡುತ್ತಿಲ್ಲ. ಜಾತಕ ಸರಿಹೊಂದಿದೆ ಎಂಬ ಸೂಚನೆಯ ಬೆನ್ನ ಹಿಂದೇ ವರದಕ್ಷಿಣೆ, ಮದುವೆಯ ದಿನಾಂಕ, ಹುಡುಕಬೇಕಾದ ಮನೆ, ಅತ್ತೆಕಾಟ, ಮಾವನ ಖಾಯಿಲೆ, ಮೈದುನರ ಓದು, ಮೊದಲ ದೀಪಾವಳಿಯ ಖರ್ಚು... ಮುಂತಾದ ಎಲ್ಲವುಗಳ ಲೆಕ್ಕಾಚಾರವಾಗಿ, ಎಲ್ಲವೂ ತಪ್ಪುಗಂಟಾಗಿ ಹೋಗುತ್ತವೆ. ಮುಂದೆ ಹುಡುಗಿ ಬಸುರಿಯಾಗಿದ್ದಾಳೆಂಬ ಸುದ್ದಿ ಹರಡಿದ ಕೂಡಲೇ ಹುಟ್ಟುವ ಮಗುವು ಗಂಡೋ-ಹೆಣ್ಣೋ.... ಎಂಬ ಜಿಜ್ಞಾಸೆ, ಪರೀಕ್ಷೆಗಳು, ಲಿಂಗ ಖಾತರಿಗಳು, ಆದಾದ ಮೇಲೆ ಮಗುವನ್ನು ಕರೆತರಬೇಕೋ, ನೀಗಿಕೊಳ್ಳಬೇಕೋ ಎಂಬ ನಿಷ್ಕರ್ಷೆ. ಸರಿ, ಮಗುವನ್ನು ಕರೆತರುವುದೇ ಖಾತರಿಯಾದಾಗ ಕುಲಾವಿ, ಸ್ವೆಟ್ಟರ್ರು, ಕಾಲುಚೀಲ, ಬಯಕೆ ಮುಂತಾದವುಗಳ ಸಡಗರ. ತಿಂಗಳಿಗೊಮ್ಮೆ ಖಾಸಗಿ ಡಾಕ್ಟ್ರಮ್ಮಗಳಿಗೆ ಕಾಸುಕೊಟ್ಟು 'ಚೆಕಪ್ಪು' ಮಾಡಿಸಿಕೊಂಡು ಅವರು ಕೊಡುವ ಡೇಟಿಗೆ ಮಗುವನ್ನೆತ್ತಿ ಕೊಳ್ಳಲು ಹುಡುಗಿ ಸಿದ್ಧಳಾಗಬೇಕು.

ಈಗ ಸೂಲಗಿತ್ತಿಯ ಭರವಸೆಗಳು ಬೇಡ. ಹೊರಗೆ ಹಜಾರದಲ್ಲಿ ಕೂತವರಿಗೆ ಅಂಥಾ ಕಾತರಗಳಿಲ್ಲ. ಏಕೆಂದರೆ ಎಲ್ಲವೂ ಪೂರ್ವ ನಿಯೋಜಿತ, ನಿರ್ಧಾರಿತ! 'ಹುಟ್ಟುವದು ಗಂಡೇ' ಎಂದು ಲಿಂಗ ಪರೀಕ್ಷೆ ಮಾಡಿದ ಯಂತ್ರ ಹೇಳಿದೆ. ಯಂತ್ರಗಳು ಸುಳ್ಳು ಹೇಳುವುದಿಲ್ಲ. 'ಸರಳ ಹೆರಿಗೆ' ಎಂಬ ಶಬ್ದಕ್ಕೆ ಮೆಡಿಕಲ್ ಸೈನ್ಸು ಕೊಡತು ಹಿಡಿದಿರುವ ಪರ್ಯಾಯ ಶಬ್ದದಂತಿರುವ 'ಸಿಜೇರಿಯನ್' ಇರುವುದರಿಂದ ಹುಡುಗಿಗೆ ಹೆರಿಗೆ ನೋವಿನ ಭಯವೂ ಇಲ್ಲ. ಅರಿವಳಿಕೆ ಮದ್ದು ತೆಗೆದುಕೊಂಡ ಮೇಲೆ ಆಕೆಗೂ ಸೃಷ್ಟಿಕ್ರಿಯೆಗೂ ಸಂಬಂಧ ತಪ್ಪಿಹೋದಂತೆಯೇ! ಮುಂದೆ ಎಷ್ಟೋ ಹೊತ್ತಿಗೆ ಎಚ್ಚರ. ಪಕ್ಕದಲ್ಲಿ ಮಗುವಿಲ್ಲ. ಅದು ಇಂಟೆನ್ಸಿವ್ ಕೇರ್ ಯೂನಿಟ್‌ನಲ್ಲಿ ಗ್ಲೂಕೋಸ್ ನೀರು ಕುಡಿಯುತ್ತ ಮಲಗಿದೆ.

ಕೆಲವು ದಿನಗಳ ನಂತರ ನರ್ಸಿಂಗ್ ಹೋಮಿನ ಬಿಲ್ ಚುಕ್ತಾ ಮಾಡಿ ಮಗುವನ್ನೆತ್ತಿಕೊಂಡು ಬಂದು ಬಿಟ್ಟರೆ ಮುಗಿಯಿತು. ಮುಂದಿನದೆಲ್ಲ 'ಆಯಾ' ಮತ್ತು ಮಕ್ಕಳ ರೋಗ ತಜ್ಞರುಗಳ ಜವಾಬ್ದಾರಿ. ವಿಟಮಿನ್ನು, ಸಿರಪ್, ಟಾನಿಕ್ ಮತ್ತು ಫೀಡಿಂಗ್ ಬಾಟಲಿಗಳ ಮಧ್ಯೆ ಆಡುತ್ತ ಮಗು ಬೆಳೆದು ಬಿಡುತ್ತದೆ. "ಆಲ್ ಈಸ್ ವೆಲ್!"

ಇದು ಶ್ರೀಮಂತ ಹಾಗೂ ಮೇಲ್ಮಧ್ಯಮ ವರ್ಗದ ತಾಯ್ತನದ ಕಥೆಯಾಗಿರಬಹುದು. ಆದರೆ ಅತ್ಯಂತ ದಾರುಣ ಮತ್ತು ಯಾತನಾಮಯ ತಾಯ್ತನವನ್ನು ಭಾರತದಂಥ ದೇಶದಲ್ಲಿ ಕೋಟ್ಯಂತರ ಜೀವಿಗಳು ಅನುಭವಿಸುತ್ತಿವೆ. ಪ್ರಸವ ವೇದನೆ ಆರಂಭವಾಗುವ ಕಡೆಯ ಘಳಿಗೆಯ ತನಕ ತನ್ನ ತುತ್ತಿನ ಚೀಲ ತುಂಬಿಕೊಳ್ಳಲು ಹೆಣಗುವ ರಸ್ತೆಬದಿಯ ಕೂಲಿ ಹೆಂಗಸಿಗೆ ಚೆನ್ನಾಗಿ ಗೊತ್ತು ವೇದನೆಯೆಂದರೇನೆಂದು! ಸರಕಾರಿ ಆಸ್ಪತ್ರೆಯ ಕಾರಿಡಾರುಗಳಲ್ಲೇ ಹುಟ್ಟಿ ನೆಲದ ತಂಪನ್ನು ತೆಪ್ಪಗೆ ಸಹಿಸಿಕೊಳ್ಳುವ ಮಕ್ಕಳಿಗೆ ತೊಟ್ಟಿಲು ಅಪರಿಚಿತ. ಜೋತು ಬಿದ್ದ ತಾಯ ಮೊಲೆಯಲ್ಲಿ ಹಾಲೂಡದಿರುವಾಗ ನುಗ್ಗಿ ಬರುವ ಅಳುವನ್ನು ಮರೆತು ಅವು ರಸ್ತೆಯಲ್ಲಿ ಓಡುವ ಕಾರಿನ ಹಾರನ್ ಸದ್ದಿಗೆ ಅಚ್ಚರಿಗೊಂಡೋ, ಭಯಪಟ್ಟೋ ಕಣ್ಣರಳಿಸುತ್ತವೆ. ವಿಟಮಿನ್ನು, ಕ್ಯಾಲೋರಿಗಳು ಮತ್ತು ವ್ಯಾಕ್ಸೀನುಗಳ ಪರಿಚಯವೇ ಇಲ್ಲದೆ ಫುಟ್‌ಪಾತುಗಳ ಧೂಳಿನಲ್ಲಿ ಬೆಳೆಯುತ್ತವೆ. ರಾತ್ರಿ ಸೋತು ಬರುವ ತಾಯಿಗಾಗಿ ಆಡುತ್ತ ಆಡುತ್ತ ಕಾದು ನಿದ್ದೆ ಹೋಗುತ್ತವೆ. ನಾಶವಾಗುವ ತಾಯ್ತನದ ಮಾಧುರ್ಯ ಮತ್ತು ನೇರವಾಗಿ ಮುಪ್ಪಿಗೆ ಸಾಗಿ ಹೋಗುವ ಬಾಲ್ಯಗಳು ಭಾರತದ ಬೀದಿಗಳ ತುಂಬ ಕಂಡುಬಂದಾವು.



ಚಿತ್ರ: ಗುರುರಾಜ ಜೋಶಿ

ತಾಯಿ ಮಗುವಿನ ಲೋಕದ ವಿವರಗಳು ನಿಜಕ್ಕೂ ಅಚ್ಚರಿ, ಆಸಕ್ತಿ ಮೂಡಿಸುವಂಥವು. ಜಾತಿ, ವರ್ಗ, ಬಣ್ಣ, ಭಾಷೆ ಯಾವುದೇ ಆಗಿರಲಿ. ಎಲ್ಲ ತಾಯಂದಿರ ಅನುಭವಕ್ಕೂ ಒಂದೇ ಸಂತಸದ ಲೇಪ. ಎಲ್ಲ ಮಕ್ಕಳಿಗೂ ಅದೇ ಆನಂದದ ಔತಣ. ಹೆರಿಗೆಯಾದ ನಂತರ ಮಗುವನ್ನು ತಂದು ಮಗ್ಗುಲಿಗೆ ಮಲಗಿಸಿದಾಗ ತನ್ನ ಸೃಷ್ಟಿಯನ್ನು ಕಂಡು ಆಕೆ ಅನುಭವಿಸುವ ಕೌತುಕವನ್ನು ಆಕೆಯೇ ವರ್ಣಿಸಬೇಕು. ಪಿಳಿಪಿಳಿ ಕಣ್ಬಿಡುತ್ತ, ಬೆರಳು ಚೀಪುವ, ಗೊಮ್ಮಟೆ ಕಾಲುಗಳನ್ನು ಪಟಪಟನೆ ಝಾಡಿಸುವ, ಬಿಳ್ಳೆಯಂಗಲದ ಪುಟ್ಟ ಬಾಯನ್ನು ಹಕ್ಕಿಯಂತೆ ತೆರೆಯುವ ಮಗುವಿನಲ್ಲಿ ಆಕೆ ನೂರೆಂಟು ಸಂತಸ ಹುಡುಕುತ್ತಾಳೆ. ಹೋಲಿಕೆಗಳಿಗಾಗಿ ತಡಕುತ್ತಾಳೆ. ಅಪ್ಪನ ಕಣ್ಣು, ಅಜ್ಜನ ಕಿವಿ, ತನ್ನ ತಾಯಿಯ ಹಣೆ, ಅರೆ...... ತನ್ನದೇ ಮೂಗು! ಬಣ್ಣ ಯಾವುದು ಬಂದೀತು? ಕಣ್ಣು ಜೇನು ಬಣ್ಣದ್ದವಾದರೆ ಚೆಂದ, ನಕ್ಕರೆ ಕೆನ್ನೆ ಮೇಲೆ ಗುಳಿ ಮೂಡುತ್ತದೆಯೆ? ಆಹಾ.... ಆಕಳಿಸಿದಾಗಲಂತೂ ಭುವನ ಭಾಂಡಾರ ತೋರಿಸಿದ ಕೃಷ್ಣ ಪರಮಾತ್ಮನದೇ ಹೋಲಿಕೆ! ಅವಳ ಆನಂದಕ್ಕೆ ಸಾಟಿಯಿಲ್ಲ. ಮಗುವಿನ 'ಕೆಂಬಾರ' ಕಂಡು ಕೊಂಚ ಅಂಜುತ್ತಾಳೆ. 'ಹೆದರುವ ಕಾರಣ ವಿಲ್ಲ, ಎಲ್ಲ ಮಕ್ಕಳಿಗೂ ಹೀಗೆ ಕೆಂಪಗಿರುತ್ತದೆ ಮೈಯಿ. ಕೆಲದಿವಸಗಳ ನಂತರ ಸರಿ ಹೋಗುತ್ತೆ'' ಎಂದು ನರ್ಸ್ ಹೇಳುವ ಮಾತು ಸಾಂತ್ವನವೀಯುತ್ತದೆ.

ಸಾಮಾನ್ಯವಾಗಿ ಭಾರತದಲ್ಲಿ ಹುಟ್ಟುವ ಮಗುವಿನ ತೂಕ ಆರು ಪೌಂಡುಗಳಷ್ಟಿರುತ್ತದೆ. ಆರೋಗ್ಯವಂತ ತಾಯಿ ಒಂಬತ್ತು ಪೌಂಡಿನ ಮಗುವನ್ನು ಹೆರಬಲ್ಲಳು. ತಾನು ಹೆತ್ತ ಮಗುವಿನ ತೂಕವೆಷ್ಟಿದೆಯೋ? ಗರ್ಭದಲ್ಲಿದ್ದಾಗ ಅದೆಂಥ ಭಾರವಿತ್ತು.... ಈಗ? ಇಂತಹ ಪ್ರಶ್ನೆಗಳು ಕಾಡುತ್ತಿರುವಾಗಲೇ ತಾಯಿಗೆ ತೂರಿ ಬರುತ್ತದೆ ನಿದ್ದೆ! ಶತಮಾನಗಳಾದುವೇನೋ ಮಲಗಿ ಎಂಬಂತಹ ಆಯಾಸ! ಮೈಯ್ಯೆಲ್ಲ ಹಿಂಡಿ ಹಿಪ್ಪೆ ಮಾಡಿ ಹಾಕಿದ ನಿಶ್ಶಕ್ತಿ. ತನಗೆ ಅರಿವಿಲ್ಲದೆ, ಮಗುವನ್ನು ಮರೆತು ನಿದ್ದೆಗೆ ಜಾರುತ್ತಾಳೆ. ಕೆಲವು ಗಂಟೆಗಳ ನಂತರ ದಣಿವಿಳಿದು ಕೊಂಚ ಚೇತನ ಮೂಡುತ್ತದೆ. ನೋಡಲು ಬರುವ ಬಂಧುಬಳಗ,ಗೆಳತಿಯರಿಗೆಲ್ಲ ತನ್ನ ಬಿಳಿಚಿದ ತುಟಿಗಳಲ್ಲಿ ನಗೆ ಹಂಚಿ ನಲಿಯುತ್ತಾಳೆ. ಆದರೆ ಅಲ್ಲಿಗೆ ಯಾತನೆ ಮುಗಿಯಲಿಲ್ಲ.

ಪ್ರಸವದ ನೋವಿಗಿಂತಲೂ ನೋವೇ? ಎಂಬ ಪ್ರಶ್ನೆಗೆ ತಾಯಿಯಾದವಳು 'ಹೌದೆಂದು' ಉತ್ತರ ಕೊಡುವುದು ಪ್ರಸವದ ನಂತರ ಮರುಕಳಿಸುವ ಯಮಯಾತನೆ ಅನುಭವಿಸಿದಾಗ. ಪ್ರಸವದ ನಂತರ ಗರ್ಭಕೋಶ ತನ್ನೊಳಗಿನ ನೆತ್ತರ ಗಡ್ಡೆಗ

ಳನ್ನು ಹೊರಹಾಕುವಾಗ ತಾಯಿಜೀವ ತಲ್ಲಣಿಸಿ ಹೋಗುತ್ತದೆ. ಅದೆಲ್ಲವನ್ನೂ ಮರೆಸುವುದು ಕಂದನ ಮುಗುಳ್ನಗು ಮತ್ತು ಮುದ್ದಾದ ಅಳು. ವೈದ್ಯರು ಬಂದು ಔಷಧಿ ಕೊಡುತ್ತಾರೆ. ನರ್ಸುಗಳು ಶುಶ್ರೂಷೆ ಮಾಡುತ್ತಾರೆ. ಅನುಭವಸ್ಥೆಯಾದ ಅಮ್ಮ ಪಕ್ಕದಲ್ಲಿ ನಿಂತು ಹಣೆ ತಟ್ಟುತ್ತಾಳೆ. ಎದುರಿಗೆ ನಿಂತ ಗಂಡ ಅಸಹಾಯಕತೆ ಬೆರೆತ ಮರುಕದ ನಗೆ ನಗುತ್ತಾನೆ. ಅವಳು ಹೇಗೋ ನೋವು ಮರೆಯುತ್ತಾಳೆ.

ಇದೆಲ್ಲಾ ಆಸ್ಪತ್ರೆಯೊಳಗೆ! ಆದರೆ ಬೇಲಿ ಸಾಲಿನಲ್ಲಿ, ಕಾಡಿನ ಪೊದೆಗಳಲ್ಲಿ, ಬಸ್ಸಾಪುಗಳ ಮರೆಯಲ್ಲಿ, ದೀಪವಿಲ್ಲದ ಗುಡಿಸಲುಗಳಲ್ಲಿ ಇಂಥ ವೇದನೆಯನ್ನು ಒಬ್ಬಂಟಿಯಾಗಿ ಅನುಭವಿಸುತ್ತ ಬದುಕುವ ಜೀವಿಗೆ ಯಾರ ಸಾಂತ್ವನ? ಎಲ್ಲಿಯ ಶುಶ್ರೂಷೆ? ಅಲ್ಲಿ ಅವಳಿಗೆ ಒದಗುವ ಒಂದೇ ರಕ್ಷಣೆಯೆಂದರೆ ಮಗುವಿನ ಸಾಮೀಪ್ಯ ಮತ್ತು ತಾಯ್ತನದ ಸಂತಸ. ಅಷ್ಟೆ! ಆದರೆ 'ಫಿಲಾಸಫಿ'ಗೆ ಅರಿವಳಿಕೆಯ ಶಕ್ತಿಯುಂಟೆ?

ಪ್ರಸವವಾದ ಮೂರು ದಿನಗಳ ನಂತರ ತಾಯಿ ಉಣತೊಡಗುತ್ತಾಳೆ. ಒಳ್ಳೆಯ ಆಹಾರ ಬೇಕು. ತರಕಾರಿ, ಕಿತ್ತಳೆ, ಮೂಸಂಬಿ, ಸೇಬು, ಅನ್ನ, ಬಿಸಿಯಾದ ತಿಳಿಸಾರು, ಹಾಲು, ಖೀರು, ಹಾರ್ಲಿಕ್ಸು, ಬೋರ್ನ್‌ವಿಟಾ, ಪ್ರೋಟಿನ್ಯೂಲ್ಸ್.... ಏನೆಲ್ಲ ಬೇಕು. ಊಟವಾದ ಮೇಲೆ ಎಲೆ ಅಡಿಕೆ ಹಾಕಿಕೊಳ್ಳಬೇಕು. ಬಾಣಂತಿ ಸುಣ್ಣ ತಿನ್ನಬೇಕು, ಅದರಲ್ಲಿ ಕ್ಯಾಲ್ಸಿಯಂ ಇದೆ. ಮಗುವಿಗೂ ಒಳ್ಳೆಯದು. ಅದೆಲ್ಲ ನಿಜ... ಆದರೆ ಊಟವಾದ ಮೇಲೆಯೇ ತಾನೆ, ಎಲೆ ಅಡಿಕೆಯ ಮಾತು? ಕ್ಷಮಿಸಿ, ಮಾತು ಮತ್ತೆ ಗುಡಿಸಲುಗಳತ್ತ ಹೊರಳುತ್ತದೆ. ಎಷ್ಟೋ ದೇವಲೋಕದ ಹೂಗಳು ಅರಳಲಾಗದೆಯೇ ಮುರುಟಿ ಹೋಗುತ್ತವೆ. ಯಾವ ಲೇಹ್ಯ ತಿಂದರೆ ಒಳ್ಳೆಯದು, ಎಂಥ ಟಾನಿಕ್ಕಿನಲ್ಲಿ ಯಾವ್ಯಾವ ಕ್ಯಾಲೊರಿಗಳಿವೆ, ಲಿವರ್ ಎಕ್ಸ್‌ಟ್ರಾಕ್ಟ್‌ಗಳು, ವಿಟಮಿನ್ನು, ಐರನ್, ಮಿನೆರಲ್ ಮಾತ್ರೆಗಳು ಎಲ್ಲವೂ ಗುಡಿಸಲ ಜೀವಿಗಳಿಗೆ ನಿಲುಕದ ಮಾತುಗಳೇ. ಆಕೆ ತಿನ್ನುವ ಅನ್ನ ಮತ್ತು ನೀರು ಸಾರಿಗೆ ಸತುವಿಲ್ಲ. ಅವಳೆದೆಯಲ್ಲಿ ಹಾಲು ತುಂಬುವುದಿಲ್ಲ. ಎಷ್ಟು ದಿನಗಳಾದರೂ ನಿಲ್ಲದ ನೆತ್ತರ ಸ್ರಾವ ಆ ತಾಯಿಯನ್ನು ಎಲುಬಿನ ಗೂಡಾಗಿಸುತ್ತದೆ.

ಲೋಕವೇ ಹಾಗೆ. ಇಲ್ಲಿ ಪ್ರತಿಯೊಂದಕ್ಕೂ 'ಹಾಗೂ ಉಂಟು, ಹೀಗೂ ಉಂಟು!' ಏನಾದ್ರೂ ಸರಿ, ತಿನ್ನಲು ಸಿಕ್ಕರೆ ಸಾಕೆಂದು ಕಾಯುವ ಬಾಣಂತಿ ಒಂದೆಡೆಯಾದರೆ ಯಾವುದು ತಿಂದ್ರೆ ಏನಾದೀತೋ ಎಂದು ಆತಂಕಗೊಳ್ಳುವ ಹುಡುಗಿ ಮತ್ತೊಂದೆಡೆ. ಇತ್ತೀಚೆಗೆ ಬಾಣಂತಿ ಆಹಾರದ ಬಗ್ಗೆ ಮೊದಲಿನ ಮೂಢ ನಂಬಿಕೆಗಳು ದೂರವಾಗಿವೆ. ಆಕೆ ಕೇವಲ ಗೊಡ್ಡು ಸಾರು-ಅನ್ನ ತಿನ್ನಬೇಕೆಂಬ ನಂಬಿಕೆ ದೂರವಾಗಿ ಪ್ರಸವವಾದ ಮೂರು ದಿನಗಳ ನಂತರ ಏನನ್ನಾದರೂ ತಿನ್ನಬಹುದೆಂಬ ವಿಶ್ವಾಸ ಬಂದಿದೆ. ಅಂತೆಯೇ ಬಾಣಂತಿ ಕೋಣೆಯ ಹೆಸರಿನ ಕತ್ತಲ ಜೈಲಿನಿಂದ ತಾಯಿ-ಮಗು ಮುಕ್ತರಾಗಿ ಗಾಳಿ ಬೆಳಕು ದೊರಕುವ ವಿಶಾಲ ಕೊಠಡಿಗಳಿಗೆ ಬಂದಿದ್ದಾರೆ. ಕೊಬ್ಬರಿಯೆಣ್ಣೆ ಅಥವಾ ಹರಳೆಣ್ಣೆಗೆ ಅರಿಶಿನ ಬೆರೆಸಿ ಕುದಿಸಿದ ನಂತರ ಮಾಡುವ ಅಭ್ಯಂಜನ (ಎಣ್ಣೆ ನೀರು ಸ್ನಾನ) ಪುರಾತನ ಸಂಪ್ರದಾಯವೇ ಆದರೂ, ಅದು ವೈಜ್ಞಾನಿಕವಾಗಿಯೂ ಸರಿ ಎಂದು ಮನವರಿಕೆಯಾಗಿದೆ. ಸಾಂಬ್ರಾಣಿಯ ಹೊಗೆಯಲ್ಲಿ ತನ್ನ ತಲೆಗೂದಲು ಒಣಗಿಸಿ ಹಗುರಾಗಿಸಿಕೊಳ್ಳುವ ಹುಡುಗಿಗೆ ಅದು ಹಿತವೆನ್ನಿಸಿದರೂ ಮಂಚದ ಕೆಳಗೆ ಇಡುವ ಅಗ್ಗಿಷ್ಟಿಕೆಯ ಹಿಂಸೆ ಅನವಶ್ಯಕ ಮತ್ತು ಅಪಾಯಕಾರಿಯೆಂಬುದು ಗೊತ್ತಾಗಿರುವುದರಿಂದ ಆಕೆ 'ಸಿಟ್



ಔಟ್'ನಲ್ಲಿ ಕುಳಿತು ಎಳೆ ಬಿಸಿಲಿಗೆ ತಲೆಯೊಡ್ಡುತ್ತಾಳೆ.

ಹಾಲು,ಮೊಸರು, ಮಜ್ಜಿಗೆ, ಸೊಪ್ಪು, ಬೇಳೆ, ಕಡಲೆ, ಉದ್ದು, ಗೋದಿ ಎಲ್ಲ ಮೈಗೂಡಿದರೆ ಬಾಣಂತಿಯ ಆರೋಗ್ಯಕ್ಕೆ ಯಾವ ಧಕ್ಕೆಯೂ ಇಲ್ಲ. ದಿನಕ್ಕೆ ಒಂದು ಲೀಟರು ಹಾಲು ಮೈ ಸೇರಿದರೆ ಮತ್ತೆ ವಿಟಮಿನ್ನು, ಟಾನಿಕ್ಕುಗಳ ರಗಳೆ ಬೇಕಿಲ್ಲ. ಮೊದಲಿನಂತೆ ಈಗ ಐದು ತಿಂಗಳುಗಟ್ಲೆ ಕತ್ತಲೆ ಕೋಣೆಯೊಳಗೆ ಮಲಗಿ ಬಿಳಿಚಿಕೊಳ್ಳುವ ಅವಶ್ಯಕತೆಯಿಲ್ಲ. ಮೂರು ತಿಂಗಳೊಳಗಾಗಿ ತನ್ನ ಕೆಲಸ, ಮಗುವಿನ ಆರೈಕೆಗಳೊಂದಿಗೆ ಮನೆಗೆಲಸವನ್ನು ತೂಗಿಸಿಕೊಂಡು ಹೋಗಬಲ್ಲ ಸಾಮರ್ಥ್ಯ ಪಡೆಯುವ ಬಾಣಂತಿ, ತನ್ನ ಮಗು ಹತ್ತು ಪೌಂಡಿನಷ್ಟು ತೂಕದ್ದಾದ ಕೂಡಲೇ ಸಂಜೆಯ ಎಳೆ ಬಿಸಿಲಲ್ಲಿ ಅದನ್ನು ಕರೆದುಕೊಂಡು 'ವಾಕಿಂಗ್' ಹೊರಡಬೇಕು. ಸೂರ್ಯ ರಶ್ಮಿಯಲ್ಲಿರುವ ನೀಲಾತೀತ ಕಿರಣಗಳು (ultra violet rays) ಮಗುವಿಗೆ 'ಡಿ'ವಿಟಮಿನ್ನುಗಳನ್ನೊದಗಿಸುತ್ತದೆ. ಹೆರಿಗೆಯಾದ ಮೇಲೆ ಪ್ರತಿಯೊಂದಕ್ಕೂ ಅಮ್ಮನ ಮೇಲೋ, ಆಯಾಳ ಮೇಲೋ ಡಿಪೆಂಡ್ ಆಗುವುದಕ್ಕಿಂತ ತನ್ನ ಕೆಲಸ ತಾನೇ ಮಾಡಿಕೊಂಡು, ಜೊತೆಗೊಂದಿಷ್ಟು ವ್ಯಾಯಾಮವನ್ನೂ ಮಾಡಿದರೆ ಒಳ್ಳೆಯದು. ಪ್ರಸವಿಸಿದ ಹದಿನೈದು ದಿನಕ್ಕೆ ಕಿಮುಕ್ಕೆನ್ನದೆ ಮಗುವನ್ನು ಬೆನ್ನ ಹಿಂದಿನ ಹರುಕು ಚೀಲಕ್ಕೆ ಹಾಕಿಕೊಂಡು ರಣ ಬಿಸಿಲಲ್ಲಿ ಕೂತು ಕಲ್ಲೊಡೆಯುವ ಹೆಂಗಸಿಗೆ ವ್ಯಾಯಾಮವ್ಯಾವುದು ? ಕರ್ಮ ವ್ಯಾವುದು ?

ಸರಿ ಸರಿ, ಹುಟ್ಟಿಸಿದ ದೇವರು ಹುಲ್ಲು ಮೇಯಿಸ್ತಾನೆಯೇ ? (ಹುಲ್ಲಾದರೂ ಮೇಯಿಸಿದರೆ ಅದು ಅದೃಷ್ಟ !) ಅದೇನೇ ಇರಲಿ, ಹಡೆದ ತಾಯಿ ಸಾಕದೆ ಇರಳು. ಆಕೆಯ ಕಷ್ಟ, ನೋವು, ಸಂಕಟಗಳೇನೇ ಇರಲಿ, ತನಗಿಲ್ಲದಿದ್ದರೂ ಕಂದನನ್ನು ಎದೆಗವಚಿ ಹಿಡಿದು ಗುಟುಕು ಕೊಟ್ಟು ಸಲಹುತ್ತಾಳೆ. ಅರ್ಧರಾತ್ರಿಯ ಗಾಢ ನಿದ್ರೆಯಲ್ಲೂ ಮಗು ಕಿರ್ರೆಂದರೆ ಬೆಚ್ಚಿ ಏಳುತ್ತಾಳೆ. ಎರಡನೆ ತುತ್ತು ತಿಂದವಳಿಗೆ ಮಗುವಿನ ಅಳು ಕೇಳಿಸಿದರೆ ಮತ್ತೆ ತುತ್ತೆತ್ತಲಾಗದು. ನುಲಿಯುವ ಹೊಟ್ಟೆಯಿಂದಾಗಿ ನರಳುವ ಮಗು ತಾಯಿ ಹೊಟ್ಟೆಯನ್ನು ಹಿಂಡುತ್ತದೆ. ಓಡುವ ಮಗು ಎಡವಿ ಬಿದ್ದರೆ ಅದರ ಮೊಳಕಾಲು ಒಡೆಯುವ ಮೊದಲೇ ತಾಯೆದೆ ಒಡೆಯುತ್ತದೆ. ಮಗುವಿನ ಮೈ ಬೆಚ್ಚಗಾದರೆ ತಾಯಿಯ ಕೈ ಕಾಲು ತಣ್ಣಗಾಗುತ್ತವೆ.

ಆಕೆ ಬೆಳೆಸುತ್ತಾಳೆ. ನಿಮಿಷ ನಿಮಿಷಕ್ಕೂ ತಾಯ್ತನದ ಸಂಭ್ರಮವನ್ನು ಅನುಭವಿಸುತ್ತಲೇ ಬೆಳೆಯುತ್ತಾಳೆ. ಮುಂದೆ ಆ ಮಗು ಬೆಳೆದು ಅದಕ್ಕೆ ಮಕ್ಕಳಾದರೂ ಈಕೆ ತಾಯಾಗಿಯೇ ಉಳಿಯುತ್ತಾಳೆ.

ಏಕೆಂದರೆ ದೇವಲೋಕದ ಹೂವುಗಳಿಗೆ ಸಾವಿರುವುದಿಲ್ಲ !

ಕಡೆಯ ಮಾತು:

ಇದು ಅಂತಾರಾಷ್ಟ್ರೀಯ ತಾಯಿ ಮಕ್ಕಳ ವರ್ಷ. *

# ಆಚಾರ್ಯರ

# ಕಲಾಕೃತಿ ಪ್ರದರ್ಶನ

ನಾರಾಯಣ ರಾಯಚೂರ್



ಸಾವಿತ್ರಿಗೆ ಸತ್ಯವಾನ ದೊರೆತದ್ದು

"The happiest person is one who brought happiness to the greatest number of people" ಕಾರ್ಲ್‌ಮಾರ್ಕ್ಸ್‌ನ ಈ ನುಡಿಗಳನ್ನು ಉದ್ಧರಿಸುವ ಶ್ರೇಷ್ಠ ಕಲಾ ಸಾಧಕ ಎಂ.ಟಿ.ವಿ. ಆಚಾರ್ಯ ಅವರು, ತಮ್ಮ ಕಲಾ ಕೈಂಕರ್ಯದ ಮೂಲಕ ಈ ನುಡಿಗಳಿಗೆ ಜೀವವಿತ್ತು ಸಾರ್ಥಕತೆ ನೀಡುತ್ತಿರುವವರು. ಎಪ್ಪತ್ತರ ಈ ಇಳಿ ವಯಸ್ಸಿನಲ್ಲೂ (ಈ ಸಂದರ್ಭಕ್ಕಾಗಿ ಆಚಾರ್ಯರದೇ ಕಲಾಕೃತಿ - ಪ್ರದರ್ಶನದ ಮೂಲಕ ಅವರನ್ನು ಸನ್ಮಾನಿಸುವ ಸೂಕ್ತ, ಸರಳ ಕಾರ್ಯಕ್ರಮವೊಂದು ನಗರದ ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ಈಚೆಗೆ ಯಶಸ್ವಿಯಾಗಿ ನಡೆದಿದೆ) ಆಚಾರ್ಯರಿಗೆ ತಮ್ಮ ಕಲಾ ಕಾಯಕದ ಬಗೆಗೆ ಇಪ್ಪತ್ತರ ಎಳೆ ಪ್ರಾಯದ ತಾರುಣ್ಯ, ಲವ-ಲವಿಕೆಗಳಿವೆ, ತೆರೆದ ಮನಸ್ಸಿದೆ. ಅನುಭವದ ಮೂಸೆಯಲ್ಲಿ ಪರಿಪಕ್ವಗೊಂಡ ಹೃದಯ-ವೈಶಾಲ್ಯವಿದೆ.

ರಮ್ಯಕಲೆಯ ಮೂಲಭೂತ ಸತ್ವಗಳನ್ನು ಕರಗತಗೊಳಿಸಿಕೊಂಡಿರುವ ಈ ಶ್ರೇಷ್ಠ ಕಲಾವಿದ ಜನ-ಮನದ ಪ್ರಿಯ ಕಲಾವಿದ. ರವಿವರ್ಮನ ಕಲಾ ಪರಂಪರೆಯ ಮುಂದುವರಿಕೆಯಂತೆ ಇವರ ಕೆಲವು ಕೃತಿಗಳು ಕಂಡರೂ ಪುರಾಣ, ಕಥಾನಕಗಳ ಜೊತೆ-ಜೊತೆಗೆ ಸಾಮಾಜಿಕ ಕಳಕಳಿಯ, ಮಾನವೀಯ ಮೌಲ್ಯಗಳಿಗೆ ತಹತಹಿಸುವ ಚಿತ್ರಾಕೃತಿಗಳೂ ಆಚಾರ್ಯರ ಕುಂಚದಿಂದ ಹೊರಹೊಮ್ಮಿ ಅವರದೇ ಆದ ಒಂದು ವಿಶಿಷ್ಟ ಛಾಪನ್ನು ನಿರ್ಮಿಸಿಕೊಡುವಲ್ಲಿ ಗಟ್ಟಿಯಾಗಿ ನಿಲ್ಲುತ್ತವೆ, ವಿಭಿನ್ನತೆಯನ್ನು ತೋರುತ್ತವೆ.

'ಚಂದಮಾಮ' ಪತ್ರಿಕೆಯಲ್ಲಿ ರಚಿಸುತ್ತಿದ್ದ ಕಥಾಚಿತ್ರಗಳು, ವಿಶೇಷವಾಗಿ 'ಮಹಾಭಾರತ ಸರಣಿ' ಚಿತ್ರಗಳು ಆಚಾರ್ಯರನ್ನು ಜನ-ಮನದ ಹತ್ತಿರದ ಕಲಾವಿದನನ್ನಾಗಿಸಲು ಇನ್ನಷ್ಟು ಸಹಕಾರ ನೀಡಿ ಇವರ ಜನಪ್ರಿಯತೆಯನ್ನು ಮೆರೆಸಿವೆ. ಇಂಥ ಆಚಾರ್ಯರು ತಮ್ಮ ಬದುಕಿನ ಏಳು - ದಶಕಗಳನ್ನು ಪೂರೈಸಿದ ಈ ಶುಭ ಸಂದರ್ಭದಲ್ಲಿ, ಸುಮಾರು ಐದು ದಶಕಗಳನ್ನೂ, ಮೀರಿದ ಅವರ 'ಸುವರ್ಣ ಬಣ್ಣದ ಬದುಕಿನ' ಪುಟಗಳನ್ನು ಅವಲೋಕಿಸಿದಾಗ ಲೆನಿನ್ ಹೇಳಿದಂತೆ 'Arts belong to people' ಎಂಬ ಮಾತನ್ನು ಆಚಾರ್ಯರು ಗಾಢವಾಗಿ ನಂಬಿ, ಜನ ಸಾಮಾನ್ಯರಿಗೆ ಅರ್ಥವಾಗುವ, ಆಕರ್ಷಿಸುವ ಮೂಲಕ ಸಂದೇಶವನ್ನೂ ಸಾರುವ ಕೃತಿರಚನೆಯಲ್ಲಿ ತೊಡಗಿ ಜಯಶೀಲರಾದದ್ದು ಸುವ್ಯಕ್ತವಾಗುತ್ತದೆ.

**ಬಾಳ ದಾರಿ**

ಮಂಡ್ಯ ತೊಣ್ಣೂರು ವೆಂಕಟಾಚಾರ್ಯ ಇದು ಎಂ.ಬಿ.ವಿ. ಆಚಾರ್ಯರ ಪೂರ್ತಿ ಹೆಸರು. ಹುಟ್ಟಿದ್ದು 28 ಜುಲೈ 1920, ಮೈಸೂರಿನ ಹಳೇ ಅಗ್ರಹಾರದಲ್ಲಿ. ತಂದೆ ಎಂ.ಟಿ. ನಾರಾಯಣಯ್ಯಂಗಾರ್ ಶಿರಸ್ತೆದಾರ್ ಆಗಿ ಸರಕಾರಿ ಸೇವೆ ಸಲ್ಲಿಸಿದವರು. ಈ ಸಂದರ್ಭದಲ್ಲಿ ಊರೂರಿಗೆ ವರ್ಗಾವಣೆಗೊಳ್ಳುತ್ತಿದ್ದ ತಂದೆಯವರೊಂದಿಗೆ ಬಾಲಕ ವೆಂಕಟಾಚಾರ್ಯನಿಗೂ ಬೇರೆ, ಬೇರೆ ಸ್ಥಳಗಳ ಪ್ರಕೃತಿ-ರಮಣೀಯ ದೃಶ್ಯ ವೀಕ್ಷಣೆ, ಆರಾಧನೆಗೆ ಅನುವು ಮಾಡಿಕೊಟ್ಟವು.

''ಮಿಡ್ಲ್ ಸ್ಕೂಲಿನ ಮೊದಲನೆಯ ತರಗತಿಯಲ್ಲಿದ್ದಾಗ ಭಾರತ ದೇಶದ ಭೂಪಟವನ್ನು ಚಿತ್ರಿಸಿ ನದಿಗಳನ್ನು ಗುರುತಿಸಲು ಉಪಾಧ್ಯಾಯರು ನನಗೆ ಹೋಂವರ್ಕ್‌ನ ಕೊಟ್ಟಿದ್ದರು. ತಪ್ಪಿಲ್ಲದೇ ಅಚ್ಚುಕಟ್ಟಾಗಿ ಚಿತ್ರಿಸಿ ತೋರಿಸಿದಾಗ ''ಟ್ರೇಸ್ ಮಾಡಿ ಸುಳ್ಳು ಹೇಳುತ್ತಿರುವೆ ಯೇನೋ, ಭಡವಾ'' ಎಂದು ಹೊಡೆದರು. ನಾನು ಹಾಗೆಯೇ ನೋಡಿ ಬರೆದೆನೆಂದು ಅವರು ನಂಬಲೇ ಇಲ್ಲ. ಈ ಕುತೂಹಲಕರ ಸನ್ನಿವೇಶದಿಂದ ನನಗೆ ಹೆಮ್ಮೆಯೇ ಆಗಿ ಚಿತ್ರಿಸುವ ಆಸಕ್ತಿ ಹೆಚ್ಚಾಯಿತೇ ವಿನಹ ಕಮ್ಮಿಯಾಗಲಿಲ್ಲ. ಮನೆಯವರ ಇಚ್ಛೆಗೆ ವಿರುದ್ಧವಾಗಿ, ಐಚ್ಛಿಕ ವಿಷಯವಾಗಿ ಡ್ರಾಯಿಂಗನ್ನು ಆಯ್ದುಕೊಂಡು ಬಹುಬೇಗ ಡ್ರಾಯಿಂಗ್ ಮಾಸ್ತರರ ಅಚ್ಚುಮೆಚ್ಚಿನ ಶಿಷ್ಯನಾದೆ. ಬಯಾಲಜಿ ಕ್ಲಾಸಿನಲ್ಲಿ, ಮೀಸೆ

ಹೊತ್ತು ವಿಶಿಷ್ಟ ರೀತಿ ಕಾಣುತ್ತಿದ್ದ ಬಯಾಲಜಿ ಉಪಾಧ್ಯಾಯರ ಚಿತ್ರವನ್ನು ನನ್ನ ಡೆಸ್ಕ್ ಮೇಲೆ ಕೊರೆದು ಸಹಪಾಠಿಗಳನ್ನಾಕರ್ಷಿಸಿ ಗೊಂದಲ ಮಾಡಿದ್ದಕ್ಕೆ ಮೇಷ್ಟ್ರಿಂದ ಬೈಸಿಕೊಂಡದ್ದು ನನಗಿನ್ನೂ ನೆನಪಿದೆ'' - ಆಚಾರ್ಯರು ತಮ್ಮ ಆತ್ಮಕಥಾನಕ ಮಾದರಿಯ 'ಕಲೆ ಮತ್ತು ನಾನು' ಪುಸ್ತಕದಲ್ಲಿ ತಮ್ಮ ಬಾಲ್ಯದ ಘಟನೆಗಳನ್ನು ಸ್ವಾರಸ್ಯಕರವಾಗಿ ಚಿತ್ರಿಸಿದ್ದನ್ನು ಇಲ್ಲಿ ನೆನೆಯಬಹುದು.

ಹಾಗೆಯೇ ಇನ್ನೊಂದು ಘಟನೆ; ಸುಮಾರು 1940ರ ಸಮಯ. ಆಗ ಪ್ರಖ್ಯಾತವಾಗಿದ್ದ ಮೈಸೂರಿನ ಚಾಮರಾಜೇಂದ್ರ ಟೆಕ್ನಿಕಲ್‌ನ ಹೆಸರಾಂತ ಕಲಾವಿದ ಪಾವಂಜೆ ಅವರು ಒಂದು ದಿನ ಒಬ್ಬ ವಿದ್ಯಾರ್ಥಿಯನ್ನು ಕರೆದು ''ಮಹಾರಾಜರ ಆಪ್ತ ಕಾರ್ಯದರ್ಶಿಗಳಾದ ಸರ್ ಚಾರ್ಲ್ಸ್ ಟಾಡ್ ಹಂಟರ್ ಅವರು ಯಾವುದೋ ಒಂದು ಕೆಲಸಕ್ಕೆ ನಮ್ಮ ಅತ್ಯುತ್ತಮ ವಿದ್ಯಾರ್ಥಿಯನ್ನು ಕಳುಹಿಸಿ'' ಎಂದು ಕೇಳಿದ್ದಾರೆ, ''ನಾನು ನಿನ್ನನ್ನು ಕಳಿಸಬೇಕೆಂದಿರುವೆ ಹೋಗುವೆಯಾ?'' ಎಂದರು ಮನಸ್ಸಿನಲ್ಲಿ ಅಳುಕವಿದ್ದರೂ ಆ ವಿದ್ಯಾರ್ಥಿ ಅವರ ಆದೇಶದಂತೆ ಟಾಡ್ ಹಂಟರ್ ಅವರನ್ನು ಭೇಟಿಯಾದ. ಆಗ ಆ ಬ್ರಿಟಿಶ್ ಅಧಿಕಾರಿ ಮೈಸೂರು ಮಹಾರಾಜರಿಗೆ ಗ್ರೀಟಿಂಗ್ ಕಾರ್ಡ್ ಒಂದನ್ನು ರಚಿಸಬೇಕೆಂದು ಹೇಳಿ ಕೆಲವು ಸೂಚನೆಗಳನ್ನಿತ್ತ. ಆ ಕಲಾ ವಿದ್ಯಾರ್ಥಿ ಮಹಾಭಾರತದ ದೃಶ್ಯಗಳನ್ನು

## ನವ್ಯ ಕಲೆಯ ಬಗ್ಗೆ

1955ರಲ್ಲಿ ಏಕವ್ಯಕ್ತಿ ಕಲಾಪ್ರದರ್ಶನ ಮಾಡಿ ಒಂದಷ್ಟು ಕಾಲ ಮುಂಬಯಿಯಲ್ಲಿ ಆಚಾರ್ಯರು ತಂಗಿದ್ದರು. ಆ ದಿನಗಳಲ್ಲಿ ನವ್ಯಕಲೆಯ ಅಬ್ಬರ ಪಾಶ್ಚಾತ್ಯದೇಶಗಳಲ್ಲಿ ಬೆಳೆದ ಈ ಕಲೆಗೂ ಭಾರತೀಯ ಇದನ್ನು ಅನುಕರಿಸುವುದು/ ಇರುವ ಸಂಬಂಧ, ಪ್ರಯೋಜನ - ಇವುಗಳನ್ನು ಕುರಿತು ಆಚಾರ್ಯರ ದೃಷ್ಟಿ. ಸ್ಪಷ್ಟವಾಗಿ ರೂಪುಗೊಂಡಿತು.

''ಇಂತಹ ಪರಿಸ್ಥಿತಿಯಲ್ಲಿ ನನ್ನ ದಾರಿ ಏನು? ಎಂದು ಚಿಂತಿಸಿದೆನು. ನನ್ನ ಸಮಾಜ ಜೀವನದ ಪರಿಸರಗಳಿಗೆ ಪ್ರತಿಸ್ಪಂದಿಸಿ ನಾನು ಕಲಿತು ಸಾಧಿಸಿದ, ಕಲಾತ್ಮಕ ರೀತಿಯಲ್ಲಿ ಇದುವರೆಗೆ ಚಿತ್ರಿಸಿದ ಹಳ್ಳಿಯ ಉಪಾಧ್ಯಾಯ, ಗೃಹಲಕ್ಷ್ಮೀ, ಬಾಳಿನ ಸಂಜೆ, ಪಿತೃವಿಹೀನ, ಲಕ್ಷ್ಮೀಯ ನಿರ್ಗಮನ, ಕಲಾವಿದನ ಸಮಸ್ಯೆ, ಅನ್ನ ಸಮಸ್ಯೆ, ಮರಕುಟುಕ, ಮುಸುಕಿದ ಆಳ ಕಡಲ ತೀರದ ಸುಂದರಿಯರು, ಮುಗ್ಧ ಪ್ರೇಮಿಗಳು, ಕಾಲೇಜು ಕನ್ಯೆ ಮುಂತಾದ ಚಿತ್ರಗಳು ನಿರರ್ಥಕವೆ? ಆಧುನಿಕತೆಯ ಸುರಾಪಾನಮತ್ತರ ಕಣ್ಣಿಗೆ ನಿರರ್ಥಕವಾಗಿ ಕಂಡೀತು, ಆದರೆ ನಮ್ಮ ಜನತೆಗೆ ಆ ಕಲಾಕೃತಿಗಳು ಹೆಚ್ಚಿನ ಆನಂದ ನೀಡಿ ಅವರಿಂದ ಅಂಗೀಕರಿಸಲ್ಪಟ್ಟವೆ. ನಾನೊಬ್ಬ ಉತ್ತಮ ಕಲಾವಿದನೆಂದು ಗುರ್ತಿಸಿವೆ. ಈ ರೀತಿ ನಮಗೆ ಮತ್ತು ಜನತೆಗೆ ತೃಪ್ತಿ ನೀಡಿದ ದಾರಿಯನ್ನು ಕೈಬಿಟ್ಟು ಆಧುನಿಕ ತರುಣ ಕಲಾವಿದರು ಅನುಸರಿಸುವ ನವ್ಯ ರೂಪವನ್ನು ನಾನು ಅನುಸರಿಸುವ ಅಗತ್ಯ ನನಗೆ ಕಾಣಲಿಲ್ಲ. ನನ್ನ ಆತ್ಮ ಸಾಕ್ಷಿಯ ವಿಧಾನವನ್ನೂ ಜನತೆಯನ್ನು ಅಲಕ್ಷಿಸಿ, ನವ್ಯ ಕಲೆಯೇ ಕಲೆಯೆಂದು ನಂಬಿದ ಹಲವು ಅಧಿಕಾರಸ್ಥರನ್ನು ಮೆಚ್ಚಿಸಬೇಕಾದ ಅಗತ್ಯವೂ ನನಗೆ ಕಾಣಲಿಲ್ಲ ..... ಆದ್ದರಿಂದ ನನಗೆ ಆತ್ಮಸಂತೋಷ, ತೃಪ್ತಿ ನೀಡಿದ, ನಮ್ಮ ಜನತೆಯನ್ನು ಮೆಚ್ಚಿಸಿದ ನನ್ನದೇ ರೀತಿಯ ಕಲೆಯನ್ನು ಮುಂದುವರಿಸುವುದೇ ನನಗೆ ಹಿತ.''

('ಕಲೆ ಮತ್ತು ನಾನು' ಪುಟ 48, 49ರಲ್ಲಿ)

ವರ್ಣಮಯವಾಗಿ ಚಿತ್ರಿಸಿಕೊಟ್ಟ. ಆ ಅಧಿಕಾರಿಗೆ ಅತಿ ಸಂತೋಷವಾಗಿ ಹತ್ತು ರೂಪಾಯಿ ಕೊಟ್ಟು ಆ ವಿದ್ಯಾರ್ಥಿಯ ಬೆನ್ನು ತಟ್ಟಿದ. ಆ ವಿದ್ಯಾರ್ಥಿ ಈ ಎಂ.ಟಿ.ವಿ. ಆಚಾರ್ಯರೇ ಎಂದರೆ 'ಬೆಳೆವ ಸಿರಿ ಮೊಳಕೆಯಲ್ಲಿ' ಎನ್ನುವ ಮಾತಿಗೆ ಅನ್ವರ್ಥಕವಾಗಿದೆ.

(ಕರ್ನಾಟಕ ಲಲಿತ ಕಲಾ ಅಕಾದೆಮಿ ಈಚೆಗೆ ಎಂ.ಟಿ.ವಿ. ಆಚಾರ್ಯರ ಬದುಕು ಸಾಧನೆಗಳನ್ನು ಕುರಿತು ಪ್ರಕಟಿಸಿದ ಪುಸ್ತಕದಲ್ಲಿ ಜಿ.ಸುಕೃಷ್ಣಸೆಟ್ಟಿ ಈ ಘಟನೆಯನ್ನು ಸೊಗಸಾಗಿ ನಿರೂಪಿಸಿದ್ದಾರೆ.)

ಮೈಸೂರಿನ ಮಹಾರಾಜಾ ಹೈಸ್ಕೂಲ್‌ನಲ್ಲಿ ಹೈಸ್ಕೂಲ್ ವ್ಯಾಸಂಗ, ಮುಂದೆ ಮೈಸೂರಿನ ಸಿಟಐನಲ್ಲಿ ಕಲಾಭ್ಯಾಸ ಮುಗಿಸಿ, ಮುಂಚಿನಿಂದಲೂ ತಮ್ಮ ಮೇಲೆ ಪ್ರಭಾವ ಬೀರಿದ ಪ್ರಕೃತಿಯನ್ನು ಆರಾಧಿಸುತ್ತ ಚಿತ್ರಿಸತೊಡಗಿದ ಆಚಾರ್ಯರಿಗೆ ಪ್ರಕೃತಿಯೇ ಪ್ರಥಮ ಆದ್ಯತೆಯ ಗುರುವಂತೆ. ಕಲೆಯ ಕಾಯಕವನ್ನೇ ನೆಚ್ಚಿ ಬದುಕು-ನಿರ್ವಹಣೆ ದುಸ್ತರವೆನಿಸಿದಾಗ ವಿಮಾನ ಕಾರ್ಖಾನೆಯಲ್ಲಿ ಉದ್ಯೋಗದಲ್ಲಿ ನಿರತರಾದರು. ಆದರೆ ಬಹುಕಾಲ ಇಲ್ಲಿ ನಿಲ್ಲಲಾಗದೇ ಕಲೆಯ ಕಾಯಕಕ್ಕೆ ಆಚಾರ್ಯರು ಸಂಪೂರ್ಣವಾಗಿ ತೊಡಗಿಕೊಳ್ಳಬೇಕಾದ ಸಂದರ್ಭ ಒದಗಿ ಬಂತು. ಈ ಮಧ್ಯೆ ಕಲ್ಕತ್ತೆಯ ಶಾಂತಿನಿಕೇತನದ ಭೇಟಿ, ನಂದಲಾಲ್ ಬೋಸ್, ಅತುಲ್ ಭೋಸ್ ಅಬನೀಂದ್ರನಾಥ್ ಠಾಗೋರ್ ಮುಂತಾದ ಗಣ್ಯ ಕಲಾವಿದರ ಪರಿಚಯ ಇವರ ಕಲಾಸಾಧನೆಯ ಮಜಲನ್ನು ಬಲ



ಮಹಾಭಾರತ ರಚನೆಯಲ್ಲಿ ವ್ಯಾಸ ವಿಘ್ನೇಶ್ವರರು

ಪಡಿಸಿತು. ಖ್ಯಾತ ಕಲಾವಿದ ರುಮಾಲೆ ಚೆನ್ನಬಸವಯ್ಯನವರೊಮ್ಮೆ ಮದರಾಸಿಗೆ ಬಂದಾಗ ಅಲ್ಲಿ ಏರ್ಪಟ್ಟ ಚಿತ್ರ-ಪ್ರದರ್ಶನವೊಂದು ಆಚಾರ್ಯರ ಬಣ್ಣದ ಬದುಕಿಗೆ ತಿರುವನ್ನೇ ನೀಡಿತೆನ್ನಬೇಕು. ಬಸವಯ್ಯನವರು ಆಚಾರ್ಯರನ್ನು ಚಂದಮಾಮ ಪತ್ರಿಕೆಯ ನಾಗಿರೆಡ್ಡಿ - ಚಕ್ರಪಾಣಿ ಅವರಿಗೆ ಪರಿಚಯಿಸಿದ್ದೇ ಆಚಾರ್ಯರನ್ನು 'ಚಂದಮಾಮದ ಆಚಾರ್ಯರು' ಎಂದು ಗುರುತಿಸುವಷ್ಟರ ಮಟ್ಟಿಗೆ ಅಸಿನಾಭಾವದ ನಂಟು ಬೆಳೆಯಿತು. ರಾಮಾಯಣ- ಭಾಗವತದ ಸರಣಿ ಚಿತ್ರಗಳು ಆಚಾರ್ಯರ ಸಂಪಾದಕತ್ವದಲ್ಲಿ ಜನಪ್ರಿಯತೆಯ ಎತ್ತರವನ್ನು ಹೆಚ್ಚಿಸಿಕೊಂಡವು. ಆಚಾರ್ಯರ 'ಮಾಸ್ಟರ್ ವರ್ಕ್ಸ್' ಎಂದೇ ಖ್ಯಾತಿ ತಂದಿತ್ತಿರುವ ಮಹಾಭಾರತ ಚಿತ್ರ ಸರಣಿಗೆ ಅಂಕುರ ಮೂಡಿದ್ದೂ ಈ ದಿನಗಳಲ್ಲೇ. ಆಚಾರ್ಯರೇ ಸ್ಮರಿಸಿ ಕೊಳ್ಳುವಂತೆ ''ಮಹಾಭಾರತದ ಅದ್ಭುತ ಕಥೆ, ವ್ಯಕ್ತಿ, ಸನ್ನಿವೇಶಗಳನ್ನು ಶಾಶ್ವತ ರೀತಿಯಲ್ಲಿ ಜನ ಸಾಮಾನ್ಯನಿಗೆ ಉಣಬಡಿಸಬೇಕೆಂಬ ನನ್ನ ಅಪೇಕ್ಷೆ ಚಂದಮಾಮದ ಈ ಯೋಜನೆಯಿಂದ ಈಡೇರಿತು. ಮಹಾಭಾರತದ ಚಿತ್ರಗಳನ್ನು ನಾನು ವಾಣಿಜ್ಯೋದ್ದೇಶಕ್ಕೆ ತಕ್ಕ ಮುಖಚಿತ್ರಗಳಂತೆ ರಚಿಸಲು ಇಷ್ಟಪಡದೆ, ಉತ್ತಮ ಕಲಾಕೃತಿಗಳಾಗಬೇಕು, ಶಾಶ್ವತವಾಗಿರಬೇಕೆಂದು ಸಂಕಲ್ಪಿಸಿದೆ. ಮಹಾಭಾರತದ 18 ಸಂಪುಟದ ಪುಸ್ತಕಗಳನ್ನೂ, ತೆಲುಗಿನ ಭಾಷಾಂತರವನ್ನೂ ಪೂರ್ಣ ಅಧ್ಯಯನ ಮಾಡಿ, ಅಲ್ಲಿನ ಪ್ರಮುಖ ವ್ಯಕ್ತಿಗಳ ಗುಣದೋಷಗಳನ್ನು ವಿಶ್ಲೇಷಿಸಿ, ಮನದಲ್ಲಿ ಇವುಗಳನ್ನು ರೂಪಿಸಿಕೊಂಡು ನಂತರ ಕೃತಿಗಿಳಿಸ ಲೆತ್ನಿಸಿದೆ. 1957ರಿಂದ 1963ರವರೆಗೆ ಮಹಾಭಾರತದ ಸರಣಿ ಚಿತ್ರಾವಳಿಯನ್ನು (ಹದಿನೆಂಟು ಪರ್ವಗಳ ಕಥೆ ಸುಮಾರು ಎಂಬತ್ತು ಚಿತ್ರಗಳಲ್ಲಿ ಸಶಕ್ತವಾಗಿ ಮೂರ್ತಗೊಂಡಿದೆ) ಸಮರ್ಪಕವಾಗಿ ಪೂರೈಸಿ ಮದರಾಸಿನಿಂದ (ಚಂದಮಾಮದ ನೌಕರಿ ತೊರೆದು) ತಾಯಿನಾಡಿಗೆ (ಕರ್ನಾಟಕಕ್ಕೆ ಬೆಂಗಳೂರಿಗೆ) ಬಂದು ನೆಲೆಸಿದ ಆಚಾರ್ಯರು 'ತಾಯಿನಾಡು' ಪತ್ರಿಕೆ, ಗೋಕುಲ ವಾರಪತ್ರಿಕೆ ಹಾಗೂ ಕೈಲಾಸ ಮಾಸಪತ್ರಿಕೆ ಹೀಗೆ ಹಲವು ಪತ್ರಿಕೆಗಳಲ್ಲಿ ಕಲಾವಿದರಾಗಿ ಸೇವೆಸಲ್ಲಿಸಿದರು.

''ನಾವು ಕಲಿಯುವಾಗ ನಮಗಿದ್ದ ಸಮಸ್ಯೆಗಳು ಹಲವು. ಈ ಕಲೆಯನ್ನು ಕರಗತ





ಸರಸ್ವತಿ ಒಲಿದಾಗ ಲಕ್ಷ್ಮಿ ನಿರ್ಗಮನ

ಗೊಳಿಸಿಕೊಳ್ಳಲು ನಾನು ಪಟ್ಟಪಾಡು ಬಣ್ಣಿಸಲಾರದಂಥದು. ಹೊಸ ಪೀಳಿಗೆಯ ಉತ್ಸುಕರಿಗೆ ಕಲೆ ಸುಲಭವಾಗಿ ಸಿಗುವಂತಾಗಲಿ ಎಂಬ ಬಯಕೆಯಿಂದಲೇ ಇದ್ದೊಂದು ಮನೆಯನ್ನು (ಜಯನಗರದಲ್ಲಿ) ಮಾರಿ ಕಲಾಭವನವನ್ನು ನಗರದ ಗಾಂಧಿನಗರದಲ್ಲಿ ಪ್ರಾರಂಭಿಸಿದೆ''

''ಐದು ವರ್ಷಗಳಲ್ಲಿ ಸಾವಿರಾರು ರೂಪಾಯಿ ವೆಚ್ಚದಲ್ಲಿ ಅತಿ ದುಬಾರಿಯಾಗಿರುವ ಕಲೆಯನ್ನು ಕಡಿಮೆ ಕಾಲಾವಕಾಶದಲ್ಲಿ, ಕಡಿಮೆ ಹಣದಲ್ಲಿ, ಬಡ ವಿದ್ಯಾರ್ಥಿಗಳಿಗೂ ಕಲೆಯ ಸಮಗ್ರ ಜ್ಞಾನ ಒದಗಿಸಬೇಕೆಂಬ ಸದಾಶಯದಿಂದ ಕಲಾಭವನ ಪ್ರಾರಂಭವಾಯ್ತು'' ಎಂದು ಕಲಾಭವನದ ಹುಟ್ಟನ್ನು (1969) ಆಚಾರ್ಯರು ನೆನೆಯುತ್ತಾರೆ. ಈ ಎರಡು ದಶಕಗಳಲ್ಲಿ ಕಲಾಭವನ ಸಾವಿರಾರು ಕಲಾವಿದರನ್ನು ಕಡೆದು ನಿಲ್ಲಿಸಿದೆ.

**ಅಂಚೆ ಮೂಲಕ ಶಿಕ್ಷಣ**

ಅಂಚೆ ಮೂಲಕ ಕಲೆಯನ್ನು ಬೋಧಿಸುವ ಏಕೈಕ ಶಾಲೆ ಎಂಬ ಹೆಗ್ಗಳಿಕೆ ಈ ಶಾಲೆಗೆ. ವಿವಿಧ ವಯೋಮಾನದ, ವಿಭಿನ್ನ ಆಸಕ್ತಿಯ ಕಲಾಪ್ರತಿಭೆಗಳನ್ನು ನೀಡಿರುವ ಕಲಾಭವನದ ಈ ಯೋಜನೆ ಅತ್ಯಂತ ಯಶಸ್ವಿಯಾಗಿದೆ. ಇಲ್ಲಿನ ಹಲವಾರು ವಿದ್ಯಾರ್ಥಿಗಳಿಂದು 'ಕಲಾ' ಕ್ಷೇತ್ರದಲ್ಲಿ ಮಾನ್ಯರಾಗಿದ್ದಾರೆ.

ಹವ್ಯಾಸಿ ಕಲೆ, ವ್ಯಂಗ್ಯ ಚಿತ್ರಕಲೆ ಹಾಗೂ ವಾಣಿಜ್ಯ ಕಲೆ ಹೀಗೆ ವಿದ್ಯಾರ್ಥಿಗಳು ತಾವು ಬಯಸುವ ಕಲಾ ಪ್ರಕಾರವನ್ನಾಯ್ದುಕೊಂಡು ಒಂದು ವರ್ಷ ಹಾಗೂ ಎರಡು ವರ್ಷಗಳ ಅವಧಿಯ ಈ ಅಂಚೆ ಶಿಕ್ಷಣದ ಕೋರ್ಸನ್ನು ಅಭ್ಯಸಿಸಿ ಅರ್ಹತಾ ಪತ್ರ, ಪ್ರಶಸ್ತಿ ಪತ್ರಗಳನ್ನು ಪಡೆಯುವರು. ಆಗಾಗ ವಿದ್ಯಾರ್ಥಿಗಳಿಗಾಗಿ ಪ್ರವಾಸಗಳನ್ನು ಏರ್ಪಡಿಸಿ ನಿಸರ್ಗದ ಮಡಿಲಲ್ಲೇ ಚಿತ್ರ-ರಚನೆ ತರಬೇತಿ, ಮಾರ್ಗದರ್ಶನಗಳನ್ನೂ ಪ್ರಾಚಾರ್ಯ ಆಚಾರ್ಯರು ನೀಡುವುದುಂಟು.

ಎಪ್ಪತ್ತರ ಗಡಿಯನ್ನು ದಾಟಿರುವ ಆಚಾರ್ಯರಿಗೆ 'ಕಲಾಭವನ'ದ ಕೆಲಸವೆಂದರೆ ಇಪ್ಪತ್ತರ ಪ್ರಾಯ. ತಮ್ಮ ವೈಯ್ಯಕ್ತಿಕ ಬದುಕಿನಲ್ಲಿ, ಕಲಾವಿದನ ಬದುಕಿನಲ್ಲಿ ಎದುರಾದ ಹಲವು ಏಳು-ಬೀಳುಗಳಿಗೆ ಧೃತಿಗೆಡದೆ ಕಲೆಕಾಯಕದಲ್ಲಿ ನಿರತರಾಗಿರುವ ಆಚಾರ್ಯರು ಪುರಾಣದ ಕಲಾಕೃತಿಗಳ ಜೊತೆ ಜೊತೆಗೇ ಜನಪದ ಕಾಳಜಿಯಿಂದ ಕೂಡಿದ ಹಲವಾರು (ಸ್ಕೂಲ್ ಮಾಸ್ಟರ್, ಹಸಿವು ಇತ್ಯಾದಿ) ಚಿತ್ರಗಳನ್ನು ರಚಿಸಿದ್ದಾರೆ. ಮಾಸ್ಕೋದ ಕಲಾ ಪತ್ರಿಕೆಯೊಂದು ಆಚಾರ್ಯರ ಕೃತಿಗಳನ್ನು ಮುಕ್ತವಾಗಿ ಪ್ರಶಂಸಿಸಿದೆ. ಸಾಂಸ್ಕೃತಿಕ ನಿಯೋಗದ ಗಣ್ಯರಾಗಿ ಆಚಾರ್ಯರು ರಶಿಯಾ ಪ್ರಯಾಣವನ್ನು ಕೈಗೊಂಡು (1973) ಬಂದಿದ್ದಾರೆ. 1980ರ ಕರ್ನಾಟಕ ಲಲಿತ ಕಲಾ ಅಕಾದೆಮಿಯ ಪ್ರಶಸ್ತಿ, 1989ರ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಆಚಾರ್ಯರು 'ಭಗೀರಥ' ಎಂಬ ಹೆಸರಿನಲ್ಲಿ ಹಲವು ಲೇಖನಗಳನ್ನು ಬರೆದಿದ್ದಾರೆ. 'ಕಲೆ ಮತ್ತು ನಾನು' ಇದು ಅವರ ಆತ್ಮಚರಿತ್ರೆ.

ಕಲಾಭವನದ ಹಾಗೂ ಆಚಾರ್ಯರ ಮಾತು ಬಂದಾಗಲೆಲ್ಲ ಮರೆಯಲಾಗದ ಮತ್ತೊಂದು ಹೆಸರೆಂದರೆ ತೆರೆಮರೆಯಲ್ಲೇ ಕಾರ್ಯನಿರತರಾಗಿ

## ಆಚಾರ್ಯರ ಬದುಕು - ಸಾಧನೆಗಳ ಘಟ್ಟಗಳು

| | | |
|---|---|---|
| 1920 | - | ಮೈಸೂರಲ್ಲಿ ಜನನ |
| 1940 | - | ಮೈಸೂರಿನಲ್ಲಿ ಕಲಾ-ಶಾಲೆಯಿಂದ ಡಿಪ್ಲೊಮಾ |
| 1942 | - | ಬೆಂಗಳೂರಿನ ವಿಮಾನ ಕಾರ್ಖಾನೆಯಲ್ಲಿ ಉದ್ಯೋಗ |
| 1947-53 | - | 'ಚಂದ್ರಮಾಮ' ಪತ್ರಿಕೆಯಲ್ಲಿ ಉದ್ಯೋಗ |
| 1949 | - | ಕಲ್ಕತ್ತದ ಅಕಾಡೆಮಿ ಆಫ್ ಫೈನ್ ಆರ್ಟ್ಸ್ ಕಲಾಪ್ರದರ್ಶನದಲ್ಲಿ ಪ್ರಶಸ್ತಿ |
| 1954 | - | ಉದ್ಯೋಗ ತೊರೆದು ಬೆಂಗಳೂರಿನಲ್ಲಿ ಸ್ವಂತ ಸ್ಟುಡಿಯೋ ಸ್ಥಾಪನೆ |
| | - | ದೆಹಲಿ ಪಾರ್ಲಿಮೆಂಟ್ ಭವನಕ್ಕೆ ಚಿತ್ರಿಸಲು ಆಯ್ಕೆ |
| | - | ಮೈಸೂರು ಕಲಾಪ್ರದರ್ಶನದಲ್ಲಿ ಸುವರ್ಣ ಪದಕ |
| 1955 | - | ಋಷಿವ್ಯಾಲಿ ಪಬ್ಲಿಕ್ ಸ್ಕೂಲಿನಲ್ಲಿ ಕಲಾ ಶಿಕ್ಷಕರಾಗಿ ಉದ್ಯೋಗ |
| 1957 | - | 'ಚಂದಮಾಮ' ಪತ್ರಿಕೆಗೆ ವಾಪಸ್ಸಾದುದು; ಮಹಾಭಾರತ ಸರಣಿ ರಚನೆ |
| 1963-65 | - | ಬೆಂಗಳೂರಿನ 'ತಾಯಿನಾಡು' ಸಂಸ್ಥೆಯಲ್ಲಿ ಕಲಾ ನಿರ್ದೇಶಕ |
| 1966 | - | ಬೆಂಗಳೂರಿನ ಗಾಂಧಿನಗರದಲ್ಲಿ ಸ್ವತಂತ್ರ ಸ್ಟುಡಿಯೊ |
| 1969 | - | ಆಚಾರ್ಯ ಚಿತ್ರಕಲಾ ಭವನ ಹಾಗೂ ಅಂಚೆ ಮೂಲಕ ಕಲಾಶಿಕ್ಷಣದ ಆರಂಭ. |
| 1973 | - | ಸೋವಿಯತ್ ಪ್ರವಾಸ |
| 1980 | - | ಕರ್ನಾಟಕ ಚಿತ್ರಕಲಾವಿದರ ಮಹಾಪರಿಷತ್ತಿನ ಗೌರವ ಅಧ್ಯಕ್ಷರಾಗಿ ಆಯ್ಕೆ |
| | - | ರಾಜ್ಯ ಲಲಿತ ಕಲಾ ಅಕಾಡೆಮಿ ಗೌರವ ಪ್ರಶಸ್ತಿ |
| 1985 | - | 'ಕಲೆ ಮತ್ತು ನಾನು' ಪುಸ್ತಕ ಪ್ರಕಟಣೆ |
| 1989 | - | ಕರ್ನಾಟಕ ಸರ್ಕಾರದಿಂದ ರಾಜ್ಯಪ್ರಶಸ್ತಿ |

ರುವ ಶ್ರೀಮತಿ ವಿಜಯಲಕ್ಷ್ಮಿ ಆಚಾರ್ಯ ಅವರದು. ಈ ಶಾಲೆಯು ಅವಿಭಾಜ್ಯ ಅಂಗ ಎನ್ನುವಷ್ಟು ಕ್ರಿಯಾಶೀಲರಾಗಿರುವ ಆಚಾರ್ಯರ ಅರ್ಧಾಂಗಿ ವಿಜಯಲಕ್ಷ್ಮಿ ಅವರು ಆಚಾರ್ಯರಿಗೆ ಸಮರ್ಥ ಸಂಗಾತಿ.

ಕಲಾಭವನದ ಎರಡು ದಶಕ, ಅಂಚೆ ಶಿಕ್ಷಣದ ವಿನೂತನ ಯೋಜನೆಯ ಯಶಸ್ಸು ವೈಯಕ್ತಿಕ ಕಲಾ-ಸಾಧನೆಯ ಐದು ದಶಕ ಹಾಗೂ ಮತ್ತೀಗ ಎಪ್ಪತ್ತರ ಗಡಿಮುಟ್ಟಿರುವ ಆಚಾರ್ಯರು ಮತ್ತಷ್ಟು ಸಿದ್ಧರಂತೆ ಪ್ರಬುದ್ಧರಂತೆ ಕಾಣುತ್ತಾರೆ. ಇಂಥವರ ಕೆಲಸಕ್ಕೆ ಕುಮ್ಮಕ್ಕು ನೀಡುವುದು, ಇವರ ಅಭಿನಂದನೀಯ ಕೆಲಸವನ್ನು ಉಳಿಸಿ-ಬೆಳೆಸಿಕೊಂಡು ಹೋಗಲನುವಾಗುವಂತೆ ಸರಕಾರ, ಸಂಘಸಂಸ್ಥೆಗಳು ನಿಜಕ್ಕೂ ಅರ್ಥಪೂರ್ಣವಾದ ಯೋಜನೆಗಳನ್ನು ಹಮ್ಮಿಕೊಳ್ಳಬೇಕೆಂಬುದು ಕಲಾಪ್ರಿಯರ ಕಳಕಳಿಯ ಆಶಯ.

●

# ಸಾಕ್ಷರರು ರಾಕ್ಷಸರೇ?

ಎಚ್. ಪಾಂಡುರಂಗ ವಿಠಲ

> *'ಹಗಲಿರುಳೆನ್ನದೆ ಕಣ್ಣುಗಳು ಹಾಳಾಗುವಷ್ಟು ಪುಸ್ತಕಗಳನ್ನು ಓದಿ ಓದಿ ಇವರು ಸಂಶೋಧಿಸುತ್ತಿರುವುದಾದರೂ ಏನನ್ನು? ಸಮೀಪ ದೃಷ್ಟಿದೋಷ ನಿವಾರಣೆಗೆ ಹೊಸ ಗಾಜನ್ನು!'*
>
> – ಪುಕೊವಾಕ

ರಾಬರ್ಟ್ ಡಿಶ್ ಎಂಬಾತ 'ಅಕ್ಷರತೆಯ ಭವಿಷ್ಯ' ('Futureof Literacy') ಎಂಬ ಪುಸ್ತಕವನ್ನು ಸಂಪಾದಿಸಿ ಪ್ರಕಟಿಸಿದ್ದಾನೆ. ಅಕ್ಷರತೆಯ ಆಂದೋಳನದ ಚರಿತ್ರೆಯನ್ನು ವಿಶ್ಲೇಷಿಸಿ ಈ ಅಕ್ಷರತೆ ಭೀಕರ ಮಹಾಯುದ್ಧಗಳಿಗೆ ಎಡೆ ಮಾಡಿಕೊಟ್ಟ ರೀತಿಯನ್ನು ಇಂತಹ ಜ್ಞಾನದ ಭ್ರಮೆಗಳನ್ನು ಬಯಲಿಗೆಳೆಯುವುದು ಇದರ ಉದ್ದೇಶ.

ಅರಿಸ್ಟಾಟಲ್ ಅಕ್ಷರತೆಯ ಜ್ಞಾನದ ಬಗ್ಗೆ ತುಂಬ ಆಶ್ಚರ್ಯಕರ ಭವಿಷ್ಯ (ಫೀಡ್ರಸ್‌ನಲ್ಲಿ) ನುಡಿದಿದ್ದಾನೆ: ಲಿಖಿತ ಪುಸ್ತಕ ಅನೇಕ ಅಪಾರ್ಥಗಳಿಗೆ ಪಕ್ಕಾಗುತ್ತದೆ. ಅದರ ಸಂಕೀರ್ಣತೆಗೆ ಒಗ್ಗದವ ಓದಿದಾಗ ಅಪಾರ್ಥ ಇನ್ನೂ ಹೆಚ್ಚು. ಧ್ವನಿ ಮತ್ತು ನಿರಂತರ. ತಿದ್ದುವಿಕೆಗೆ ಒಳಪಟ್ಟ ಬಾಯಿಮಾತಿನಂತೆ ಇಲ್ಲದೆ, ಪುಸ್ತಕ ಮೂಕವಾಗಿದೆ. ಮಾತಾಡುವಾಗ ಎಲ್ಲರೂ ಮಾಡುವಂತೆ ಅದು ತಪ್ಪು ಗ್ರಹಿಕೆಯ ವಿರುದ್ಧ ತನ್ನನ್ನು ರಕ್ಷಿಸಿಕೊಳ್ಳದು - ಉಪಯೋಗಿಸಿದ ಪದರಚನೆಗಳನ್ನು ಸ್ಪಷ್ಟಗೊಳಿಸಲಾರದು; ತರ್ಕದಲ್ಲಿರುವ ಕೊರತೆಗಳನ್ನು ರಿಪೇರಿ ಮಾಡಲಾರದು. ವಾಸ್ತವಿಕ ಕಲೆಯ ಚಿತ್ರದ ಆಕೃತಿಗಳಂತೆ ಶಬ್ದಗಳು ಜೀವ ತಳೆದಂತೆ ನಮ್ಮೆದುರು ನಿಲ್ಲುತ್ತವೆ. ಆದರೆ ಆ ಪುಸ್ತಕದ ಅರ್ಥದ, ಅನ್ವಯದ ಬಗ್ಗೆ ಪ್ರಶ್ನಿಸಲು ಪ್ರಯತ್ನಿಸಿದರೆ ಆ ಶಬ್ದಗಳು ಅವೇ ವಾಕ್ಯಗಳನ್ನೇ ಮತ್ತೆ ಮತ್ತೆ ಪುನರಾವರ್ತಿಸುತ್ತವೆ. ಈ ಪರಿಮಿತಿಗಳಿಂದಾಗಿ ಬರಹದ ಮೇಲೇ ಅವಲಂಬಿತರಾದ ಶಿಕ್ಷಕರು 'ಪಠಿತಪಿತವಕ್ಕಿ' ತರಹದ ವಿದ್ಯಾರ್ಥಿಗಳ ಹುಟ್ಟಿಗೆ ಕಾರಣರಾಗುತ್ತಾರೆ. ಇವರು ತುಂಬಾ ವಿಷಯಗಳನ್ನು ತಿಳಿದಿದ್ದರಿಂದ ಬುದ್ಧಿವಂತರಂತೆ ಭಾಸವಾಗುತ್ತಾರೆ; ಆದರೆ ನಿಜವಾದ ಜ್ಞಾನದ ಬಗ್ಗೆ ಹೆಚ್ಚು ಭಾಗ ಏನೇನೂ ಗೊತ್ತಿರುವುದಿಲ್ಲ.

ಭಾರತದಲ್ಲಿ ಭಾಷಾ ಮರ್ಯಾದೆಗೆ ಮೊದಲು ಹೆಚ್ಚು ಮಹತ್ವವಿತ್ತು. ಮಂತ್ರದ ಉಚ್ಚಾರ, ಸ್ವರ ತಪ್ಪಿದರೆ ಅನರ್ಥ, ನರಕ ಎಂಬ ಭಾವನೆಯಿತ್ತು. ಅಕ್ಷರ ಕಲಿಯಲು ಅರ್ಹತೆ

ಮುಖ್ಯವಾಗಿತ್ತು; ಅಕ್ಷರತೆಯೇ ಮುಖ್ಯವಾಗಿರಲಿಲ್ಲ.

ಪಶ್ಚಿಮದಲ್ಲಿ 18ನೆ ಶತಮಾನದಲ್ಲಿ ಪಟ್ಟಭದ್ರ ಕುಲ ಸಂಸ್ಕೃತಿಯನ್ನು ಹತ್ತಿಕ್ಕಿ ಬೂರ್ಜ್ವಾ ಸಂಸ್ಕೃತಿ ಬೆಳೆಯಿತು. ರಾಜಕೀಯ-ಆರ್ಥಿಕ-ಸಾಂಸ್ಕೃತಿಕ ಶಕ್ತಿ ಗಳಿಸಿತು. ಮೇಲೇರಲು ಸಜ್ಜಾಗಿ ನಿಂತ ಮಧ್ಯಮವರ್ಗದ ಎದ್ದು ಕಾಣುವ ಗುಣವಾಗಿ ಅಕ್ಷರತೆ ಕಾಣಿಸಿತು. ಇದರ ಬೆಳವಣಿಗೆಗೆ ಎರಡು ಸಂದರ್ಭಗಳು ಮುಖ್ಯವಾದುವು.

ಮೊದಲನೆಯದಾಗಿ ಇದು ಮಧ್ಯಮವರ್ಗದ ವ್ಯಕ್ತಿಯನ್ನು ಅವನ ಕೆಳವರ್ಗದ ಹುಟ್ಟಿನಿಂದ ಬೇರ್ಪಡಿಸಿ, ಅವನ ವ್ಯಾಪಾರ ನಿರ್ವಹಣೆ, ಬಂಡವಾಳ ಶೇಖರಣೆ ಶಕ್ತಿಯ ಉಪಯೋಗಗಳಲ್ಲಿ ಸಹಕಾರಿ ಆಯುಧವಾಯ್ತು. ಕಾರ್ಲೊ ಸಿಪೊಲಾ ಗುರುತಿಸುವಂತೆ, ವಸಾಹತುಗಳಿಂದ ದೋಚಿದ ಕಚ್ಚಾ ವಸ್ತುಗಳಿಂದ ಕೈಗಾರಿಕಾ ಕ್ರಾಂತಿಯಾಗಿ, ತಾಂತ್ರಿಕತೆ ವರ್ಧಿಸಿದಂತೆ ಅಕ್ಷರಸ್ಥ ಪರಿಶಿಕ್ಷಿತ ಕೂಲಿಗೆ ಬೇಡಿಕೆ ಬೆಳೆಯಿತು.

ಎರಡನೆಯದಾಗಿ ಕ್ರೈಸ್ತ ಸುಧಾರಣಾವಾದಿಗಳು, ಮುಕ್ತಿಯ ಆಯುಧವೆಂದು ಅಕ್ಷರತೆಗೆ ಒತ್ತುಕೊಟ್ಟರು. ಬೈಬಲ್ಲನ್ನು ತಾವೇ ಓದಿ ತಮಗೆ ಬೇಕಾದ ನೀತಿ ಪಾಠಗಳನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯಕ್ಕಾಗಿ ಹೆಚ್ಚಿನ ಪ್ರಾಟೆಸ್ಟೆಂಟ್ ಶಾಲೆಗಳು ತೆರೆದವು.

19ನೆ ಶತಮಾನದ ಮಧ್ಯದಲ್ಲಿ ಅಕ್ಷರತೆ ಮತ್ತು ಅಭಿವೃದ್ಧಿ ಒಂದೇ ಎನ್ನುವಂತಾಯಿತು. ಅಭಿವೃದ್ಧಿಯ ಕುರುಹು ಸಂಕೇತವಾಗಿಬಿಟ್ಟ ಅಕ್ಷರತೆ ಪ್ರತಿಶತ 70ರಷ್ಟಾಯಿತು. ಕೆಲ ಮೇಧಾವಿಗಳಂತೂ ಯುಟೋಪಿಯಾದ ಕೊನೆ ಮೈಲಿಗಲ್ಲು ಸಾರ್ವತ್ರಿಕ ಅಕ್ಷರತೆ ಎಂದು ನಂಬಿದ್ದರು! ಮ್ಯಾಥ್ಯೂ ಆರ್ನಾಲ್ಡ್ ಆಗಿನ ಮೌಲ್ಯಗಳ ವಿಚ್ಛೇದನದ ವಾತಾವರಣದಲ್ಲಿ ಸಾಹಿತ್ಯವು ಅತ್ಯುತ್ತಮ ಯೋಚನೆಗಳು, ಬರಹಗಳನ್ನು ಸಂಗ್ರಹಿಸಿ ಕಾಪ್ಪಿಡಗೊಳಿಸುವುದಾಗಿಯೂ, ಚದುರಿದ ಜೀವನವನ್ನು ಒಗ್ಗೂಡಿಸುವುದಾ

---

**ಅಕ್ಷರ ಸಂಸ್ಕೃತಿಯಿಂದ ಮಾನವೀಯತೆಯ ಅವನತಿಯೆ?**

*ಪಾಶ್ಚಾತ್ಯರ ಈ ಅಕ್ಷರ ಸಂಸ್ಕೃತಿ ಕೈಗಾರಿಕಾ ಕ್ರಾಂತಿಯಿಂದ ಒಂದು ಗುಂಪು ಉತ್ಪಾದನೆಯ ಅಂಗಗಳನ್ನು ಮೈಗೂಡಿಸಿದೆ. ವ್ಯಕ್ತಿ ವಿಶಿಷ್ಟತೆಗೆ ಬೆಲೆಯಿಲ್ಲ. ಇರುವ ಕಾಡನ್ನು ತೆಗೆದು ನೀಲಗಿರಿ ಮರ ನೆಟ್ಟಂತೆ ಇದು. ಒಂದೇ ಜಾತಿಯ ಮರಗಳ ಅರಣ್ಯದಿಂದ ಎಂತಹ ಹಾನಿಯಾಗಿದೆ ಎಂಬುದು ಎಲ್ಲರಿಗೂ ತಿಳಿದದ್ದೆ. ಅಕ್ಷರತೆಯು ಮಾನವೀಯತೆಯ ಪ್ರಭಾವಕ್ಕೆ ಒಳಪಡಿಸುವುದರಿಂದ ಎಲ್ಲಾ ಜನರನ್ನು ಮಾನವೀಯಗೊಳಿಸಬಹುದೆಂದು ಎರಡನೇ ಮಹಾಯುದ್ಧಕ್ಕೆ ಮೊದಲು ಎಲ್ಲಾ ಶಿಕ್ಷಿತರೂ ನಂಬಿದ್ದರು. ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯಲು ಸಾರ್ವತ್ರಿಕ ಅಕ್ಷರತೆಯ ಸಂಸ್ಕೃತಿಗೆ ಮಾತ್ರ ಸಾಧ್ಯವೆಂಬ ಈ ನಂಬಿಕೆ ಹುಸಿಯೆಂದು ನಾಜಿಗಳು ತೋರಿಸಿದರು.*

*ನಾಜಿಗಳಿಗೆ ನಾಯಕರು ಯಾರು? ನೀಷೆ, ಗಯಟೆ, ಮೊಜಾರ್ಟರ ಭಕ್ತರೇ! ಪ್ರಚಾರ ನಿಪುಣ ಗೊಬೆಲ್ಸ್ ಸಾಹಿತ್ಯದಲ್ಲಿ ಪಿಎಚ್.ಡಿ.! ನಾಜಿಗಳಿಗಿಂತಲೂ ಭೀಕರ ಕ್ರೌರ್ಯತೆ ತೋರಿದ ವಿಯಟ್ನಾಂ ಯುದ್ಧಕ್ಕೆ 1960ರಲ್ಲಿ ಅಮೆರಿಕವನ್ನು ತಳ್ಳಿದವರಾರು? ಅಮೆರಿಕದ ಅತ್ಯುತ್ತಮ, ಅತ್ಯುನ್ನತ ಜ್ಞಾನಿಗಳ 'New Mandarins' ಸಭೆ! ಯುದ್ಧೋಪಕರಣಗಳ ತಯಾರಿಯಲ್ಲಿ ಸಹಕಾರಿಯಾದ ಸಂಶೋಧನೆಗಳಲ್ಲಿ ಈಗಲೂ ಹಣಕ್ಕಾಗಿ ಗೌರವಕ್ಕಾಗಿ ದುಡಿಯುತ್ತಿರುವವರಾರು? ''ನಿಷ್ಪಾಪಿ'' ವಿಜ್ಞಾನಿಗಳೇ. ಇವರೆಲ್ಲ ಪಡೆದ ಅಕ್ಷರತೆಯ ಸಂಸ್ಕೃತಿ ಅಮಾನವೀಯವಲ್ಲವೆ?*

ಗಿಯೂ ನಂಬಿದ್ದ.

ಹೀಗೆ 20ನೆ ಶತಮಾನದಲ್ಲಿ ಅಕ್ಷರತೆಯ ಬಗ್ಗೆ ಎರಡು ಮನೋಧರ್ಮಗಳಿವೆ. ಒಂದು, ಪ್ರಯೋಜನ ದೃಷ್ಟಿ ಪ್ರಧಾನವಾದ, ವೈಯಕ್ತಿಕ ಸಾಮಾಜಿಕ ಅಭಿವೃದ್ಧಿಗಾಗಿ ಪ್ರಾಯೋಗಿಕ ಜ್ಞಾನದ ಹರಡುವಿಕೆ (ಪಠ್ಯಪುಸ್ತಕಗಳ ರೀತಿ). ಅಭಿವೃದ್ಧಿಯಿಂದಾದ ಸಂಕೀರ್ಣ ತೊಂದರೆಗಳು ಹಾಗೂ ಧರ್ಮದ ಸಾವಿನಿಂದ ವಿಕ್ಷಿಪ್ತಗೊಂಡು ಬತ್ತಿ ಹೋದ ಪಾಶ್ಚಿಮಾತ್ಯ ಉತ್ಸಾಹವನ್ನು ಪಾರು ಮಾಡುವ ಕಲಾತ್ಮಕ ಆಧ್ಯಾತ್ಮಿಕ ಸಾಧನ (ಕಾವ್ಯದ ರೀತಿ) ಎರಡನೆಯ ರೀತಿ.

ಬಾಯಿ ಭಾಷೆಯ ಸಮಾಜದಲ್ಲಿ ಭೂತ ಕಾಲದ ಬಗ್ಗೆ ರಚನಾತ್ಮಕ ಮರೆವು ಇದ್ದು ಸಾಧ್ಯವಿದ್ದಷ್ಟು ನೆನಪಲ್ಲಿರುತ್ತೆ - ಅದು ಪದಗಳಲ್ಲಿ ಇರದು. ಜ್ಞಾನಕ್ಕೆ ದೇಶ-ಕಾಲಗಳಲ್ಲಿ ಶಾಶ್ವತತೆ ನೀಡುವ ಮುದ್ರಣದ ಗುಣ ಈ ದೃಷ್ಟಿಯಿಂದ ನೋಡಿದಾಗ ಅವಗುಣವಾಗುತ್ತದೆ. ಈಗ ಎಂತಹ ''ಅಗಾಧ'' ಜ್ಞಾನ ಶಾಶ್ವತಗೊಂಡಿದೆ ಎಂದರೆ ಒಂದೊಂದು ತೀರ ಸಣ್ಣ ಶಾಖೆಯಲ್ಲಿ ಬಂದ ಸಾಹಿತ್ಯವನ್ನೂ ಪಂಡಿತನೊಬ್ಬ ಓದಲು ಅಸಾಧ್ಯ. ಪುರಾಣ ಕತೆಯೊಂದರಲ್ಲಿ ಚಿರಂಜೀವಿತ್ವದ ಕೊಳದೊಳಕ್ಕೆ ಇಳಿಯಲಿದ್ದ ರಾಜಕುಮಾರ ಅಲ್ಲಿನ ಮುದಿ ಹಪ್ಪಾದ ಆದರೂ ಸಾಯಲು ಅಸಾಧ್ಯವಾದ ಮೊಸಳೆಗಳ ಸ್ಥಿತಿ ನೋಡಿ ಹೆದರಿದನಂತೆ! ವೈಜ್ಞಾನಿಕ ಸಾಹಿತ್ಯವಿರಲಿ - ಶುದ್ಧ ಸಾಹಿತ್ಯದ ಪರಿಸ್ಥಿತಿಯೂ ಹೀಗೇ. ಹೊಸ ಲೇಖಕರಿಗೆ ಗಮನವೇ ಸಿಕ್ಕದೆ, ನಮ್ಮ ಸಾಹಿತ್ಯ ವಿದ್ಯಾರ್ಥಿಗಳಿಗಿನ್ನೂ ಕಾಮು-

ಕಾಫ್ಕರೇ ಅಧ್ವರ್ಯುಗಳು! ನಾಟಕ ಸಾಯಲು ಬರಹದ ಪದವೇ ಕಾರಣ ಎಂದು ಪಿಶ್ಲೇಷಿಸುವ ಅಯುನೆಸ್ಕೋ ನಿಜವನ್ನು ಬರಹದ ಭಾಷೆ ಮಸುಕುಗೊಳಿಸುತ್ತದೆಂದ. ಪ್ಲೇಟೋ ಕಾವ್ಯವನ್ನು ಬೈದದ್ದು ಈ ಹೊರಗೇ ಉಳಿಯುವ ಜ್ಞಾನವನ್ನು ತಿರಸ್ಕರಿಸಲೆಂದೇ. ಡಿ.ಎಚ್.ಲಾರೆನ್ಸ್‌ನಂತೂ ಜನ ಜಂಗುಳಿಗೆ ಓದು ಬರಹ ಕಲಿಸಲೇ ಬಾರದು ಎನ್ನುತ್ತಾನೆ!

ಅಕ್ಷರ ಜ್ಞಾನ ಇಲ್ಲದ ಅಥವಾ ಅಪರೂಪವಾದ ಸಮಾಜಗಳಲ್ಲಿ ಅಕ್ಷರತೆ ಪಡೆದಾಗ ರಾಜಕೀಯ-ಸಾಂಸ್ಕೃತಿಕ ರಚನೆಯೇ ಸಂಪೂರ್ಣ ಬದಲಾಗುವುದು ಅಧ್ಯಯನದಿಂದ ತಿಳಿದಿದೆ

ಸಂಸ್ಕೃತಿ-ಭಾಷೆ-ಭ್ರಷ್ಟಭಾಷೆ-ಕ್ರೂರ ಘಟನೆಗಳು ಇವುಗಳ ನಡುವಿನ ಸಂಬಂಧ ಖಚಿತವಾಗಿಲ್ಲ. ನಿರ್ದಯವಾಗಿ ಜನರನ್ನು ಕೊಲ್ಲುವ ಮತಾಂಧರ, ಆತಂಕವಾದಿಗಳ ಆತಂಕಕ್ಕೆ ಭಾಷೆ ಹುಟ್ಟಿಸಿದ ಭ್ರಮೆ ಬಹುಮಟ್ಟಿಗೆ ಕಾರಣ. ಭಾಷೆಯ ಭ್ರಷ್ಟತೆಯೇ ಮಾನವೀಯ ಸಂಸ್ಕೃತಿ ನಾಗರಿಕ ರಾಜಕಾರಣದ ಅವನತಿಗೆ ಕಾರಣವೆಂದು ಡಗ್ಲಾಸ್ ಬುಷ್ ಹೇಳುತ್ತಾನೆ.

ಅಕ್ಷರಸ್ಥರು ಮುದ್ರಿತ ಪದಗಳನ್ನು ಸತ್ಯವೆಂದೇ ಅವರಿಗೆ ಅರಿವಿಲ್ಲದೆಯೇ ನಂಬುವರು. ಅವರ ತಾವು ತಿಳಿದಿದ್ದನ್ನು ಇತರರಿಗೆ ತಿಳಿಸುವ ಸಾಮಾಜಿಕ ಪ್ರಜ್ಞೆ ಅವರಿಗಿಲ್ಲ (ಈ ಸಂವಾದ ಮಾಧ್ಯಮದ ಕೊರತೆ ಅನಕ್ಷರಸ್ಥರಲ್ಲಿ ಇಷ್ಟೊಂದು ಮಟ್ಟಿಗೆ ಇಲ್ಲ). ಜ್ಞಾನದ ವರ್ಗಾ

### ಅಕ್ಷರತೆ ಒಳ್ಳೆಯದೆ?

*ಅಕ್ಷರತೆಯ ಭಾಷಾಜ್ಞಾನ ಹರಡುವಿಕೆಯಿಂದ ಒಳಿತಾಗದೆಂದ ರೋಜರ್ ಬೇಕನ್ ಇವರಿಂದ ಭವಿಷ್ಯದಲ್ಲಿ ಪಾಪರುತನದ ಆಟವಾಗಿ ಪುಸ್ತಕಗಳು ಬರುವುವೆಂದ. ಮುದ್ರಣದಿಂದ ಬೆಳಕು ಕಂಡ ಪ್ರಾಚೀನ ಜ್ಞಾನ ಅವರಿಂದಲೇ ನಶಿಸುವುದೆಂದ ಫೋಪ್. ನೀಷೆಯದು ಇನ್ನೂ ತೀಕ್ಷ್ಣ ಮಾತು - 'ಆಧುನಿಕ ಮನಸ್ಸನ್ನು ಕವಿದ ಈ ಕತ್ತಲು ಕ್ರಮೇಣ ಮನುಷ್ಯನನ್ನು ನಡೆದಾಡುವ ವಿಶ್ವಕೋಶವನ್ನಾಗಿಸುವುದು; ಜೀರ್ಣವಾಗದ ಅಗಾಧ ಜ್ಞಾನದ ತಿಪ್ಪೆಯನ್ನೇ ಆತ ಹೊತ್ತು ನಡೆದಾಗ ಆ ತುಣುಕುಗಳು ಆಗಾಗ ಅವನ ದೇಹದಲ್ಲಿ* ***ತಾಕಲಾಡಿ ಕಟಕಟಿಸುವುವು.'***

*ಅವಿದ್ಯೆ-ವಿದ್ಯೆಗಳ ಬಗ್ಗೆ ಈಶಾವಾಸ್ಯ ಉಪನಿಷತ್ತಿನ ಮಂತ್ರವೊಂದು ಮೇಲ್ನೋಟಕ್ಕೆ ನೀಷೆಯ ಮಾತನ್ನೆ ಹೇಳುವಂತಿದೆ: 'ಅಂಧಂ ತಮಃ ಪ್ರವಿಶಾಂತಿ, ಯೇ ವಿದ್ಯಾಮುಪಾಸತೇ। ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ಯಾರು ಅವಿದ್ಯೆಯನ್ನು (ಅಪರಾವಿದ್ಯೆ-ಲೌಕಿಕವು) ಉಪಾಸಿಸುವರೋ ಅವರು ಕುರುಡುಗತ್ತಲೆಯನ್ನು ಪ್ರವೇಶಿಸುವರು: ಯಾರು ವಿದ್ಯೆಯಲ್ಲಿ (ಪರಾ) ನಿರತರಾಗುವರೋ ಅವರು ಅದಕ್ಕಿಂತ ಹೆಚ್ಚಿನ ಕತ್ತಲೆಯನ್ನು ಪ್ರವೇಶಿಸುವರು. (ಈ ಕತ್ತಲೆಯ ಸ್ವರೂಪವೇನೆಂಬ ಜಿಜ್ಞಾಸೆ ಇನ್ನೂ ನಡೆದಿದೆ) ನವ ವಿದ್ಯಾವಂತರ ಕತ್ತಲು ಅಮಾನವೀಯತೆಯೇ. ಆದರೆ ಪ್ರಾಚೀನ ಭಾರತದಲ್ಲಿ ಅಕ್ಷರವಿದ್ಯೆಗೇ ಪ್ರಾಶಸ್ತ್ಯವಿದ್ದಂತೆ ಕಾಣುವುದಿಲ್ಲ. ಗುರುಕುಲಗಳು ಜೀವನವಿದ್ಯೆಯನ್ನು ಹೇಳಿಕೊಡುತ್ತಿದ್ದುವು. ತೈತ್ತಿರೀಯದ ಶಿಕ್ಷಾವಲ್ಲಿಯಲ್ಲಿ ಶಿಕ್ಷಣ ಪ್ರಾರಂಭದಲ್ಲಿ ಗುರು ಶಿಷ್ಯರು ಒಟ್ಟಿಗೆ ಹೇಳುತ್ತಿದ್ದ ಮಾತು ಇದು: ''ನಾವಿಬ್ಬರೂ ಕಲಿಯುವ ವಿದ್ಯೆಯಿಂದ ತೇಜಸ್ವಿಗಳಾಗೋಣ - ನಮ್ಮ ನಡುವೆ ವಿದ್ವೇಷ ಉಂಟಾಗದಿರಲಿ.'' ಗುರು ಶಿಷ್ಯನಿಗೆ ''ಯುಕ್ತವಾದ ಗುಣಗಳನ್ನು ಮಾತ್ರ ಅನುಸರಿಸು - ಉಳಿದವನ್ನಲ್ಲ'' ಎನ್ನುತ್ತಾನೆ!*

*ಈ ವಿದ್ವೇಷ ಉಂಟಾಗದ ವಿದ್ಯೆಯನ್ನು ನಮ್ಮ ವಿಶ್ವವಿದ್ಯಾಲಯಗಳ ಪಂಡಿತರು ಕಲಿತಿರುವರೆ? ಅಕ್ಷರ ವಿದ್ಯೆಯಿಂದ ಒಳ್ಳೆಯದಾಗುವುದೆ ಎಂಬ ಪ್ರಶ್ನೆಗೆ ಉತ್ತರ ಇಲ್ಲಿ ಇದೆ.*

ವಣೆಗೆ ಈ ವಿಚಿತ್ರ ರೀತಿಯ ಮಾನಸಿಕ ತಡೆ ಅಡ್ಡಿಯಾಗಿದೆ. ನಮ್ಮ ದೇಶದ ಸುಸಂಘಟಿತ ನೌಕರ-ವ್ಯಾಪಾರಿ-ಪಡೆ-ದೇಹದಲ್ಲಿ ಸುಖವಾಗಿದ್ದು ಜಂತುಹುಳುಗಳು ಸಾರಹೀರುವಂತೆ - ಅಭಿವೃದ್ಧಿಯ ಸಾರವನ್ನು ಹೀರಿ ದೇಶವನ್ನು ಸೊರಗಿಸುತ್ತಿರುವ ರೋಗಕ್ಕೆ ಬ್ರಿಟಿಷರು ಅಕ್ಷರತೆಗೆ ಕೊಟ್ಟ ಒತ್ತು, ಅವರ ಬಳುವಳಿಯಾದ ಶಿಕ್ಷಣ ಎಷ್ಟು ಮಟ್ಟಿಗೆ ಕಾರಣ ಎಂಬುದನ್ನು ಸಂಶೋಧಿಸಬೇಕು. ಕಮ್ಯೂನಿಕೇಶನ್ ತಾಂತ್ರಿಕತೆಯಿಂದ ಲಭ್ಯವಾದ ಲಾಭ ಮಾನವೀಯತೆಯ ನಾಶದಲ್ಲಿ ಸೋರಿಹೋಗಿದೆ.

ಮುಂದುವರೆದ ದೇಶಗಳಲ್ಲೀಗ ಅಕ್ಷರತೆಯ ಭ್ರಮೆ ಕಡಿಮೆಯಾಗಿದೆ. ಯಾವ ಪಶ್ಚಿಮ ಸರಕಾರವೂ ಪುಸ್ತಕಗಳನ್ನು ಸೆನ್ಸಾರಿಗೆ ಒಳಪಡಿಸದು. ಜನಾಭಿಪ್ರಾಯ ರೂಪಿಸುವಲ್ಲಿ ಟಿವಿ, ಬಳಿಕ ರೇಡಿಯೋ, ಅನಂತರ ಪತ್ರಿಕೆ ಮಾತ್ರ ಸಹಕಾರಿ -ಪುಸ್ತಕಗಳಿಗೀಗ ಕಾಲವಿಲ್ಲ. ಅಲ್ಲಿ ಸ್ಪರ್ಶ ಚಿಕಿತ್ಸೆ, ದೇಹಪ್ರಜ್ಞೆ, ಥೀಡ್ರಸ್‌ನಲ್ಲಿ ಸಾಕ್ರಟೀಸ್ ಹೇಳುವಂತೆ ವಿವೇಕ ಮೂಡಿಸುವ ಶಕ್ತಿಯಾಗಿ ಬಾಯಿ ಮಾತನ್ನು ಉಪಯೋಗಿಸುವ ಗುಂಪು ಚಿಕಿತ್ಸೆ - ಕ್ರಮೇಣ ಬೆಳೆಯುತ್ತಿದೆ. ಅಕ್ಷರತೆಯ ಮುನ್ನೂರು ವರ್ಷಗಳ ಪ್ರಭುತ್ವದ ಅನಂತರ ಈಗ ಭಾವನಾತ್ಮಕ ಮನೋವೈಜ್ಞಾನಿಕ ಪೂರ್ಣತೆಗೆ ಪುಸ್ತಕಗಳ ಕೊಡುಗೆ ಅತ್ಯಲ್ಪವಾಗುತ್ತಿದೆ. ಬ್ಲಾಕ್‌ಮರ್ ಮುಂದಿನ ಯುಗದ ಅಭಿವ್ಯಕ್ತಿಯಲ್ಲಿ ಪದಗಳೇ ಇರದು, ನಾವೆಲ್ಲ ಈ 3000 ವರ್ಷಗಳಿಂದ ತಿಳಿದು ಬಂದ ಅಕ್ಷರತೆ ಕಾಣಲಿಕ್ಕೂ ಸಿಕ್ಕದು ಎಂದು ಭವಿಷ್ಯ ನುಡಿಯುತ್ತಾನೆ.

ಒಟ್ಟಿನಲ್ಲಿ ಈಗ ಅಕ್ಷರಸ್ಥ ತಾನು ಪಡೆದ ಎರವಲು ಜ್ಞಾನವನ್ನು ಅರಗಿಸಿಕೊಳ್ಳಲಾರದೆ ನಿರಕ್ಷರಕುಕ್ಷಿಯಾಗಿದ್ದಾನೆ! (ಆಧಾರಿತ)

*

# ಇದಮ್ಮಾ ಜೀವ ಇದು ಜೀವನಾ

ಇದು 10-12 ವರ್ಷದ ಹಿಂದಿನ ಮಾತು. ಆಗ ತಾನೇ ಕಾಲೇಜು ಶಿಕ್ಷಣ ಮುಗಿಸಿ ನಗರದ ಸರ್ಕಾರಿ ಸ್ವಾಮ್ಯದ ಕಾರ್ಖಾನೆಯೊಂದರಲ್ಲಿ ಉದ್ಯೋಗಸ್ಥಳಾದೆ. ಪುಟಿಯುವ ಹುಮ್ಮಸ್ಸು, ವಯಸ್ಸು, ಪ್ರಪಂಚದ ವ್ಯವಹಾರ ಜ್ಞಾನ ಎಳ್ಳಷ್ಟೂ ಇಲ್ಲ. ಬೆಳ್ಳಗಿರುವುದೆಲ್ಲಾ ಹಾಲೆಂದು ನಂಬುವ ಅಮಾಯಕತೆ. ನಮ್ಮ ಮನೆಯ ಎದುರಿನಲ್ಲೇ ಒಬ್ಬಾತ, ನಾನು ಕೆಲಸ ಮಾಡುತ್ತಿದ್ದ ಕಾರ್ಖಾನೆಯಲ್ಲೇ ಉದ್ಯೋಗಿ. ಒಂದೇ ಬಸ್ಸಿನಲ್ಲಿ ದಿನವೂ ಓಡಾಡುತ್ತಿದ್ದೆವು. ನಾನು ಕೆಲಸಕ್ಕೆ ಸೇರಿದ ಒಂದೆರಡು ತಿಂಗಳಲ್ಲೇ ಆತ ನನ್ನ ಬಳಿ ಬಂದು, "ನೋಡಿ ಯಾರಿಗಾದೂ, ಬೇಕಿದೆ, ಹೇಳಿ, ನಮ್ಮ ಕಾರ್ಖಾನೆಯಲ್ಲೇ ಕ್ಲರ್ಕ ಕೆಲಸ ಖಾಲಿ ಇದೆ, ನಾಲ್ಕ ನೂರು ರೂ. ಕೊಟ್ಟರೆ ಇನ್ನೊಂದು ವಾರದೊಳಗೆ ಇಂಟರವ್ಯೂ ಗ್ಯಾರಂಟಿ" ಎಂದು ಹೇಳಿದ. ಆತನಿಗಾಗಲೇ ಸಾಕಷ್ಟು ಪರಿಚಯವಾಗಿತ್ತು. ಥಕ್ಕನೆ ನನಗೆ ನನ್ನ ಚಿಕ್ಕಪ್ಪನ ಮಗ ಕೆಲಸಕ್ಕಾಗಿ ತುಂಬಾ ಪ್ರಯತ್ನಪಡುತ್ತಿದ್ದುದು ನೆನಪಿಗೆ ಬಂತು. ಅವನಿಗೆ ಹೇಳಿದ ಕೂಡಲೇ ದುಡ್ಡು ಹೊಂದಿಸಲು ಏನು ಮಾಡುವಟ್ಟನೋ ಅಂತೂ ಮರುದಿನವೇ ತಂದುಕೊಟ್ಟ. ನನಗೆ ವಿದ್ಯೆ ಇದ್ದರೆ ಬುದ್ಧಿ ಇರಬೇಕಲ್ಲಾ

ಅಂತಹ ನಿಯಮವೂ ಇಲ್ಲವಷ್ಟೆ? ಹಿಂದು ಮುಂದು ಯೋಚಿಸದೇ, ಯಾರಿಗೂ ತಿಳಿಯದಂತೆ, ಯಾರನ್ನೂ ಸಾಕ್ಷಿಯಾಗಿಟ್ಟುಕೊಳ್ಳದೆ ಆ ವ್ಯಕ್ತಿಗೆ ಹಣ ಕೊಟ್ಟು ಬಿಟ್ಟೆ. ಆ ನಂತರ ವಾರವಾಯಿತು, ಎರಡಾಯಿತು, ತಿಂಗಳಾಯಿತು ಈ ಬಗ್ಗೆ ಅವನಿಂದ ಯಾವ ಸುದ್ದಿಯೂ ಇಲ್ಲ. ಯಾವಾಗ ಕೇಳಿದರೂ ಏನಾದರೂ ನೆಪ ಹೇಳಿ ತಪ್ಪಿಸಿಕೊಳ್ಳುತ್ತಿದ್ದ. ವಿಧಿಯಿಲ್ಲದೆ ಕಡೆಗೆ ಅವರ ಮನೆಗೆ ಹೋದೆ. ಆಗಲೂ ಸಿಗಲಿಲ್ಲ. ಅವರ ಪತ್ನಿಯ ಬಳಿ ಇದ್ದ ವಿಷಯವನ್ನೆಲ್ಲಾ ಹೇಳಿದೆ. ಕೂಡಲೇ ಆಕೆ "ನೀವ್ಯಾಕ್ರಿ ಅವನಿಗೆ ದುಡ್ಡು ಕೊಟ್ರಿ, ಅವನೇನು ಅಲ್ಲಿ ಆಫೀಸರಾ....? ಅಲ್ಲಿ ತೋಟದಲ್ಲಿ ಕೆಲಸ ಮಾಡುತ್ತಾನೆ. ಸಾಯಂಕಾಲ ಆದ ಕೂಡಲೇ ಕುಡಿದು ತೂರಾಡ್ಕೊಂಡು ಬರ್ತಾನೆ." ನಿಮಗೆ ಬುದ್ಧಿ ಇರಬೇಕಾಗಿತ್ತು." ಎಂದು ಒಂದೇ ಸವನೇ ಹೀಯಾಳಿಸಿದಳು. ನನಗೆ ಮಂಕು ಕವಿದಂತಾಯಿತು. ಸ್ವಲ್ಪ ಹೊತ್ತಿಗೆ ಆತ ಬಂದ. ಶರೀರದ ಮೇಲೆ ಸಮತೋಲನ ಕಳೆದುಕೊಳ್ಳುತ್ತಾ, ಕೆಂಡದುಂಡೆಗಳಂತಿದ್ದ ಕಣ್ಣುಗಳನ್ನು ನನ್ನತ್ತ ತಿರುಗಿಸುತ್ತಲೇ ನಾನು ಮನೆಯ ಕಡೆ ಓಡಿದೆ. ಅದು ತಿರುಗಿ

ಕೊಡಬಾರದೆಂಬ ಸಾಮಾನ್ಯ ಪರಿಜ್ಞಾನವೂ ಆಗ ನನಗಿರಲಿಲ್ಲ. ಇವೆಲ್ಲಾ ಮನೆಯಲ್ಲಿ ಹೇಳಲು ಹೆದರಿದ್ದೆ. 100 ರೂಪಾಯಿಗೆ ಆಗಿನ್ನೂ ಬೆಲೆಯಿತ್ತು. ನಮಗೂ ಆಗ ಅದು ದೊಡ್ಡ ಮೊತ್ತವೇ. ಕಡೆಗೆ ನಾನೇ ಪ್ರಯಾಸದಿಂದ ಆ ಹಣ ಹೊಂದಿಸಿ, ಆ ವ್ಯಕ್ತಿಯೇ ವಾಪಸ್ಸು ಕೊಟ್ಟನೆಂದು ಹೇಳಿ ನನ್ನ ಚಿಕ್ಕಪ್ಪನ ಮಗನಿಗೆ ಹಣ ಹಿಂದಿರುಗಿಸಿದೆ. ಸ್ವಲ್ಪ ದಿನಗಳ ನಂತರ ಆ ವ್ಯಕ್ತಿ ಹೆಚ್ಚಾಗಿ ಕುಡಿದು ಮೋರಿಯಲ್ಲಿ ಬಿದ್ದು ಸತ್ತನೆಂದು ಸುದ್ದಿ ಬಂತು. ನನ್ನ ಅಪಕ್ವ ಮನಸ್ಸಿನ ಬೇಗುದಿಯೂ ತಣ್ಣಗಾಯಿತು.

''ಪದವಿ ಪಡೆದೊಡನೆ ಶಿಕ್ಷಣ ಮುಗಿಯುವುದಿಲ್ಲ, ಅದು ಆರಂಭ'' ಎಂಬ ಹಿರಿಯರ ಮಾತು ಸತ್ಯವಾಯಿತು. ಪೂರ್ವಾಪರ ಯೋಚಿಸದೇ ಒಬ್ಬ ಅಪ್ರಾಮಾಣಿಕ ಮನುಷ್ಯನ ಮೇಲೆ ಇಟ್ಟ ಕುರುಡು ನಂಬಿಕೆಯ ಕಹಿ ಅನುಭವ ಮುಂದಿನ ಬದುಕಿನಲ್ಲಿ ಜಾಗರೂಕತೆಯನ್ನು ಕಲಿಸಿತು.

ಜೀವನ ಶಾಲೆಯಲ್ಲಿ ಇದು ನಾನು ಕಲಿತ ಮೊದಲ ಪಾಠ.

**ಬೆಂಗಳೂರು** *ಕೆ.ಎಸ್. ಮೈತ್ರಿ*

ಕೆಲ ದಿನಗಳ ಹಿಂದೆ ಡಾ. ಜವರೇಗೌಡರು ಬರೆದ ಶ್ರೀ ಕುವೆಂಪು ಅವರ ಜೀವನ ಚರಿತ್ರೆಯನ್ನು ಓದಿದಾಗ ಆ ಅದ್ಭುತ ಚೇತನವನ್ನು ಒಂದು ಸಲ ಕಣ್ಣಾರೆ ಕಾಣಬೇಕು. ಆ ಮಹಾಪುರುಷರ ಪಾದಸ್ಪರ್ಶ ಮಾಡಬೇಕು ಎನ್ನುವ ಅದಮ್ಯ ಆಸೆಯನ್ನು ತಡೆಯಲಾಗದೇ ಕುವೆಂಪು ಅವರಿಗೆ ನನ್ನ ಆಸೆಯನ್ನು ನಿವೇದಿಸಿಕೊಂಡು ಒಂದು ಪತ್ರವನ್ನು ಬರೆದೆನು. ತಕ್ಷಣವೇ ಅವರಿಂದ "ಇಂಥ ವೇಳೆಯಲ್ಲಿ ತಾವು ನಮ್ಮ ಮನೆಗೆ ಬರಬಹುದು" ಎಂದು ಉತ್ತರ ಬಂದಾಗ ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ.

ಆ ಪ್ರಕಾರ ದಿ.೩೦-೭-೮೬ ರಂದು ಬೆಳಿಗ್ಗೆ ನಾವು ದಂಪತಿಗಳು ಅವರ ಮನೆಗೆ ಹೋದೆವು. ಆಗ ಕುವೆಂಪು ಅವರೊಂದಿಗೆ ಕಳೆದ ಸುಮಾರು ಒಂದೂಕಾಲು ಗಂಟೆಯ ಆ ಅಮೂಲ್ಯ ರಸನಿಮಿಷಗಳನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಅವರು "ಅನಿಕೇತನ" ಗೀತೆಯನ್ನು ಹಾಡಿದರು. ಅದರ ಅರ್ಥವನ್ನು ಬಿಡಿಸಿ ಹೇಳಿದರು. ತಮ್ಮ ವಿಶ್ವಮಾನವ ಸಂದೇಶದ ಪ್ರತಿಗಳನ್ನು ನೀಡುತ್ತಾ ನೀವೂ ನಿಮ್ಮ ಮಹಿಳಾ ಸಂಘದಿಂದಾಗಲಿ ಕನ್ನಡ ಸಂಘದಿಂದಾಗಲಿ ಪ್ರಕಟಣೆ ಪ್ರಸಾರ ಮಾಡಿ ಎಂದರು. ತಮ್ಮ ಅಪ್ಪಣೆಯಾದರೆ ಸ್ವತಃ ನಾವೇ ಪ್ರಕಟಿಸುವೆವು ಎಂದಾಗ ಅವರು "ಹಾಗಾದರೆ ನನಗೂ ಸ್ವಲ್ಪ ಪ್ರತಿಗಳನ್ನು ಕಳುಹಿಸಿ" ಎಂದು ನಗುತ್ತಾ ಹೇಳಿದರು. (ಆ ಪ್ರಕಾರ ಪ್ರಕಟಿಸಿ ಅವರಿಗೂ ಸ್ವಲ್ಪ ಕಳುಹಿಸಲಾಯಿತು).

ಸಂಸಾರದಲ್ಲಿ ದಂಪತಿಗಳು ಹೇಗಿರಬೇಕು ಎನ್ನುವ ಪ್ರಶ್ನೆಗೆ ಅವರು ತಮ್ಮ ಷೋಡಶಿ, ಜೇನಾಗುವಾ, ಚಂದ್ರ ಮಂಚಕೆ ಬಾ ಚಕೋರಿ, ಪ್ರೇಮ ಕಾಶ್ಮೀರ, ಅನುತ್ತರಾ ಎಂಬ ಈ ಐದು ಕೃತಿಗಳಲ್ಲಿ ನಮ್ಮ "ದಾಂಪತ್ಯ ದರ್ಶನ"ದ ಚಿತ್ರಣವಿದೆ (ಇವು ಕೆಲವರು ಹೇಳುವಂತೆ ಪ್ರೇಮಗೀತೆಗಳಲ್ಲ) ಎಂದರು. "ಯಾರಿವಳು ಮುಗಿರುವವಳು ?" ಎಂಬ ಪದ್ಯವನ್ನು ತಮ್ಮ ಅದ್ಭುತ ಜ್ಞಾಪಕಶಕ್ತಿಯಿಂದಲೇ ಹಾಡಿದಾಗ ನಮಗುಂಟಾದ ಆ ರಸಾನುಭೂತಿಯನ್ನು ವರ್ಣಿಸಲು ಇಲ್ಲಿ ಸಾಧ್ಯವಿಲ್ಲ.

ಅಧ್ಯಾತ್ಮ ಸಾಧನೆ ಮಾಡಬೇಕಾದರೆ ಬ್ರಹ್ಮಚರ್ಯ ಅವಶ್ಯವೇ ? ಎನ್ನುವ ಪ್ರಶ್ನೆಗೆ ಅವರು "ಹೌದು, ಕೆಟ್ಟ ಪದಾರ್ಥವನ್ನು ತಿಂದರೆ ಹೊಟ್ಟೆ ಕೆಡುವುದಿಲ್ಲವೇ ಹಾಗೆ ಇದು ಅರ್ಧ ದೇಹಕ್ಕೆ ಸಂಬಂಧಪಟ್ಟದ್ದು ಇನ್ನರ್ಧ ಮನಸ್ಸಿಗೆ ಸಂಬಂಧಪಟ್ಟದ್ದು. ಇದು "ಅಡಿಪಾಯ ಇದ್ದಂತೆ. ಜೊತೆಗೆ

ಸತ್ಯ, ಶುದ್ಧ, ನಡೆ ನುಡಿಯೂ ಆತ್ಮಗತ್ಯ" ಎಂದರು.

ಆತ್ಮಸಾಕ್ಷಾತ್ಕಾರ ಎಂದರೇನು ಎಂಬ ಪ್ರಶ್ನೆಗೆ ಅವರು "ಆತ್ಮಸಾಕ್ಷಾತ್ಕಾರ ಪಡೆದವರು ನಮ್ಮಲ್ಲಿ ರಾಮಕೃಷ್ಣರು, ಅರವಿಂದರು, ರಮಣ ಮಹರ್ಷಿಗಳು ಇತ್ಯಾದಿ ಇತ್ಯಾದಿ ಮಹಾಪುರುಷರ ಸಾಧನೆ ಸಿದ್ಧಿಗಳನ್ನು ವಿವರಿಸಿದರು. ತಮಗೂ ಆಗಿರಬೇಕಲ್ಲವೇ? ಎಂಬ ಪ್ರಶ್ನೆಗೆ ಅವರು ನಗುತ್ತ "ಹಾಗೇನಿಲ್ಲ, ನನ್ನ ಬುದ್ಧಿ ಮತ್ತು ಪ್ರಜ್ಞೆ ಅದನ್ನು ಗ್ರಹಿಸಿವೆ ಅಷ್ಟೇ" ಎಂದು ಹೇಳಿ ತುಂಬಿದ ಕೊಡ ತುಳುಕುವುದಿಲ್ಲ ಎನ್ನುವ ಮಾತು ಸತ್ಯ ಎನ್ನುವುದಕ್ಕೆ ನಿದರ್ಶನವಾಗಿ ತೋರಿದರು.

ಕೊನೆಯದಾಗಿ "ಮುಕ್ತಿ ಎಂದರೇನು ಎಂಬ ಪ್ರಶ್ನೆಗೆ ಒಂದು ಉಪ್ಪಿನ ಗೊಂಬೆ ಸಮುದ್ರ ಅಳೆಯಲು ಹೋಯಿತಂತೆ, ತಿರುಗಿ ಬರಲೇ ಇಲ್ಲವಂತೆ" ಎಂದು ಹೇಳಿ ನಗತೊಡಗಿದರು. ನಾವೂ ಮನಸಾರೆ ನಕ್ಕೆವು. ನಂತರ ಅವರ ಪಾದಕ್ಕೆರಗಿ ನಮಸ್ಕರಿಸಿ ಕೃತಜ್ಞತೆಗಳನ್ನರ್ಪಿಸಿ ಮರಳಿ ಬಂದೆವು. ಅವರ ಈ ನುಡಿಮುತ್ತುಗಳನ್ನು ಧ್ವನಿ ಮುದ್ರಿಸಿಕೊಂಡಿರುವ ನಾವು ಬೇಸರವಾದಾಗಲೆಲ್ಲ ಕೇಳಿ ಸಂತೋಷ ಪಡುವೆವು.

• **ಸರೋಜಾ ಸುಂಕದ**
**ಬೆಂಗಳೂರು.**

## ವಿಚಿತ್ರ ಹಲ್ಲಿ

ಮೆಕ್ಸಿಕೋ ಮರಳುಗಾಡಿನಲ್ಲಿ ವಾಸಿಸುವ, ಕಪ್ಪೆಯಂತೆ ಕಾಣುವ ಒಂದು ಜಾತಿಯ ಹಲ್ಲಿಗಳು ತಲೆಯ ರಕ್ತನಾಳಗಳಲ್ಲಿನ ಸ್ಥಳೀಕ ಏರೋತ್ತಡವನ್ನು ತನ್ನ ರಕ್ಷಣೆಗಾಗಿ ಬಳಸಿವೆ. ಅಸಹಜ ರೀತಿಯಲ್ಲಿ ಏರಿದ ಒತ್ತಡದಿಂದ ರಕ್ತವು ಶಿರೋಭಾಗ, ಬೆನ್ನು ಹಾಗೂ ತಲೆ ಮತ್ತು ದೇಹದಿಂದ ಹೊರಕ್ಕೆ ಬೆಳೆದ ಭಾಗಗಳಿಗೆ ಪ್ರವಹಿಸಿದಾಗ ಅವು ಹಿಗ್ಗಿ, ನೆಟ್ಟಗಾಗಿ ತಮ್ಮ ಬಣ್ಣವನ್ನು ಬದಲಿಸಿ ಪ್ರಾಣಿಯನ್ನು ಭಯಂಕರ ರೂಪಕ್ಕೆ ತಿರುಗಿಸುತ್ತದೆ. ಇದು ಈ ಹಲ್ಲಿಯ ರಕ್ಷಣೆಯ ಏಕಮಾತ್ರ ಸಾಧನವಲ್ಲ. ನಿಸರ್ಗವು ಅದಕ್ಕೆ ಅಪೂರ್ವವಾದ ಒಂದು ವಿಧಾನವನ್ನು ಕೊಡಮಾಡಿದೆ. ಹಲ್ಲಿಯು ಅಪಾಯವಿದೆ ಎಂದು ಕಂಡುಕೊಂಡಾಗ ಜಗ್ಗದ ಸ್ನಾಯುವೆಂಬ ನಿರ್ದಿಷ್ಟ ಸ್ನಾಯು ಅದರ ದೊಡ್ಡ ರಕ್ತನಾಳಗಳ ಒತ್ತಡವನ್ನು ಏರಿಸುತ್ತದೆ. ಇದು ರೆಪ್ಪೆಯ ಪೊರೆಗಳಲ್ಲಿನ ಸೂಕ್ಷ್ಮನಾಳಗಳಿಗೆ ತುಂಬ ಹೆಚ್ಚೆನಿಸಿ, ಅವು ಒಡೆದು ಈ ಮಾಂಸಹಾರಿಯ ಕಣ್ಣುಗಳಿಂದ ರಕ್ತವನ್ನು ಚಿಮ್ಮಿಸುತ್ತದೆ. ಊಹಿಸದ ಈ ವೃಷ್ಟಿಯು ದಾಳಿ ಮಾಡಲು ಬಂದಿರುವ ಪ್ರಾಣಿಯನ್ನು ಓಟಕ್ಕೆ ತೊಡಗಿಸುತ್ತದೆ.

ಜಗ್ಗದ ಸ್ನಾಯುವಿನ ಮತ್ತೊಂದು ಕಾರ್ಯವು ಪೊರೆ ಕಳಚಿಕೆಗೆ ಸಂಬಂಧಿಸಿದೆ. ಸರೀಸೃಪಗಳು ತಮ್ಮ ಜೀವಿತಾದ್ಯಂತ ಬೆಳೆಯುತ್ತಿರುವಂತೆ ಈ ಹಲ್ಲಿಗಳು ತಮ್ಮ ಚರ್ಮವನ್ನು ಪ್ರತಿ ವರ್ಷ ಬದಲಿಸುತ್ತವೆ. ತಮ್ಮ ವೇಷವನ್ನು ಕಳಚಿ ಬಿಸಾಡುವುದು ಕೆಲವೊಂದು ಬಾರಿ ಕಷ್ಟಕರವಾಗಬಹುದು. ಇಂತಹ ಸನ್ನಿವೇಶದಲ್ಲಿಯೇ ಜಗ್ಗದ ಸ್ನಾಯು ಕಾರ್ಯರೂಪಕ್ಕೆ ಬರುತ್ತದೆ. ತಲೆಯ ನಾಳಗಳಲ್ಲಿನ ಒತ್ತಡವು ಹೆಚ್ಚಿದಾಗ, ಚಿಕ್ಕ ಮತ್ತು ದೊಡ್ಡ ರಕ್ತನಾಳಗಳೆಲ್ಲವೂ ಹಿಗ್ಗುವುದರಿಂದ ತಲೆಯ ಹೀಚಿ ಹಳೆಯ ಚರ್ಮ ಹರಿಯಲ್ಪಡುವುದು. ತಲೆ ಚರ್ಮ ಹರಿದಾಗ ಹಲ್ಲಿಯು ಹೊಸದಾಗಿ ರೂಪುಗೊಂಡ ರಂಧ್ರದ ಮೂಲಕ ತನ್ನ ಮೇಲು ವೇಷವನ್ನು ತೊರೆದು ಬರುವ ರೀತಿಯಲ್ಲಿ ಸುಮ್ಮನೆ ತೆವಳಿಕೊಂಡು ಹೊರಹೋಗುವುದು.

* ಎನ್. ರಾಜಶೇಖರ ನಾಯಕ



# ಮಾತಾಡ ಬೇಡ

ತಮಿಳು: *ವಲಂಪುರಿ ಸೋಮನಾಥನ್*

ಕನ್ನಡ: *ಎಂ. ನರೇಂದ್ರಬಾಬು*

**'ಚೆ**ಲ್ಲಮ್ಮ ಯಾಕೆ ಯಾರ ಹತ್ತಿರವೂ, ಏನೂ ಮಾತಾಡೊಲ್ಲ', ಮೂಕಳೇ?

ಖಂಡಿತ ಅಲ್ಲ .... ಏನಾದರೂ ಊನವಿರುವವರ ಮುಖದಲ್ಲಿ ಒಂದು ಮಂಕು ಕಳೆಯಿರುತ್ತದೆ. ಏನನ್ನೋ ಬಲಿಕೊಟ್ಟ ಸಂಕಟ; ಜನ ಸಮೂಹದ ಅಪಹಾಸ್ಯಕ್ಕೆ ಈಡಾಗಿಬಿಟ್ಟೆವಲ್ಲಾ ಎಂಬ ಚಿಂತೆ. ಮಿಕ್ಕವರಿಗೆ ಸರಿದೊರೆಯಾಗಿ ಬಾಳಲಾರೆವಲ್ಲಾ ಎಂಬ ಕೀಳರಿಮೆ, - ಇವೆಲ್ಲ ಆ ಮಂಕುಕಳೆಯಲ್ಲಿ ಸೇರಿರುತ್ತದೆ. ಹಾಗೆ ಯಾವುದೂ ಚೆಲ್ಲಮ್ಮನ ಮುಖದಲ್ಲಿ ಕಂಡು ಬರಲಿಲ್ಲವೇ! ಹಾಗೆ ನೋಡಿದರೆ, ಆರೋಗ್ಯ ವಾಗಿರುವವರಲ್ಲಿ ಕೂಡ ಕಂಡುಬಾರದಿರುವ ಒಂದು ಅಪೂರ್ವ ಶಾಂತಿ ಅವಳ ಮುಖದಲ್ಲಿ ನೆಲೆನಿಂತಿದೆ. ಅವಳ ಮುಖದಲ್ಲಿ ಕಂಡುಬರುವ ನೆಮ್ಮದಿ ನೋಡುವವರಲ್ಲಿ ಒಂದು ಬಗೆ ಗೌರವ ಭಾವನೆಯನ್ನುಂಟು ಮಾಡುತ್ತದೆ. ಹಾಗಿದ್ದರೂ ಅವಳಿಗೆ ಏನು ಕೊರತೆ? ಏಕೆ ಮಾತನಾಡುವುದಿಲ್ಲ?

ಆರು ತಿಂಗಳಿಂದ ಈ ಪ್ರಶ್ನೆಗೆ ಉತ್ತರ ಸಿಗದೆ ದಾಮೋದರ ಪಿಳ್ಳೆ ಕುತೂಹಲಿಗಳಾಗಿದ್ದರು.

ಕೀಳ್‌ಪಾಕಿನ ಶ್ರೀಮಂತರ ಬಂಗ್ಲೆಗಳ ನಡುವೆ ಅವರು ಒಂದು ಸ್ವಂತ ಕಟ್ಟಡವನ್ನು ಕಟ್ಟಿಸುತ್ತಿದ್ದರು. ಅಸ್ತಿಭಾರ ಹಾಕಿದ ದಿನದಿಂದಲೂ ಚೆಲ್ಲಮ್ಮ ಅಲ್ಲಿ ದಿನಗೂಲಿಯಾಗಿ ದುಡಿಯುತ್ತಿದ್ದಳು.

ಮೈತೊಳೆಯದೇ, ಹರಕು ಬಟ್ಟೆ, ಕೆದರು ಗೂದಲಲ್ಲಿ ಕಂಡು ಬರುವ, ಅನಾವಶ್ಯಕ ಅಸಭ್ಯ ಮಾತುಗಳನ್ನಾಡುವ, ಕಾರಣವೇ ಇಲ್ಲದೇ ಪಕಪಕನೆ ನಗುವ, ಹೋ ಎಂದು ಅಳುವ ಜಗಳವಾಡುವ, ಮಿಕ್ಕ ದಿನಗೂಲಿ ಹೆಂಗಸರಿಗೂ ಚೆಲ್ಲಮ್ಮನಿಗೂ ಎಷ್ಟೊಂದು ವ್ಯತ್ಯಾಸ. ಚೆಲ್ಲಮ್ಮ ಸ್ನಾನ ಮಾಡಿ, ಒಗೆದ ಸೀರೆಕುಪ್ಪಸ ತೊಟ್ಟು, ಹಣೆಯಲ್ಲಿ ಮೂರುಪಟ್ಟೆ ವಿಭೂತಿ ಧರಿಸಿ, ಮಿಕ್ಕ ಹೆಣ್ಣಾಳುಗಳು ಬರುವುದಕ್ಕೆ ಹತ್ತು ನಿಮಿಷ ಮುಂಚಿತವಾಗಿಯೇ ಕೆಲಸಕ್ಕೆ ಹಾಜರಾಗುತ್ತಿದ್ದಳು. ಕೆಲಸವನ್ನು ಚಟುವಟಿಕೆ, ಆಸಕ್ತಿಗಳಿಂದ ಮಾಡುತ್ತಿದ್ದಳು. ಕಾಯಕದಲ್ಲಿ ವ್ಯಸನಪಡುತ್ತಿರಲಿಲ್ಲ. ಜೊತೆಗೆ ಕೆಲಸ ಮಾಡುವವರಿಗೂ ಆಯಾಸ ತೋರುತ್ತಿರಲಿಲ್ಲ. ಸಂಜೆ ಯಾವಾಗ ಗಂಟೆ ಹೊಡೆಯುವುದೋ ಎಷ್ಟು ಬೇಗ ಮನೆ ಸೇರುವೆವೋ ಎಂದು ಎಲ್ಲರೂ ಕೊನೆಯ ಹತ್ತು ನಿಮಿಷಗಳಲ್ಲಿ ಕೆಲಸದಲ್ಲಿ ಅನಾಸಕ್ತಿ ತೋರಿಸುತ್ತಿರುವಾಗ ಚೆಲ್ಲಮ್ಮ ಒಬ್ಬಳು ಸಮಯವನ್ನು ಲೆಕ್ಕಿಸದೇ, ಮನೆಯ ಕಡೆ ಗಮನವಿಲ್ಲದೇ ಗಂಟೆ ಹೊಡೆದ ಮೇಲೂ ಐದು ನಿಮಿಷ ಕೆಲಸ ಮಾಡುತ್ತಲೇ ಇದ್ದು ನಂತರ ಹೊರಡುತ್ತಿದ್ದಳು.

ಕೆಲಸ ಮಾಡುವುದು ಎನ್ನುವುದು ಕೆಲಸದ ನೆಪದಲ್ಲಿ ಕಾಲ ಕಳೆಯುವುದು ಎಂದಾಗಿರುವ ಈ ಕಾಲದಲ್ಲಿ ಹೀಗೂ ಒಬ್ಬಳು ಕೆಲಸದವಳು.

ಚಲ್ಲಮ್ಮನ ಕಾಯಕ ಭಕ್ತಿಯನ್ನೂ, ಶ್ರಮ ಜೀವನವನ್ನೂ ಗಮನಿಸಿ ವಿಸ್ಮಯಗೊಂಡ ದಾಮೋದರ ಶೆಟ್ಟಿ, ಅವರಿಗೆ ಅವಳ ಮೌನದ ಕಾರಣವನ್ನು ಮಾತ್ರ ಅರ್ಥಮಾಡಿಕೊಳ್ಳಲಾಗಿರಲಿಲ್ಲ.

ಅವಳು ಮಾತಾಡುವ ಹಾಗೆ ಮಾಡಬೇಕೆಂದು ಒಂದು ದಿನ ಅವಳಿಗೆ ಕೊಡಬೇಕಾದ ಕೂಲಿಗಿಂತ ಕಡಿಮೆ ಹಣವನ್ನು ಕೊಟ್ಟರು. ವಾರ ಪೂರ್ತಿ ದಿನದ ಹಾಗೆ ದುಡಿವವಳಿಗೆ ಕೂಲಿಯನ್ನು ಕಡಿಮೆ ಮಾಡಿದರೆ ಹೊಟ್ಟೆ ಉರಿಯುವುದಿಲ್ಲವೇ? .... ಬಾಯಿಬಿಟ್ಟು ಮಾತಾನಾಡುವುದಿಲ್ಲವೇ? ಊಹ್ಞು! ಮುಖದಲ್ಲಿ ಯಾವ ಬದಲಾವಣೆಯೂ ಇಲ್ಲದೇ ಒಂದು ಮಾತನ್ನೂ ಆಡದೇ ತೆಗೆದುಕೊಂಡು ಹೊರಟುಹೋದಳು! ಪಾಪ! ಶೆಟ್ಟಿಯವರಿಗೆ ಮನಸ್ಸು ನೋಯತೊಡಗಿತು. ತಾನು ಹಾಗೆ ಮಾಡಿದುದು ದೊಡ್ಡ ತಪ್ಪಾಯಿತೆಂದುಕೊಂಡರು. ಯಾವ ಕಾರಣಕ್ಕಾಗಿಯೋ, ಯಾವ ದುಃಖವನ್ನು ಹತ್ತಿಕ್ಕುವುದಕ್ಕಾಗಿಯೋ, ಯಾವ ದೇವರಿಗೆ ಹರೆಸಿಕೊಂಡದ್ದಕ್ಕಾಗಿಯೋ ಹಾಗೆ ಮೌನವನ್ನು ಸಾಧಿಸುತ್ತಿರುವಾಗ, ತಾನು ಅವಳನ್ನು ಹಿಂಸಿಸಬಹುದೇ? ಮಾತನಾಡಬಾರದು ಎಂಬ ಕಟ್ಟು ಪಾಡಿಗಾಗಿ ನಷ್ಟ ಪಡುವುದಕ್ಕೂ ಸಿದ್ಧಳಾಗಿದ್ದಾಳಲ್ಲ. ಇವಳ ಹಿರಿಮೆ ಎಷ್ಟಿರಬಹುದು? ಅವಳನ್ನು ಪರೀಕ್ಷಿಸುವುದಕ್ಕೆ ಹೋಗಿ ತಾವೇ ಶಿಕ್ಷೆಗೊಳಗಾದಂತಾಯಿತು. ಮರುದಿನವೇ ಅವಳ ಕೈಗೆ ಉಳಿದ ಹಣವನ್ನು ಕೊಟ್ಟುಕಳುಹಿಸಿದರು.

ಮಾತನಾಡದೇ ಇದ್ದದ್ದು ದೊಡ್ಡದಲ್ಲ! ಲಾಭ ನಷ್ಟಗಳ ಬಗ್ಗೆ ಎಳ್ಳಷ್ಟೂ ಚಿಂತೆ ಮಾಡದ - ಅಂತಹ ಲಾಭನಷ್ಟಗಳನ್ನುಂಟು ಮಾಡಿದವರ ಬಗ್ಗೆ ವಿಶೇಷ ನಮ್ರತೆಯನ್ನೋ ಅಥವಾ ಅಸಮಾಧಾನವನ್ನೋ ವ್ಯಕ್ತಪಡಿಸದ ಆ ಆತ್ಮಶಕ್ತಿಯನ್ನು ಚಲ್ಲಮ್ಮ ಹೇಗೆ ಪಡೆದಳೋ!

ಮಾತಾಡದೇ ಇರಲು ಮನುಷ್ಯನಿಗೆ ಸಾಧ್ಯವಿಲ್ಲ ಎಂಬ ನಂಬಿಕೆಯನ್ನು ಅವಳು ಹೇಗೆ ಸುಳ್ಳುಮಾಡಿದಳೋ?

ಜ್ಞಾನಿಗಳಿಗೆ ಕೂಡ ಈ ಮೌನವನ್ನು ಸಾಧಿಸುವುದು ದುಸ್ಸಾಧ್ಯವಲ್ಲವೇ? ಜಗತ್ತನ್ನು ತೊರೆದು ಜನವಿಲ್ಲದ ಕಾಡಿನಲ್ಲೋ ಗಿರಿಶಿಖರದಲ್ಲೋ ಇದ್ದು ಅವರು ಮೌನವನ್ನು ಅನುಷ್ಠಾನ ಮಾಡಬಹುದೇ ಹೊರತು ಜನಜಂಗುಳಿಯ ಮಧ್ಯೆ ಇದ್ದು ಮಾತನಾಡದೇ ಇರಲು ಅವರಿಗೆ ತಾನೇ ಸಾಧ್ಯವೇ?

ಇದನ್ನು ಚಲ್ಲಮ್ಮನೇ ಹೇಳಬೇಕು.

ಅವಳಿಗೆ ಸಂಬಂಧಪಟ್ಟವರು ಯಾರೂ ಇದ್ದಂತೆ ಕಂಡುಬರಲಿಲ್ಲ. ಈ ಆರು ತಿಂಗಳಲ್ಲಿ ತಂದೆಯೆಂಬುವನೋ, ಗಂಡನೆಂಬುವನೋ, ಅಣ್ಣನೆಂಬುವನೋ, ಮಗನೆಂಬುವನೋ ಯಾರೂ ಅವಳನ್ನು ಹುಡುಕಿಕೊಂಡು ಬಂದದ್ದಿಲ್ಲ. ಬೆಳಿಗ್ಗೆ ಕೆಲಸಕ್ಕೆ ಒಂಟಿಯಾಗೇ ಬರುತ್ತಿದ್ದಳು. ಸಂಜೆ ಹೋಗುವಾಗ ಮಾತ್ರ ಮೇಸ್ತ್ರಿ ರಾಮಸ್ವಾಮಿಗಾಗಿ ಕಾಯುತ್ತಿದ್ದಳು. ಮೇಸ್ತ್ರಿ ಉಳಿದ ಕೆಲಸಗಾರರ ಬಳಿ ಮಾರನೇ ದಿನದ ಕೆಲಸಗಳ ಬಗ್ಗೆ ವಿವರಿಸಿ ಮುಗಿದ ನಂತರ ಮನೆಗೆ ಹೊರಡುತ್ತಿದ್ದರು. ಅವರ ಹಿಂದೆ ಹಿಂದೆ ಚಲ್ಲಮ್ಮ ಹೋಗುತ್ತಿದ್ದಳು. ಮನೆ ಸೇರುವವರೆಗೆ ತೀರ ಕತ್ತಲಾಗಿ ಹೋಗುತ್ತಿದ್ದುದರಿಂದ ಅವಳಿಗೆ ಅದು ಅಗತ್ಯವಾಗಿತ್ತು. ಮೇಸ್ತ್ರೀ ಕೂಡ ಆ ಸಹಾಯವನ್ನು ಸಹಾಯವೆಂದೇನೂ ತಿಳಿದಿರಲಿಲ್ಲ.



ನಿರುದ್ಯೋಗಿಯನ್ನು ಮದ್ವೆ ಆಗಿದ್ದು ಅದಕ್ಕೆ ಕಣೇ...! ಆವರಿಗಾದ್ರೂ ಒಂದು ಉದ್ಯೋಗ ಸಿಗಲಿ ಅಂತ...!

ದಾಮೋದರ ಪಿಳ್ಳೆ ತಮ್ಮ ಕಟ್ಟಡವನ್ನು ಕಟ್ಟುವ ಸಂಪೂರ್ಣ ಜವಾಬ್ದಾರಿಯನ್ನು ರಾಮಸ್ವಾಮಿ ಮೇಸ್ತ್ರಿಗೆ ವಹಿಸಿದ್ದರು. ಮೇಸ್ತ್ರಿ ಕಟ್ಟಡ ಕಲೆಯಲ್ಲಿ ನಿಷ್ಣಾತರು. ಅವರ ಕೈಕೆಳಗೆ ಕೆಲಸ ಮಾಡುವವರೆಲ್ಲರೂ ಅವರ ಆಪ್ತವರ್ಗಕ್ಕೇ ಸೇರಿದವರು. ಅವರು ಅದೃಷ್ಟಶಾಲಿಗಳೂ ಹೌದು. ಒಂದು ಕಟ್ಟಡದ ಕೆಲಸ ಮುಗಿಯುತ್ತಿದ್ದಂತೆಯೇ ಅವರಿಗೆ ಇನ್ನೊಂದು ಕಟ್ಟಡದ ಕೆಲಸ ಕೈಗೆ ಬರುತ್ತಿತ್ತು. ಆದ್ದರಿಂದ ಕೆಲಸದವರು ಅವರನ್ನು ಬಿಟ್ಟು ಬೇರೇ ಹೋಗಬೇಕಾದ್ದೇ ಇರಲಿಲ್ಲ. ಅವರೂ ಹೊಸಬರನ್ನು ಕಟ್ಟಿಕೊಂಡು ಹೆಣಗುವುದಕ್ಕೆ ಹೆದರಿ ಹಳಬರನ್ನೇ ಆದರದಿಂದ ನೋಡಿಕೊಳ್ಳುತ್ತಿದ್ದರು. ಚಲ್ಲಮ್ಮನೂ ಅಂಥವರಲ್ಲಿ ಒಬ್ಬಳು.

ಮೇಸ್ತ್ರಿ ಖಡಾಖಂಡಿತವಾದವರು. ಕೆಲಸ ತೆಗೆದುಕೊಳ್ಳುವುದರಲ್ಲಿ ಅವರು ಯಾರ ದಯಾದಾಕ್ಷಿಣ್ಯವನ್ನೂ ನೋಡುವವರಲ್ಲ. ಮಾತಿನಲ್ಲೂ ಅವರು ಹಿಡಿತದವರು. ಯಾರೇ ಹೆಚ್ಚು ಮಾತನಾಡಿದರೂ 'ಕೆಲಸ ಮುಖ್ಯ, ಮಾತನ್ನು ಕಡಿಮೆ ಆಡಬೇಕು' ಎಂದುಬಿಡುತ್ತಿದ್ದರು. ಕೆಲವು ಭಾರಿ ಅಷ್ಟನ್ನೂ ಆಡದೇ ಬಾಯಾಡುತ್ತಿರುವವರನ್ನು ದುರುಗುಟ್ಟಿ ನೋಡುವರು. ಆ ದೃಷ್ಟಿಯಲ್ಲೇ 'ಯಾಕಪ್ಪಾ ನಿಮ್ಮಂತಹವರೆಲ್ಲ ಜನ್ಮ ಎತ್ತಿ ಬರ್‍ತೀರಿ?' ಎನ್ನುವ ಪ್ರಶ್ನೆ ಇರುತ್ತಿತ್ತು. ಆದ್ದರಿಂದ ಅವರೊಡನೆ ಮಾತನಾಡುವ ಗೋಜಿಗೇ ಸಾಮಾನ್ಯವಾಗಿ ಯಾರೂ ಹೋಗುತ್ತಿರಲಿಲ್ಲ.

ಅವರನ್ನು ಕೇಳಿದರೆ ಚಲ್ಲಮ್ಮನ ಮೌನದ ಬಗ್ಗೆ ಒಂದಿಷ್ಟು ತಿಳಿಯಬಹುದು? ಆದರೆ ಹೇಗೆ ಕೇಳೋದು?'

ಮೇಸ್ತ್ರಿಗಳ ಮಗಳಿಗೆ ಒಳ್ಳೆಯ ಸಂಬಂಧ ನಿಶ್ಚಯವಾಯಿತು. ಆಗ ಸಂತೋಷದಲ್ಲಿ ಮೇಸ್ತ್ರಿಗಳು ನಗು ಮುಖದಲ್ಲಿದ್ದರು. ಆ ಮದುವೆಯ ನಿಶ್ಚಿತಾರ್ಥಕ್ಕಾಗಿ ಮೇಸ್ತ್ರಿ ಪಿಳ್ಳೆಯವರನ್ನು ಸ್ವಲ್ಪ ಮುಂಗಡ ಹಣವನ್ನು ಕೇಳಿದರು. ಆ ಹಣವನ್ನು ಕೊಡುತ್ತಾ 'ಮೇಸ್ತ್ರಿ, ನಿಮ್ಮನ್ನ ಒಂದು ವಿಷಯ ಕೇಳಬೇಕು. ಕೋಪಿಸ್ಕೊಳ್ಳೋಲ್ಲ ತಾನೆ?' ಎಂದರು.

'ಕೇಳೋ ವಿಷಯ - ಕೋಪಸ್ಕೊಳ್ಳೋ

ಹಾಗಿರುತ್ತೋ - ಸಂತೋಷ ಪಡೋಹಾಗಿರುತ್ತೋ ಮುಂಚೇನೇ ಹೇಗೆ ಹೇಳೋದು? ಹೇಳಿ' ಎಂದರು ಮೇಸ್ತ್ರಿ.

'ಚಲ್ಲಮ್ಮ ಯಾಕೆ ಮಾತೇ ಆಡೊಲ್ಲ?'

'ಯಾಕೆ ಮಾತಾಡಬೇಕು? ಯಾರನ್ನ ಗೆಲ್ಲೋಕ್ಕೋಸ್ಕರ ಆಡಬೇಕು? ಯಾವ ತಪ್ಪನ್ನ ಮುಚ್ಚಿಕೊಳ್ಳೋಕ್ಕೋಸ್ಕರ ಮಾತಾಡಬೇಕು? ಬಿಡಿ.'

ಮೇಸ್ತ್ರಿ ಮುಂದೆ ಮಾತನಾಡಲಿಲ್ಲ. ಹಾಗೇ ಹೊರಟುಹೋದರು.

'ಚಲ್ಲಮ್ಮನ ಬಗ್ಗೆ ತಾನು ಕೇಳಿದ್ದು ಮೇಸ್ತ್ರಿಗೆ ಹಿಡಿಸಲಿಲ್ಲವೇ? ಅಥವಾ ತನ್ನ ಪ್ರಶ್ನೆಗೆ ಆ ಉತ್ತರವೇ ಸಾಕೇ?

'ಯಾರನ್ನು ಗೆಲ್ಲೋಕ್ಕೆ ಮಾತಾಡಬೇಕು. ಯಾವ ತಪ್ಪನ್ನು ಮುಚ್ಚಿಟ್ಕೊಳ್ಳೋಕ್ಕೆ ಮಾತಾಡಬೇಕು?'

'ಮಾತಾಡೋ ಉದ್ದಿಶ್ಯವೇ ಎದುರಿನವನನ್ನು ಗೆಲ್ಲೋಕ್ಕೆ ಅಥವಾ ತನ್ನ ತಪ್ಪನ್ನ ಮುಚ್ಚಿಕೊಳ್ಳೋಕ್ಕೇಂತ ಇರಬಹುದೇ? ಹೌದು! ಇನ್ನೇನು?' ಮಾತನಾಡುವುದೇ ಇನ್ನೊಬ್ಬರನ್ನು ಮರಳುಗೊಳಿಸಿ ಅವರನ್ನು ನಮ್ಮ ಹಿಡಿತಕ್ಕೆ ತಂದುಕೊಳ್ಳುವುದಕ್ಕೇ ಅವರಲ್ಲಿ ದೋಷಗಳನ್ನು ಕಲ್ಪಿಸಿ, ನಮ್ಮನ್ನು ದೊಡ್ಡವರನ್ನಾಗಿ ಮಾಡಿಕೊಳ್ಳುವುದಕ್ಕೋ, ನಮ್ಮ ವಸ್ತುಗಳನ್ನು ಅವರಲ್ಲಿ ಮಾರಾಟಮಾಡಿ, ಸಂಪಾದನೆ ಮಾಡುವುದಕ್ಕೋ ಅವರನ್ನು ಮೋಸಗೊಳಿಸಿ ಅವರಲ್ಲಿರುವ ವಸ್ತುವನ್ನು ದೋಚಿಕೊಳ್ಳುವುದಕ್ಕೋ, ನಮ್ಮ ಕುಂದುಕೊರತೆಗಳನ್ನು ಮುಚ್ಚಿಟ್ಟುಕೊಳ್ಳುವುದಕ್ಕೋ ಉಪಯೋಗವಾಗಲಿ ಎಂದು ತಾನೆ?'

ಮಗು ಮಾತಾಡಲೀ ಎಂದು ತಂದೆ ತಾಯಿಗಳು ಎಷ್ಟು ಶ್ರಮಪಡುತ್ತಾರೆ? ಬೆಳೆದ ಮೇಲೆ ಆ ಮಕ್ಕಳು ಓದನ್ನು ಕಲಿಯಲೀ ಎನ್ನುವುದಕ್ಕಾಗಿ ಉಪಾಧ್ಯಾಯರು ಪಡುವ ಬವಣೆಯೆಷ್ಟು? ವಿದ್ಯಾಭ್ಯಾಸಕ್ಕಾಗಿ ಊರು ತುಂಬಾ ಎಷ್ಟೊಂದು ಸ್ಕೂಲುಗಳು, ಕಾಲೇಜುಗಳು? ಮಾತನ್ನೂ ಓದನ್ನೂ ಸೊಗಸುಗೊಳಿಸಲೆಂದೇ ಸೃಷ್ಟಿಯಾದ ಪುರಾಣಗಳೂ, ಕಾವ್ಯಗಳೂ ಅದೆಷ್ಟೊಂದು? ಇವುಗಳೆಲ್ಲ ಅನಾವಶ್ಯಕವೇ?

ಮಾತು, ಮನುಷ್ಯನಿಗೆ ಬಹಳ ಉಪಯೋಗಕಾರೀ ಅಂಶವೆಂದು ತಿಳಿದಿದ್ದ ತಮ್ಮ ಅಭಿಪ್ರಾಯವನ್ನು ರಾಮಸ್ವಾಮಿ ಮೇಸ್ತ್ರೀ ಮಾತುಗಳಲ್ಲಿ ಅಲ್ಲಗಳೆದು ಹೊರಟು ಹೋದರಲ್ಲಾ?

'ಕಲ್ಲಾದವರೇ ಒಳ್ಳೆಯವರು' ಎಂದೂ 'ಸುಮ್ಮನಿರುವುದೇ ಸುಖ' ಎಂದೂ 'ತಾಯುಮಾನವರ್' ಹೇಳಿದ್ದಾರೆ. 'ಮೌನೇನ ಕಲಹಂ ನಾಸ್ತಿ' ಎಂದು ಶಾಸ್ತ್ರ ಹೇಳಿದೆ. 'ಆಡಿದ ಮಾತುಗಳಿಗೆ ನಾವು ಆಡಿಯಾಳು. ಆಡದ ಮಾತುಗಳಿಗೆ ನಾವು ಯಜಮಾನರು 'ಎಂದು ಯಾರೋ ಪಾಶ್ಚಾತ್ಯ ಪಂಡಿತ ಹೇಳಿದ ನೆನಪು. ಇದೆಲ್ಲ ದಾಮೋದರ ಪಿಳ್ಳೆಯವರಿಗೆ ಈಗ ನಿಜವೆನ್ನಿಸಿತು.

ಏನೇ ಅನ್ನಿಸಲಿ, ಪಿಳ್ಳೆಯವರು, ಮೇಸ್ತ್ರೀಯಲ್ಲವಲ್ಲಾ! ಅವರು ಸತ್ಯವನ್ನು ತಿಳಿದುಕೊಳ್ಳಬೇಕೆಂಬ ಆಸೆಯುಳ್ಳವರೇ ವಿನಃ ತಿಳಿದುಕೊಂಡ ಇಂತಹ ಸತ್ಯಗಳನ್ನು ಜೀವನದಲ್ಲಿ ರೂಢಿಸಿಕೊಳ್ಳಬೇಕು ಎಂಬ ಉದ್ದೇಶದವರೋ, ಪ್ರಯತ್ನದವರೋ ಅಲ್ಲ. ಅವರು ಮಾತ್ರವಲ್ಲ ಸಾಮಾನ್ಯವಾಗಿ ಜಗತ್ತಿನ ಎಲ್ಲರೂ ಅಷ್ಟೇ ತಾನೇ? ಸನ್ಯಾಸಿಯ ಬಗ್ಗೆ ವಿವರಗಳನ್ನು ತಿಳಿದುಕೊಳ್ಳುವವರೆಲ್ಲ ಸನ್ಯಾಸಿಗಳಾಗಿ ಹೋಗಲು ಸಾಧ್ಯವೇ?

ಅಂತೂ ಮಾತನಾಡದೇ ಇರುವುದರಿಂದ ಒಬ್ಬರಿಗೆ ಎಷ್ಟು ಅನುಕೂಲಗಳಾಗಬಹುದು ಎಂಬುದನ್ನು ಅವರು ತಿಳಿದುಕೊಂಡರು. ಆದರೆ ಚಲ್ಲಮ್ಮ ಮಾತನಾಡಬಾರದು ಎಂಬ ನಿರ್ಧಾರಕ್ಕೆ ಹೇಗೆ ಬಂದಳು? ಅದರ ಹಿಂದೆ ಒಂದು ಕಥೆ ಇರಲೇಬೇಕಲ್ಲ? ಅದು ಏನು? ಎಂಬುದನ್ನು ತಿಳಿದುಕೊಳ್ಳಲು ದಾಮೋದರ ಪಿಳ್ಳೆ ಸಮಯವನ್ನು ಕಾಯುತ್ತಲೇ ಇದ್ದರು.

ಒಂದು ದಿನ ಮೇಸ್ತ್ರಿ ತಮ್ಮ ಮಗಳ ಲಗ್ನಪತ್ರಿಕೆಯನ್ನು ತಂದು ಪಿಳ್ಳೆಯವರ ಕೈಲಿಟ್ಟು ನಮಸ್ಕಾರ ಮಾಡಿದರು. ಆ ದೊಡ್ಡ ಲಕೋಟೆಯ ಮೇಲೆ ''ಗುರುವರ್ಯ ಗೋವಿಂದಸ್ವಾಮಿ ಮೇಸ್ತ್ರಿ

ಯವರ ದಿವ್ಯಸ್ಮರಣೆ'' ಮತ್ತು ಚಿ॥ ರಾ॥ ರಂಗನಾಥ ಚಿ॥ ಸೌ॥ ಕಣ್ಣಮ್ಮಾ ಇವರ ''ವಿವಾಹ ಮಹೋತ್ಸವ'' ಎಂದು ಅಚ್ಚಿಸಲಾಗಿತ್ತು. ಎರಡು ಸಮಾರಂಭಕ್ಕೆ ಒಂದೇ ಆಹ್ವಾನ ಪತ್ರಿಕೆ. ಲಕೋಟೆಯನ್ನು ತೆರೆದು ನೋಡಿದರು. ಅದು ನಾಲ್ಕು ಹಾಳೆಗಳನ್ನೊಳಗೊಂಡಿತ್ತು. ಮೊದಲ ಪುಟ ತುಂಬ ದಿವಂಗತ ಗೋವಿಂದ ಸ್ವಾಮಿ ಮೇಸ್ತ್ರಿಯವರ ಫೋಟೋ ಇತ್ತು. ಅದರ ಕೆಳಗೆ ಅವರ ಜನನ ಮರಣಗಳ ದಿನಾಂಕ ವನ್ನು ಸೂಚಿಸಲಾಗಿತ್ತು. ಎರಡನೇ ಪುಟದಲ್ಲಿ ವಿವಾಹ ನಡೆಯಲಿರುವ ಅದೇ ಮಂಟಪದಲ್ಲಿ ಮೊದಲ ದಿನ ದಿ। ಮೇಸ್ತ್ರಿಯವರಿಗೆ ಗುರುಪೂಜೆ ನಡೆಯುವುದೆಂದೂ ಆದಕ್ಕೆ ಎಲ್ಲರೂ ದಯ ಮಾಡಿಸಬೇಕೆಂದೂ ಪ್ರಾರ್ಥಿಸಲಾಗಿತ್ತು. ಮೂರನೆ ಹಾಳೆಯಲ್ಲಿ ಲಗ್ನಪತ್ರಿಕೆ ''ಪತ್ರಿಕೆ ಹೊಸ ರೀತಿ ಇದೆಯಲ್ಲ!'' ಎಂದರು ಪಿಳ್ಳೆ.

''ಹೌದು, ಎಲ್ಲರ ಸಂಸಾರದಲ್ಲೂ ವಿವಾಹ ಮೊದಲಾದ ಶುಭಕಾರ್ಯಗಳಿಗೆ ಮುಂಚೆ ಕಾಲ ವಾದ ಅವರ ಹಿರಿಯ ಸುಮಂಗಲಿಯರಿಗೂ, ಹಿರಿಯರಿಗೂ ಎಡೆಯಿಕ್ಕಿ ನಮಸ್ಕಾರ ಮಾಡು ವುದು ಪದ್ಧತಿ. ನನ್ನ ಮಟ್ಟಿಗೆ ಈ ಗುರುಗಳೇ ನನ್ನ ತಂದೆ, ತಾಯಿ, ದೈವ ಎಲ್ಲ.''

ಈ ನಗರದಲ್ಲಿ ಎಷ್ಟೋ ಜನ ಕಟ್ಟಡದ ಮೇಸ್ತ್ರಿಗಳು ಬದುಕಿ ಕಣ್ಮರೆಯಾಗಿ ಹೋದರು. ಆದರೆ ಇವರು ಅವರೆಲ್ಲರಿಗಿಂತ ಎತ್ತರದವರು. ಇಪ್ಪತ್ತೈದು ವರ್ಷಗಳ ಹಿಂದೆ ಗೋವಿಂದಸ್ವಾಮಿ ಮೇಸ್ತ್ರಿಯವರು ಬರುತ್ತಿದ್ದಾರೆಂದರೆ ಭಾರಿ ಭಾರಿ ಕುಳಗಳೂ ಕೂಡ ಎದ್ದು ನಿಂತು ಗೌರವ ಸಲ್ಲಿಸುತ್ತಿದ್ದರು. ಅವರ ಕಣ್ಣುಗಳಿಗೆ ಮೇಸ್ತ್ರಿಯ ವರು ಕಟ್ಟಡ ಕಟ್ಟುವ ಚಾಣಾಕ್ಷರಂತೆ ಕಾಣಸುತ್ತಿ ರಲಿಲ್ಲ. ಮಹಾಜ್ಞಾನಿಯೊಬ್ಬರು ಬಂದಂತಾಗು ತ್ತಿತ್ತು.''

''ಗೋವಿಂದ ಸ್ವಾಮಿ ಮೇಸ್ತ್ರಿಯವರು ಕಟ್ಟಡ ಕಲೆಯಲ್ಲಿ ಅತ್ಯಂತ ನಿಪುಣರು, ಅವರಿಗೆ ತಿಳಿಯದ ಕಟ್ಟಡ ಶಾಸ್ತ್ರವೇ ಇರಲಿಲ್ಲ. ಶಾಸ್ತ್ರಗಳ ರಲಿ, ಅವರ ಮನೋಧರ್ಮ ದೊಡ್ಡದೊಂದು



ಕಲಾಕಲ್ಪನಾ ಲೋಕ. ಅದನ್ನೆಲ್ಲಾ ಮಾತುಗ ಳಲ್ಲಿ ಹೇಳಲಾಗುವುದೇ ಇಲ್ಲ. ಪುರಾಣ ಕಾಲದ, ಮಯ, ದೇವದತ್ತ, ವಿಶ್ವಕರ್ಮ ಎನ್ನು ತ್ತಿದ್ದ ಹಾಗೆ ಈ ಕಾಲದಲ್ಲಿ ನಮ್ಮ ಗುರುಗಳು. ಅವರು ಕಟ್ಟುತ್ತಿದ್ದ ಒಂದೊಂದು ಕಟ್ಟಡದಲ್ಲೂ ಏನೋ ಹೊಸದೊಂದು ವಿನ್ಯಾಸವಿದ್ದೇ ಇರು ತ್ತಿತ್ತು. ಅದೆಲ್ಲಾ ಅವರೇ ಕಂಡು ಹಿಡಿದ ಹೊಸ ಹೊಸ ಸೂತ್ರಗಳು ಎಂದರೆ ತಪ್ಪೇ ಇಲ್ಲ. ಶಾಸ್ತ್ರಗಳೂ ಕೂಡ ಬೆಳೆಯುತ್ತಲೇ ಹೋಗಬೇ ಕಷ್ಟೆ. ಹೊಸಹೊಸ ಸತ್ಯಗಳೇ ಕಾಲ ಕಳೆದ ಹಾಗೆ ಶಾಸ್ತ್ರಗಳಾಗುತ್ತವೆ'' ''ಮನೆ ಕಟ್ಟಿಕೊಡಬೇ ಕೆಂದು ಬಂದು ಕೇಳಿದವರಿಗೆಲ್ಲಾ ಅವರು ಸುಲಭ ವಾಗಿ ಒಪ್ಪಿಗೆ ಕೊಡುತ್ತಿರಲಿಲ್ಲ. ಒಂದೊಂದು ಮನೆಯೂ ಒಂದೊಂದು ದೇವಸ್ಥಾನ ಇದ್ದ ಹಾಗೆ ಎನ್ನುತ್ತಿದ್ದರು. ದೇವಸ್ಥಾನ ಕಟ್ಟುವುದಕ್ಕೆ ಎಷ್ಟು ಭಯಭಕ್ತಿಗಳಿರಬೇಕೋ ಅಷ್ಟೇ ಭಯಭ ಕ್ತಿಗಳು ಮನೆಯನ್ನು ಕಟ್ಟುವುದರಲ್ಲೂ ಇರಬೇ ಕೆನ್ನುತ್ತಿದ್ದರು. ತಾನು ಕಟ್ಟುವ ಮನೆಗಳು ಅರ



ಮನೆಗಳ ಹಾಗೆ ಹತ್ತಾರು ತಲೆಮಾರಿನ ಸಂಸಾರಗಳು ಅದರಲ್ಲಿ ಬಾಳುವಂತಿರಬೇಕು ಎಂದು ಅವರ ಭಾವನೆ, ಆ ಮನೆಯಲ್ಲಿ ವಾಸ ಮಾಡುವವನ ಗುಣಗಳು ಪವಿತ್ರವಾಗುತ್ತ ಹೋಗಿ ಕೊನೆಗೆ ಅವನೇ ದೇವನಾಗಬೇಕು ಎಂದು ಆಸೆಪಡುತ್ತಿದ್ದರು. ಎಂದರೆ ಗುಣಹೀನರೆಂದು ಕಂಡುಬಂದವರಿಗೆ ಮನೆ ಕಟ್ಟಿಕೊಡಲು ಅವರು ಒಪ್ಪುತ್ತಿರಲಿಲ್ಲ.''

ಕಟ್ಟಡವನ್ನು ನಿವೇಶನದಲ್ಲಿ ಹೇಗೆ ಕಟ್ಟಬೇಕೆಂದು ಅವರೇ ನಿರ್ಧರಿಸುತ್ತಿದ್ದರು. ಮಾಲೀಕರು ಹೇಳಿದಂತೆಲ್ಲಾ ಕಟ್ಟಲು ಅವರು ಒಪ್ಪುತ್ತಿರಲಿಲ್ಲ. ಕಟ್ಟಡದ ಮಹತ್ವ ನಿವೇಶನವನ್ನು ಹೊಂದಿಕೊಂಡಿರುತ್ತದೆ; ಅಲ್ಲಿ ಬೀಸುವ ಗಾಳಿ, ಬೀಳುವ ಬಿಸಿಲು ಕೂಡ ಆ ಮಹತ್ವದಲ್ಲಿ ಭಾಗಿಗಳು ಎನ್ನುತ್ತಿದ್ದರು. ಕಟ್ಟಡ ಕೂಡ ಒಂದು ವ್ಯಕ್ತಿಯಿದ್ದಂತೆ. ವ್ಯಕ್ತಿ ಹೇಗೆ ಪಂಚಭೂತಗಳ ಸಮ್ಮಿಶ್ರಣದಿಂದ ಉಂಟಾಗುತ್ತಾನೋ, ಕಟ್ಟಡವೂ ಅದರಂತೆಯೇ! ಆ ಅಂಶಗಳ ಸೇರ್ಪಡೆಯೂ ಒಂದು ಶಿಷ್ಟಾಚಾರದ ಪ್ರಕಾರ ನಡೆಯಬೇಕೆಂದು ಹೇಳುತ್ತಿದ್ದರು. ಕಟ್ಟಡವನ್ನು ಕಟ್ಟಲು ಉಪಯೋಗಿಸುವ ಮರ, ಇಟ್ಟಿಗೆ, ಸಿಮೆಂಟು, ಕಬ್ಬಿಣ, ಎಲ್ಲ ಪದಾರ್ಥಗಳ ಗುಣವನ್ನೂ ವಜ್ರ ಪರೀಕ್ಷೆಯಂತೆ ಅಳತೆ ಮಾಡುತ್ತಿದ್ದರು.

ಕೆಲವು ಕಟ್ಟಡಗಳನ್ನು ಕಟ್ಟಲು ಸಿಕ್ಕಿದ ನೀರು ಸರಿಯಿಲ್ಲವೆಂದು ಲಾರಿಗಳಲ್ಲಿ ನದಿಯಿಂದ ನೀರು ತರಿಸಿ ಪೂರ್ತಿ ಕಟ್ಟಡವನ್ನು ಸಿಹಿ ನೀರಿನಿಂದಲೇ ಕಟ್ಟಿಸಿ ಮುಗಿಸಿದುದುಂಟು.

ಕಟ್ಟಡ ಕಟ್ಟುತ್ತಿರುವಾಗ ಭಾರಿ ಮಳೆ, ಬಿರುಗಾಳಿಗಳು ಹೊಡೆದರೂ ಎದೆ ಎತ್ತಿ ನಿಂತ ಗೋಡೆಗಳನ್ನು ನಮಗೆ ತೋರಿಸಿ, ''ನೋಡಿದಿರಾ? ಉಕ್ಕಿನ ಗೋಡೆಗಳು! ಇವುಗಳನ್ನು

ಎಂದೆಂದಿಗೂ ಯಾರೂ ಉರುಳಿಸಲಾರರು! ಇವುಗಳು ಶಾಶ್ವತವಾಗಿರುವಂಥವು!'' ಎಂದು ಹೇಳಿಕೊಂಡು ಹೆಮ್ಮೆಪಡುತ್ತಿದ್ದರು. ಜೊತೆಗೇ ''ದೇವರೇ, ಈ ಗೋಡೆಗಳು ಹೊಸದಾಗಿ ಹುಟ್ಟಿ ನಿಂತಿವೆ. ಈಗಲೇ ನಿನ್ನ ಪರೀಕ್ಷೆ ಆಗ ಬೇಕೇ?'' ಎಂದು ಕಳವಳಗೊಳ್ಳುವರು.

''ಕಟ್ಟಡಗಳನ್ನು ವೀರ ಸೈನಿಕರ ಹಾಗೂ, ಸ್ನೇಹಿತರ ಹಾಗೂ, ಎಳೇ ಮಕ್ಕಳ ಹಾಗೂ ಕಂಡುಕೊಳ್ಳುತ್ತಿದ್ದ ಮಹಾಪುರುಷರು ನಮ್ಮ ಗುರು.''

''ಒಂದು ಕಟ್ಟಡವನ್ನು ಕಟ್ಟಲು ಒಪ್ಪಿಕೊಂಡ ಮೇಲೆ ಅವರ ಸಂಪೂರ್ಣ ಗಮನವೆಲ್ಲಾ ಆ ಕಟ್ಟಡದ ಮೇಲೆಯೇ ಇರುತ್ತಿತ್ತು. ಅದು ಮುಗಿಯುವವರೆಗೆ ಆ ಕಟ್ಟಡದಲ್ಲಿ ಏನೇನು ಹೊಸ ವಿನ್ಯಾಸಗಳನ್ನು ರೂಪಿಸಬಹುದು, ಆ ಕಟ್ಟಡದ ದೀರ್ಘಾಯುಷ್ಯಕ್ಕೆ ಯಾವ ಯಾವ ರಕ್ಷಣಾತ್ಮಕ ಕ್ರಮಗಳನ್ನು ಕೈಗೊಳ್ಳಬೇಕು ಎಂದು ಯೋಚಿಸುತ್ತಲೇ ಇರುತ್ತಿದ್ದರು.''

''ಕಟ್ಟಡವನ್ನು ಆರಂಭಿಸಿದಾಗಲೇ, ಅದು ಕಟ್ಟಿ ಮುಗಿಸಿದ ಬಳಿಕ ಹೇಗೆ ಕಂಡುಬರುತ್ತದೆ ಎಂಬ ಚಿತ್ರವು ಅವರ ಮನೋಪಟಲದ ಮೇಲೆ ಮೂಡಿ ಬಿಟ್ಟಿರುತ್ತಿತ್ತು.''

''ಅವರು ನನಗೆ ಗುರುವಾಗಿ ಸಿಕ್ಕಿದುದಕ್ಕೆ ಎಷ್ಟೊ ಜನ್ಮಗಳಲ್ಲಿ ನಾನು ಮಾಡಿದ ಪುಣ್ಯವೇ ಕಾರಣವಿರಬೇಕು. ಎಂಟನೇ ವರ್ಷದಲ್ಲಿ ಅವರ ಕೈ ಕೆಳಗೆ ಕೂಲಿಯಾಳಾಗಿ ಸೇರಿದ ನಾನು ಅವರು ಕೈಲಾಸ ವಾಸಿಗಳಾಗುವವರೆಗೂ ಅವರಲ್ಲೇ ಕೆಲಸ ಮಾಡುತ್ತಿದ್ದೆ. ಇಪ್ಪತ್ತೆಂಟು ವರ್ಷಗಳು.''

''ಅವರು ನನಗೆ ಕೇವಲ ಗುರುಗಳಾಗಿ ಮಾತ್ರ ಇದ್ದಿದ್ದರೆ ಅಷ್ಟು ದಿನ ಅವರೊಡನೆ ಇರುತ್ತಿರಲಿಲ್ಲವೆನ್ನಿಸುತ್ತದೆ. ಕೆಲಸ ಕಲಿಸುವವರೆಲ್ಲ ಗುರುಗಳಾಗಿ ಬಿಡುವುದಿಲ್ಲ. ಹೇಗೆ ಬಾಳಬೇಕೆಂಬುದನ್ನೂ ಬಾಳಿ ತೋರಿಸುವಂಥವರೇ ಗುರುಗಳು. ಗುರುಗೋವಿಂದಸ್ವಾಮಿ ಮೇಸ್ತ್ರಿಗಳು ಅಂಥ ತುಂಬು ಜೀವನ ನಡೆಸಿದವರು.''

''ಅವರ ಜೀವನಕ್ಕೆ ಸರಳತೆ ಹಾಗೂ ಪರಿಶುದ್ಧತೆಗಳೇ ಆಧಾರ. ಅವರ ವ್ಯಕ್ತಿತ್ವಕ್ಕೆ ಒಂದು ದೈವಿಕ ಕಳೆ ತುಂಬಿ ಬಂದಿತ್ತು. ಊಟದಲ್ಲಿ ಮಿತ, ಅವಶ್ಯಕತೆ ಬಿದ್ದಾಗ ಅದೂ ಕೆಲವೇ ಪದಗಳ ಮಾತು. ಮಾತನ್ನು ಕಡಿಮೆ ಮಾಡುವುದನ್ನು ನಾನು ಕಲಿತುಕೊಂಡದ್ದೇ ಅವರಿಂದ. ಮಾತು ಕಡಿಮೆಯಾದಾಗ ವಾದವಿವಾದ ಕಡಿಮೆಯಾಗುತ್ತದೆ. ಆಸೆ, ದ್ವೇಷಗಳು ಕಡಿಮೆಯಾಗುತ್ತವೆ. ತಾಳ್ಮೆ, ಕಷ್ಟವನ್ನು ತಡೆದುಕೊಳ್ಳುವ ಶಕ್ತಿ ಹೆಚ್ಚುತ್ತದೆ. ಎದುರಿನವರ ಮನಸ್ಸನ್ನು ತಿಳಿದುಕೊಳ್ಳುವ, ಕೆಲಸದ ವೇಗವನ್ನು ಹೆಚ್ಚಿಸುವ ಸಾಮರ್ಥ್ಯ ಉಂಟಾಗುತ್ತದೆ.''

''ಗೋವಿಂದಸ್ವಾಮಿ ಮೇಸ್ತ್ರಿಯಂಥ ಕ್ರಿಯಾಶಾಲಿಗಳು ಮುಂದೆ ಹುಟ್ಟಬಹುದು. ಆದರೆ ಅವರಂಥ ಸಿದ್ಧಪುರುಷರು ಖಂಡಿತ ಬರಲಾರರು. ಹೌದು, ಸಿದ್ಧಪುರುಷರ ಲಕ್ಷಣಗಳಾದ ನಿಶ್ಚಿಂತೆ, ದೂರಾಲೋಚನೆ, ಯಾರಿಗೂ, ಏತಕ್ಕೂ ಅಂಟಿಕೊಳ್ಳದ ಸ್ವಭಾವ ಎಲ್ಲ ಅವರಲ್ಲಿದ್ದವು.''

''ಕಟ್ಟಿದ ಕಟ್ಟಡದಲ್ಲಿ ದೈವತ್ವವನ್ನೂ ತನ್ನತನವನ್ನೂ ತುಂಬಿ ಆ ಮೂಲಕ ಆತ್ಮ ಪರಮಾತ್ಮಗಳನ್ನು ಒಂದು ಮಾಡಿಕೊಂಡ ಬಹಳ ಉನ್ನತ ವ್ಯಕ್ತಿತ್ವ ನಮ್ಮ ಗುರುಗಳದ್ದು.''

''ಹಂತಹಂತವಾಗಿ ಮೇಲೆ ಬಂದು ನನ್ನನ್ನು ಅವರು ಸರಿಸಮನಾಗಿ ಕಾಣುತ್ತಿದ್ದ ದಿನಗಳಲ್ಲಿ ಕೆಲವರು ನನ್ನನ್ನೇ ಸ್ವತಂತ್ರ ಮೇಸ್ತ್ರಿಯನ್ನಾಗಿ ಮಾಡಲು ಪ್ರಯತ್ನಪಟ್ಟರು. ಅವರಿಗೆ ನಾನು ಕೊಟ್ಟ ಉತ್ತರ ಇಷ್ಟೆ! 'ನನ್ನ ಗುರುಗಳ ಹತ್ತಿರ ಕಲಿತುಕೊಳ್ಳಬೇಕಾದ್ದು ಇನ್ನೂ ಬಹಳ ಇದೆ. ಅಷ್ಟು ಮಾತ್ರವಲ್ಲ, ಅವರು ಬದುಕಿರೋವರೆಗೂ ಅವರ ಸೇವೆ ಮಾಡ್ಕೊಂಡಿರೋದೇ ನನ್ನ ಭಾಗ್ಯ.''

''ಕಲಿತುಕೊಳ್ಳೊದಿಕ್ಕೆ ಎಷ್ಟೋ ಶಾಸ್ತ್ರಗಳಿರಬಹುದು. ಕಲಿಸೊ ಪುಣ್ಯಾತ್ಮರೂ ಬೇಕಾದಷ್ಟು ಜನ ಇರಬಹುದು. ಆದರೆ ಕಲಿತುಕೊಳ್ಳಬೇಕೆಂದಿರುವವನ ಬುದ್ಧಿಶಕ್ತಿ ಎಷ್ಟಿದೆಯೋ ಅಷ್ಟು ಜ್ಞಾನ

ವನ್ನು ಮಾತ್ರ ಅವನು ಪಡೆಯಬಲ್ಲ. ನಾನೂ ಅಷ್ಟೆ. ಅವರು ಸಮುದ್ರ, ನಾನು ಅವರಿಂದ ಪಡೆದದ್ದು ಒಂದು ಹನಿ.''

''ಆ ಹನಿಯನ್ನಿಟ್ಟುಕೊಂಡೇ ನಾನು ನನ್ನ ಕಸಬನ್ನು ನಡೆಸುತ್ತಿದ್ದೇನೆ. ಆದುದರಿಂದಲೇ ನನ್ನ ಮಗಳ ಮದುವೆಗೆ ಮೊದಲು, ಆ ಮಹಾತ್ಮನನ್ನ ಜ್ಞಾಪಿಸಿಕೊಳ್ಳೋಕ್ಕೋಸ್ಕರ ಈ ಗುರುಪೂಜೆ ಮಾಡ್ತಾ ಇದೀನಿ.

''ತಾವು ನನ್ನ ಮಗಳ ಮದುವೆಗೆ ಬರದೇ ಇದ್ದರೂ ಪರವಾಗಿಲ್ಲ, ಗುರುಪೂಜೆಗೆ ಮಾತ್ರ ತಪ್ಪಿಸ್ಕೋಬೇಡಿ'' ಎಂದು ಹೇಳಿ ರಾಮಸ್ವಾಮಿ ಮೇಸ್ತ್ರೀ ಹೊರಟುಹೋದರು.

ತೂಕ ಮಾಡಿ ಮಾತಾಡುವ ರಾಮಸ್ವಾಮಿ ಮೇಸ್ತ್ರಿ ಆ ದಿನ ತುಂಬಾ ಮಾತನಾಡಿದ್ದರು. ಆದರೆ ಅದು ಮಾತುಗಳಾಗಿರಲಿಲ್ಲ. ಅವು ತಮ್ಮ ಗುರುವಿಗೆ ಅರ್ಪಿಸಿದ್ದ ಶ್ರದ್ಧಾಂಜಲಿ. ದೊಡ್ಡವರ ಗುಣಗಾನದ ಮೂಲಕ ನಮ್ಮನ್ನು ನಾವೇ ಶುದ್ಧಪಡಿಸಿಕೊಳ್ಳುತ್ತೇವೆ. ಆದ್ದರಿಂದ ಅದು ಆಟಾಟೋಪದ ಲೆಕ್ಕಕ್ಕೆ ಬರುವುದಿಲ್ಲ.

ದಾಮೋದರ ಪಿಳ್ಳೆ ಗುರುಪೂಜೆಗೆ ಹೋದರು.

ಆ ಕಲ್ಯಾಣ ಮಂಟಪದಲ್ಲಿ ನಡೆಯುತ್ತಿದ್ದುದು ಗುರುಪೂಜೆಯೋ ಅಥವಾ ಮೇಸ್ತ್ರಿಗಳ ಮಹಾಸಭೆಯೋ ಸ್ಪಷ್ಟವಾಗುತ್ತಿರಲಿಲ್ಲ.

ದಾಮೋದರ ಪಿಳ್ಳೆ ತಮ್ಮ ಕಟ್ಟಡವನ್ನು ಆರಂಭಿಸುವುದಕ್ಕೆ ಮೊದಲು ಯಾವ ಮೇಸ್ತ್ರಿಯನ್ನು ನೇಮಕ ಮಾಡಿಕೊಳ್ಳೋಣ ಎಂದು ಹಲವರ ಸಲಹೆ ಕೇಳಿದರು. ಒಬ್ಬೊಬ್ಬರೂ ಅವರವರಿಗೆ ಪರಿಚಿತರಾದವರ ಹೆಸರುಗಳನ್ನು ಹೇಳಿದರು

ದಾಮೋದರ ಪಿಳ್ಳೆ ಸುಲಭದಲ್ಲಿ ನಂಬುವವರಲ್ಲ. ಕಟ್ಟಡ ಸುಂದರವಾಗಿರಬೇಕು ಹಾಗೇ ವೆಚ್ಚದಲ್ಲೂ ಹಿಡಿತವಿರಬೇಕು. ಅದು ನೇಮಿಸಿಕೊಳ್ಳುವ ಮೇಸ್ತ್ರೀಯನ್ನನುಸರಿಸಿರುತ್ತದೆ ಎಂಬುದನ್ನು ಅವರು ಚೆನ್ನಾಗಿಬಲ್ಲರು. ಆದ್ದರಿಂದ ನೂರಕ್ಕೂ ಹೆಚ್ಚು ಮೇಸ್ತ್ರೀಗಳ ವಿವರಗಳನ್ನು ಶೋಧಿಸಿದ ನಂತರ ರಾಮಸ್ವಾಮಿ ಮೇಸ್ತ್ರಿಯನ್ನು ಚುನಾಯಿಸಿಕೊಂಡರು. ಹಾಗೆ ಪರಿಶೀಲಿಸಿದ ಸಂದರ್ಭದಲ್ಲಿ ನಗರದ ಎಲ್ಲಾ ಪ್ರಸಿದ್ಧ ಮೇಸ್ತ್ರಿಗಳ ಕಿರು ಪರಿಚಯವೂ ಅವರಿಗಿತ್ತು.

ಅವರೆಲ್ಲ ಅಂದಿನ ಗುರುಪೂಜೆಗೆ ಬಂದಿದ್ದರು. ಜೊತೆಗೆ ಇನ್ನೂ ಕೆಲವರು ಸೇರಿದ್ದರು. ಅವರಲ್ಲಿ ಕೆಲವರು ರಾಮಸ್ವಾಮಿ ಮೇಸ್ತ್ರಿಗಿಂತ ಆಚಾರವಂತರಂತೆ ತೋರಿದರು, ಬುದ್ಧಿವಂತರಾಗಿಯೂ ಕಂಡುಬಂದರು.

ರಾಮಸ್ವಾಮಿ ಮೇಸ್ತ್ರಿಗಳ ಕೈ ಕೆಳಗೆ ಕೆಲಸ ಮಾಡುವ ನಾನಾ ರೀತಿಯ ಕೆಲಸಗಾರರೂ, ಕೂಲಿಯಾಳುಗಳೂ ಸೇರಿ ಅಂದಿನ ಸಮಾರಂಭದ ಸಡಗರದಲ್ಲಿ ತೊಡಗಿದ್ದರು.

ಗೋವಿಂದಸ್ವಾಮಿ ಮೇಸ್ತ್ರಿಯವರ, ಬಹಳ ದೊಡ್ಡ ತೈಲ ಚಿತ್ರವೊಂದನ್ನು ವೇದಿಕೆಯ ಮೇಲಿಡಲಾಗಿತ್ತು. ಜೀವನದ ಸಾರಸರ್ವಸ್ವವನ್ನೂ ಅರಿತ ಒಬ್ಬ ದೇವತಾಮನುಷ್ಯನೇ ಎದುರಿಗೆ ಕುಳಿತಂತೆ, ಆ ಚಿತ್ರದಲ್ಲಿ ಅವರನ್ನು ತದ್ರೂಪವಾಗಿ ಮೂಡಿಸಲಾಗಿತ್ತು.

ಆ ಚಿತ್ರಕ್ಕೆ ಬಹಳ ದೊಡ್ಡ ಹೂಮಾಲೆಯೊಂದನ್ನು ಹಾಕಲಾಗಿತ್ತು. ಚಿತ್ರದ ಅಕ್ಕಪಕ್ಕದಲ್ಲಿ ಆಳೆತ್ತರದ ತುಪ್ಪದ ನಂದಾದೀವಿಗೆಗಳು ಬೆಳಗುತ್ತಿದ್ದವು. ಊದುಗಡ್ಡಿ, ಸಾಂಬ್ರಾಣಿಗಳ ಸುಗಂಧಧೂಮ ವಾತಾವರಣವನ್ನೆಲ್ಲಾ ನರುಗಂಪಿನಿಂದ ಆಕ್ರಮಿಸಿತ್ತು. ಚಿತ್ರದ ಮುಂದೆ ಬಗೆಬಗೆಯ ಹಣ್ಣುಗಳನ್ನೂ ಪೂಜಾದ್ರವ್ಯಗಳನ್ನೂ ಇಡಲಾಗಿತ್ತು.

ವಯೋವೃದ್ಧರಾದ ಮೇಸ್ತ್ರಿಯೊಬ್ಬರು ಚಿತ್ರಕ್ಕೆ ಪೂಜೆ ಮಾಡಿ, ಘಂಟಾನಾದದೊಡನೆ ಮಂಗಳಾರತಿ ಮಾಡುತ್ತಿದ್ದಂತೆ, ಗೋವಿಂದಸ್ವಾಮಿ ಮೇಸ್ತ್ರಿಗಳಿಗೆ ಎಲ್ಲರೂ ಒಕ್ಕೊರಲಿನಿಂದ ಜಯಘೋಷ ಮಾಡಿದರು.

ಬಾಳಬೇಕಾದ ಮಾರ್ಗದಲ್ಲಿ ಬಾಳುವೆ ನಡೆಸಿದರೆ ಮನುಷ್ಯ ದೇವರಾಗಬಲ್ಲ ಎಂಬ ಆರ್ಯೋಕ್ತಿಗೆ ಈ ಗುರುಪೂಜೆ ಒಂದು ನಿದರ್ಶನವಾಗಿತ್ತು.

ಪೂಜೆ ನೆರವೇರಿದ ನಂತರ, ಶ್ರದ್ಧಾಂಜಲಿಯ ರೂಪದಲ್ಲಿ ಹಿರಿಯ ಮೇಸ್ತ್ರಿಗಳಲ್ಲಿ ಕೆಲವರು ಮಾತನಾಡಿದರು.

"ಗುರುಗಳು ಅವರಿಗಾಗಿ ಮಾತ್ರ ಬದುಕಲಿಲ್ಲ. ನಮ್ಮ ಕುಲದ ಉದ್ಧಾರಕ್ಕಾಗಿ, ನಮಗೆ ಒಂದು ಸಾಮಾಜಿಕ ಅಂತಸ್ತನ್ನು ತಂದು ಕೊಡುವುದಕ್ಕಾಗಿ ಬಾಳಿದರು. ಗಾರೆ ಕೆಲಸವರು, ಕೂಲಿಯಾಳುಗಳೆಂದೇ ನಮ್ಮನ್ನು ಉದಾಸೀನದಿಂದ ಕಾಣುತ್ತ ಬಂದ ಸಮಾಜಕ್ಕೆ 'ಇವರು ಬ್ರಹ್ಮ ಕುಲದವರು, ಸೃಷ್ಟಿಕರ್ತರು, ಗೌರವಾದರಗಳಿಗೆ ಅರ್ಹರು,' ಎಂಬುದನ್ನು ಸಾಧಿಸಿತೋರಿಸಿ ನಮ್ಮನ್ನು ಮೇಲ್ಮಟ್ಟಕ್ಕೆ ತಂದವರು ಆ ಗುರುಗಳು. ಆದರೆ ನಾವು ಆ ಮಟ್ಟವನ್ನು ಕಾಪಾಡಿಕೊಳ್ಳುತ್ತಿಲ್ಲ. ಏಕೆಂದರೆ ನಾವು ಹಣಕ್ಕೆ ಮುಖ್ಯತ್ವ ಕೊಡುತ್ತಾ ಬರುತ್ತಿದ್ದೇವೆ. ಉದ್ಯೋಗದಲ್ಲಿ ಅಕ್ಕರೆಯನ್ನೂ, ಆಸಕ್ತಿಯನ್ನೂ ತೋರುತ್ತಿಲ್ಲ. ಹಲವರು ಸರಿಯಾದ ತರಬೇತಿಯನ್ನೇ ಪಡೆದಿರುವುದಿಲ್ಲ. ಹಿಂದೆ ಹಲವು ವರ್ಷ ದುಡಿದ ನಂತರವೇ ಸಂಪಾದನೆಯ ಕಡೆ ಗಮನ ಕೊಡುತ್ತಿದ್ದರು. ಈಗ ಕೆಲಸಕ್ಕೆ ನೇಮಿಸಿಕೊಂಡ ದಿನದಿಂದಲೇ ಕೂಲಿ. ಯಾವಾಗ ನೋಡಿದರೂ ಅವಸರ! ಬುದ್ಧಿಯ ಕೊರತೆ! ನಾವು ಕಟ್ಟಿದ ಗೋಡೆ ನಾವು ಮನೆಗೆ ಹೋಗಿ ಮಾರನೆಯ ದಿನ ಕೆಲಸಕ್ಕೆ ಬರುವುದರೊಳಗೆ ನೆಲಸಮ. ಇದು ಸರಿಯೆ! ಹೀಗೆಯೇ ನಡೆದುಕೊಳ್ಳುತ್ತ ಹೋದರೆ ನಮ್ಮ ಉದ್ಯೋಗಕ್ಕೆ ಮರ್ಯಾದೆಯುಂಟೆ? ನಮ್ಮಲ್ಲಿ ಕೆಲವರಾದರೂ ನಮ್ಮ ಗುರುಗಳು ಬಾಳಿದಂತೆ ಬಾಳಿ ತೋರಿಸಿದರೆ ಮಾತ್ರ ನಮ್ಮ ಕುಲ ಪುನಃ ಉನ್ನತ ಮಟ್ಟಕ್ಕೇರುವುದು ಸಾಧ್ಯ," ಎಂದು ಒಬ್ಬರು ಭಾಷಣ ಮಾಡಿದರು. ಅವರಿಗೆ ಕುಲದ ಬಗ್ಗೆ ತುಂಬಾ ಕಳವಳ.

"ಗುರುಗಳಿಗೆ ಸಾಧುಸಂತರ ನಡವಳಿಕೆ ತುಂಬಾ ಪ್ರಿಯ. ಒಂದು ಸಾರಿ ನಾನು ಅವರನ್ನೇ ಕೇಳಿದೆ 'ಗುರುಗಳೇ, ನಿಮ್ಮ ಸುತ್ತಮುತ್ತಲಿನ ಜನಗಳ ಹವ್ಯಾಸ ನಿಮಗೆ ಸರಿಬರುತ್ತಿಲ್ಲವಲ್ಲ. ನೀವು ಯಾಕೆ ಜನರ ಸುಳಿವೇ ಇಲ್ಲದ ಕಾಡಿನಲ್ಲಿ ಒಂದು ಆಶ್ರಮ ಕಟ್ಟಿಕೊಂಡು ಇದ್ದು ಬಿಡಬಾರದು?'

" 'ಅದೂ ಒಂಧು ಜನ್ಮವೇ?' ಎಂದರು.

---

# ಸ್ನಾನದ ಬಗ್ಗೆ ನಿಮಗೆಷ್ಟು ಗೊತ್ತು?

ಪ್ರತಿ ದಿನವೂ ಸ್ನಾನ ಮಾಡುವುದರಿಂದ ಹಸಿವು ಹೆಚ್ಚಾಗುವುದು, ವೀರ್ಯವೃದ್ಧಿ, ಉತ್ಸಾಹ, ಶರೀರಕ್ಕೆ ಬಲಬರುವುದು. ನವೆ, ಆಯಾಸ, ಬೆವರು, ಬಾಯಾರಿಕೆ ನಿವಾರಣೆಯಾಗುವುದು, ಮನಸ್ಸಿಗೆ ಶಾಂತಿ ದೊರೆಯುತ್ತದೆ ಎಂದು ಜಗತ್ತಿನ ಪ್ರಪ್ರಥಮ ವೈದ್ಯ ಪದ್ಧತಿಯಾದ ಆಯುರ್ವೇದ ಶಾಸ್ತ್ರ ತಿಳಿಸುತ್ತದೆ.

ನಿತ್ಯವೂ ಸ್ನಾನ ಮಾಡುವವರಿಗೆ ತಣ್ಣೀರು ಒಳ್ಳೆಯದು. ಮೊದಲು ತಲೆಗೆ ತಣ್ಣೀರನ್ನು ಹಾಕಿಕೊಂಡು ನಂತರ ಮೈಗೆ ಹಾಕಿಕೊಳ್ಳಬೇಕು. ಮೊದಲೇ ಮೈಗೆ ಹಾಕಿಕೊಂಡರೆ ಶರೀರದಲ್ಲಿರುವ ರಕ್ತವು ಮಿದುಳಿಗೆ ಧಾವಿಸಿ ತೊಂದರೆಯಾಗಬಹುದು. ಋತು, ದೇಶ, ಪ್ರಕೃತಿಯನ್ನು ನೋಡಿ ತಣ್ಣೀರು ಅಥವಾ ಬಿಸಿ ನೀರನ್ನು ಆಯ್ಕೆ ಮಾಡಬಹುದು.

ಬಿಸಿ ನೀರಿನ ಸ್ನಾನವು ಕುತ್ತಿಗೆಯ ಕೆಳಭಾಗದ ಶರೀರಕ್ಕೆ ಮಾತ್ರ ಯೋಗ್ಯವಾಗಿರುತ್ತದೆ. ಬಿಸಿ ನೀರಿನಿಂದ ತಲೆಗೆ ಸ್ನಾನ ಮಾಡಿದರೆ ಕೂದಲು ಮತ್ತು ಕಣ್ಣುಗಳ ದೃಷ್ಟಿ ಹಾಳಾಗುತ್ತದೆ.

ಅರ್ಧಾಂಗ ವಾಯು, ಕಣ್ಣು, ಕಿವಿಗಳ ರೋಗ, ಅತಿಸಾರ, ಹೊಟ್ಟೆಯುಬ್ಬರ, ಶೀತ, ಅಜೀರ್ಣಗಳಲ್ಲಿ ಆಗ ತಾನೇ ಊಟ ಮಾಡಿದ ಮೇಲೆ ಸ್ನಾನ ಮಾಡಬಾರದು.

ಸ್ನಾನಗಳಲ್ಲಿ ಹಲವು ವಿಧಗಳಿವೆ. ಜಲಸ್ನಾನ, ಕಷಾಯ ಸ್ನಾನ, ತೈಲಸ್ನಾನ, ಕ್ಷೀರಸ್ನಾನ ಈ ತರಹದ ಸ್ನಾನ ವಿಧಿಗಳನ್ನು ನಮ್ಮ ಶಾಸ್ತ್ರದಲ್ಲಿ ತಿಳಿಸಿದ್ದಾರೆ.

*ಎಂ.ಎಸ್.ಜಗದೀಶ್*

ಆಧಾರ: 'ಅಷಾಂಗ ಸಂಗ್ರಹ'

ನಮ್ಮ ಜನ ದಿನೇ ದಿನೇ ನಾಶದ ದಾರಿ ಓಡೀತಾ ಇರೋ.

"ಹೋಗಲಿ, ಅಪ್ಪನಿಗೂ ಮಗಳಿಗೂ ಅಂಥಾ ವೈಷಮ್ಯ ಏನು ಬಂತು?"

"ಇನ್ನೊಬ್ಬರ ಕಥೆ ನಮಗೆ ಯಾಕೆ ಬಿಡಿ."

ಛೆ! ರಾಮಸ್ವಾಮಿ ಮೇಸ್ತ್ರಿಯ 'ಮಾತು ಕಡಿಮೆ' ಸೂತ್ರ ಇಷ್ಟು ಹೊತ್ತೂ ಇಲ್ಲದೇ ಈಗ ಅವರಿಗೆ ನೆನಪಿಗೆ ಬರಬೇಕೆ? ಅವರು ಮಾತನ್ನು ನಿಲ್ಲಿಸಿಬಿಟ್ಟರು. ಪುನಃ ಅವರನ್ನು ಮಾತಿಗೆಳೆಯುವುದು ದುಸ್ತರ.

ದಾಮೋದರ ಪಿಳ್ಳೆಯವರಿಗೆ ಚೆಲ್ಲಮ್ಮ ಒಬ್ಬಳು ಕಥಾನಾಯಕಿಯಂತೆ ತೋರಲಾರಂಭಿಸಿದ್ದಳು. ಕಥೆ ಪ್ರಾರಂಭವಾಗಿತ್ತು. ಉಳಿದದ್ದನ್ನು ಯಾರಿಂದ, ಯಾವಾಗ, ಹೇಗೆ ತಿಳಿದುಕೊಳ್ಳುವುದು?

ಪಿಳ್ಳೆಯವರ ಬಂಗ್ಲೆ ಕಟ್ಟಡದ ಕೆಲಸ ಮುಗಿಯುವ ಹಂತಕ್ಕೆ ಬಂದಿತು. ಕಾಂಪೌಂಡು, ಕಟ್ಟಡದ ಎಡಭಾಗಕ್ಕೆ ಸೇರಿದಂತೆ ಕಾರ್‌ಷೆಡ್ಡು ಅದರ ಮೇಲೆ ಒಂದು ಅತಿಥಿ ಗೃಹ ಎಲ್ಲವೂ ಮುಗಿಯುತ್ತ ಬಂದಿತ್ತು. ಪಿಳ್ಳೆಯವರು ಗೃಹಪ್ರವೇಶದ ದಿನಾಂಕವನ್ನೂ ನಿರ್ಧರಿಸಿ ಆಗಿತ್ತು. ತಾರೀಖೂ ಹತ್ತಿರ ಬರತೊಡಗಿತ್ತು.

ಬಂಗ್ಲೆಯ ಪೇಯಿಂಟ್ ಕೆಲಸವನ್ನು ಒಂದು ದೊಡ್ಡ ಕಂಪನಿಗೆ ಗುತ್ತಿಗೆ ಕೊಡಲಾಗಿತ್ತು. ಒಂದು ದಿನ ಕಂಪೆನಿಯಿಂದ ಐದಾರು ಜನ ಪೇಯಿಂಟ್ ಕೆಲಸಗಾರರು ಬಂದು ಕೆಲಸವನ್ನಾರಂಭಿಸಿದರು. ಅವರು ಕೆಲಸಕ್ಕೆ ತೊಡಗಿ ಸುಮಾರು ಹತ್ತು ನಿಮಿಷಗಳಾಗಿರಬೇಕು; ಅಷ್ಟರಲ್ಲಿ ರಾಮಸ್ವಾಮಿ ಮೇಸ್ತ್ರಿಗಳೂ ಅವರ ಕೆಲಸಗಾರರೂ, ಮಾಡುತ್ತಿದ್ದ ಕೆಲಸವನ್ನು ಬಿಟ್ಟು, ಒಂದುಗೂಡಿ ದಾಮೋದರ ಪಿಳ್ಳೆಯವರ ಬಳಿಗೆ ಬಂದರು. ಅವರು ಬಂದ ರೀತಿಯಲ್ಲೇ ಯಾವುದೋ ಒಂದು ದೊಡ್ಡ ಸಮಸ್ಯೆ ಬರುತ್ತಿದೆ ಎಂಬುದು ತಿಳಿದುಹೋಯಿತು.

"ಏನು ಮೇಸ್ತ್ರೀ? ಯಾಕೆ ಎಲ್ಲರೂ ಕೆಲಸ ನಿಲ್ಲಿಸಿ ಬಂದುಬಿಟ್ಟಿರಿ?"



**ಸಾಲ ಕೊಡೋಕೆ ಯಾಕೋ ಅಷ್ಟು ದಾಕ್ಷಿಣ್ಯ ಪಟ್ಕೋತೀರಿ, ಸಾಲ ತಗೊಳ್ಳೋ ನಂಗೇ ಸಂಕೋಚ ಆಗ್ತಾಇಲ್ಲ!**

"ಪೇಯಿಂಟ್ ಮಾಡುತ್ತಿರೋರ ಪೈಕಿ ಒಬ್ಬ ನಮಗೆ ಆಗದವನು. ಅವನು ಇಲ್ಲಿ ಕೆಲಸ ಮಾಡ್ತಾ ಇರೋವರೆಗೆ ನಾವು ಯಾರೂ ಕೆಲಸಕ್ಕೆ ಕೈ ಹಾಕೋದಿಲ್ಲ."

"ಯಾರು? ಯಾರದು?"

ರಾಮಸ್ವಾಮಿ ಮೇಸ್ತ್ರಿಗೆ ಅವನ ಹೆಸರು ಹೇಳುವುದಕ್ಕೂ ಇಷ್ಟವಿರಲಿಲ್ಲ. "ಲೋ ಏಳುಮಲೈ! ಯಜಮಾನರಿಗೆ ಆ ಅಯೋಗ್ಯನ ಹೆಸರು ಹೇಳು" ಎಂದು ಒಬ್ಬ ಆಳಿಗೆ ಹೇಳಿದರು.

"ಮನುಷ್ಯನಾಗಿರೋನು ಯಾರೂ ಅವನ ಹೆಸರೆತ್ತ್ಲೇ ಕೂಡದು. ವಿಧಿಯಿಲ್ಲ. ಅಲ್ಲಿ ನೋಡಿ, ಆ ಕಿಟಕೀ ಕಾಲಾವಧೀ ಮೇಲೆ ನಿಂತಿದಾನಲ್ಲ ಧಡಿಯಾ ಅವನೇ. ಹೆಸರು ವಡಿವೇಲು

ಎಂದು ಏಳುಮಲೈ ಹೇಳಿ ತಲೆತಗ್ಗಿಸಿದ.

ಪೇಯಿಂಟರುಗಳಿಗೆ ಆ ವಡಿವೇಲುವೇ ಮುಂದಾಳು. ದಾಮೋದರ ಪಿಳ್ಳೆಯವರಿಗೆ ಯಾರವನೆಂಬುದು ತಿಳಿದು ಹೋಯಿತು.

"ಮೇಸ್ತ್ರಿ! ಅವನು ಅಂಥಾ ತಪ್ಪು ಏನು ಮಾಡಿದಾ?"

''ಅದೆಲ್ಲ ಈಗ ಬೇಡ. ತಕ್ಷಣ ಅವನು ಕೆಲಸ ಬಿಟ್ಟು ಇಲ್ಲಿಂದ ಹೊರಟುಹೋಗಬೇಕು.'' ಮೇಸ್ತ್ರಿ, ಅದು ಈ ಕಾಲದಲ್ಲಿ ಅಷ್ಟು ಸುಲಭಾ ಅಲ್ಲ. ಕಾರಣ ಇಲ್ಲದೇ ಒಬ್ಬನ್ನ ಕೆಲಸಾ ಬಿಟ್ಟು ಹೋಗೂ ಅನ್ನೋಕ್ಕಾಗುತ್ಯೇ? ಎಲ್ಲಾ ತಿಳಿದ ನೀವೇ ಹೀಗೆ ಮಾತಾಡಿದರೆ ಹೇಗೆ?

''ಅವನು ಇಲ್ಲಿ ಕೆಲಸ ಮಾಡಿದರೆ ರಕ್ತಾ-ರಕ್ತಾ ಚೆಲ್ಲಾಡುತ್ತೆ!'' ಎಂದು ವೀರಯ್ಯನೆಂಬೊಬ್ಬ ಕೆಲಸಗಾರನ ಆಕ್ರೋಶ.

''ಅವನ್ನ ನಾನೇ ಯಾವಾಗಲೋ ಮುಗಿಸಿಬಿಡಬೇಕೂಂತಿದ್ದೆ. ನಮ್ಮ ಗುರುಗಳೇ ಅಡ್ಡಿ ಬಂದರು. ಅದಕ್ಕೆ ಬಹಳ ದೊಡ್ಡ ಕಾರಣಾ ಇದೆ. ಬನ್ನಿ ಹೇಳ್ತಿನಿ'' ಎನ್ನುತ್ತಾ ಮೇಸ್ತ್ರಿ ಪಿಳ್ಳೆಯವರನ್ನು ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋದರು.

''ಸ್ವಾಮೀ, ಚೆಲ್ಲಮ್ಮಾ ಯಾಕೆ ಮಾತಾಡೋದಿಲ್ಲ ಅಂತ ಆಗಾಗ್ಗೆ ಕೇಳ್ತಾನೇ ಇರ್ತಿದ್ರಲ್ಲಾ? ಅವಳು ಹಾಗೆ ಮೂಗಿಹಾಗೋಗದಕ್ಕೆ ಇವನೇ ಕಾರಣ''

ದಾಮೋದರ ಪಿಳ್ಳೆ ಮೈಯನ್ನೆ ಕಿವಿಯಾಗಿ ಮಾಡಿಕೊಂಡು ಕುಳಿತರು. ಮೇಸ್ತ್ರಿ ಮುಂದುವರೆಸಿದರು.

''ಬೆಳ್ಳಕ್ಕಿ ಹಾಗೆ ಹಾಯಾಗಿ ಹಾರಾಡಿಕೊಂಡಿದ್ದ ಚೆಲ್ಲಮ್ಮನ ರೆಕ್ಕೆಗಳನ್ನು ಕತ್ತರಿಸಿ, ಗಿಣೀ ಹಾಗೆ ಮಾತಾಡ್ಕೊಂಡಿದ್ದ ಅವಳ ಬಾಯಿಗೆ ಹೊಲಿಗೆ ಹಾಕಿದ ಪರಮ ಚಂಡಾಲ ಇವನು. ನೂರು ವರ್ಷ ಬಾಳಬೇಕಿದ್ದ ನನ್ನ ಗುರುಗಳನ್ನು ಎಪ್ಪತ್ತನೇ ವರ್ಷದಲ್ಲೇ ಸಾಯಿಸಿದ ಪಾಪಿ ಇವನು. ಅವನು ಉಸಿರಾಡಿದ ಗಾಳಿಯಲ್ಲಿ ನಾವು ತಿರುಗಾಡಬಾರದು.''

''ಚೆಲ್ಲಮ್ಮನಿಗೆ ಅವನು ಏನು ಅಂಥಾ ದ್ರೋಹ ಮಾಡಿದ್ದು?''

''ಅದೊಂದು ಕಥೆ. ನಾನು ಗುರುಗಳ ಹತ್ತಿರ ಕೆಲಸ ಕಲಿಯೊಕ್ಕೆ ಪ್ರಾರಂಭ ಮಾಡಿದ ಹೊಸದರಲ್ಲೇ ಚೆಲ್ಲಮ್ಮ ಹುಟ್ಟಿದ್ದು. ಅವಳು ಹುಟ್ಟಿದ ಸ್ವಲ್ಪವೇ ದಿನಗಳಲ್ಲಿ ಚೆಲ್ಲಮ್ಮನ ತಾಯಿ ಸ್ವರ್ಗಮ್ಮ ತೀರಿಕೊಂಡರು. ಗೋವಿಂದ ಸ್ವಾಮಿ ಮೇಸ್ತ್ರಿಗಳೇ ಅವಳಿಗೆ ತಾಯಾಗಿ ಕಾಪಾಡಿ ಬೆಳೆಸಿದರು. ಎಲ್ಲಾ ಆಸೆಗಳನ್ನು ತೊರೆದವರಿಗೂ ಮಕ್ಕಳ ಆಸೆ ಮಾತ್ರ ಹೋಗೋದಿಲ್ಲ ಅಂತಾರೆ. ಅದಕ್ಕೆ ಗುರುಗಳೇ ಸಾಕ್ಷಿ. ಚೆಲ್ಲಮ್ಮನಿಗೆ ಐದುವರ್ಷಗಳು ತುಂಬೋವರ್ಗೆ, ಅವಳನ್ನು ನೋಡ್ಕೋಳೊಕ್ಕೇ ಅಂತ್ಲೇ ಅವರು ಯಾವ ಕಟ್ಟಡದ ಕೆಲಸಾನೂ ಒಪ್ಕೋಳ್ಳೇ ಇಲ್ಲ. ಮಗು ಕೈಕಾಲು ಒದರೋದನ್ನ, ಬೊಚ್ಚು ಬಾಯಿಬಿಟ್ಟು ನಗೋದನ್ನ, ತೆವಳೋದನ್ನ, ಒಂದೊಂದಾಗಿ ಹಲ್ಲು ಹುಟ್ಟೋದನ್ನ, 'ಉಂಗಾ-ಉಂಗಾ' ಅಂತ ಮಾತಾಡೋಕ್ಕೆ ಶುರು ಮಾಡಿದ್ದನ್ನ, ಅವರನ್ನ ಹಿಡಿದು ಎದ್ದು ನಿಲ್ಲೋದನ್ನ - ಹೀಗೆ ಚೆಲ್ಲಮ್ಮನ ಒಂದೊಂದು ಚಲನೇನೂ ನೋಡಿ ನೋಡಿ ಹಿಗ್ಗುತ್ತಿದ್ದರು. ಮಗು ಹಾಗೂ ತಮಗೆ ಅಡಿಗೇಗೇಂತ ಒಂದು ವಯಸ್ಸಾದ ಹೆಂಗಸನ್ನ ನೇಮಿಸಿಕೊಂಡಿದ್ದರು.

'ಚೆಲ್ಲಮ್ಮ ತುಂಬಾ ರೂಪವಂತೆ. ಆದರೆ ಪಾಠ ಮಾತ್ರ ತಲೆಗೆ ಹತ್ತಲಿಲ್ಲ. ಅದರ ಬಗ್ಗೆ ಗುರುಗಳೂ ತಲೆ ಕೆಡಿಸಿಕೊಳ್ಳಲಿಲ್ಲ. 'ಅವಳು ಬದುಕಿನಲ್ಲೇ ಕಲಿಯೋದನ್ನೆಲ್ಲಾ ಕಲಿತ್ಕೋತಾಳೆ. ಪುಸ್ತಕದ ವಿದ್ಯೇಗಿಂತ ಅದೇ ಶ್ರೇಷ್ಠ' ಅಂತಾ ಸಮಾಧಾನ ಹೇಳ್ತಿದ್ದರು.

''ಅವಳು ದೊಡ್ಡವಳಾದಾಗ ಆ ಸಮಾರಂಭಾನಾ ಒಂದು ದೊಡ್ಡ ಮದುವೇ ಹಾಗೇ ನಡೆಸಿಬಿಟ್ಟರು. ನಮ್ಮ ಕುಲಬಾಂಧವರಿಗೆಲ್ಲಾ ಆ ಸಮಾರಂಭದ ವಿಶೇಷಗಳೂ ಇನ್ನೂ ನೆನಪಿನಲ್ಲಿವೆ.''

''ಅವಳಿಗೆ ತಕ್ಕ ವರನನ್ನ ಹುಡುಕುತ್ಲೇ ಇದ್ದರು. 'ಅವಳ ಕೈಹಿಡಿಯೋನು, ನಮ್ಮ ಜಾತೀಲೇ ಅತ್ಯಂತ ಭಾರೀ ಮನೆತನದವನಾಗಿದ್ದು, ಪರಿಚಯವರಲ್ಲೆಲ್ಲಾ ಒಳ್ಳೇ ಹೆಸರು ಪಡೆದಿರೋ ಅಂಥಾವನಾಗಿರಬೇಕು ಅಂಥಾವನಾಗಿರ್ತಾನೆ.' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು.''

''ನಾವು ಸಾಮ್ನಾವಾಗಿ ಬೆಳಿಗ್ಗೆ ಕೆಲಸಕ್ಕೆ



ನನ್ನ ಸಚಿವ ಸಂಪುಟದಲ್ಲಿ ಭಿನ್ನಮತೀಯರ ಸಮಸ್ಯೆ ಬರಬಾರದು ಅಂತ ಯೋಚಿಸಿ ನಮ್ಮ ಮತೀಯರನ್ನೇ ಸೇರಿಸಿಕೊಂಡಿದ್ದೇನೆ. ಹ್ಹಿ.. ಹ್ಹೀ... ಹ್ಹೀ....!

ಬರೋವಾಗಲೇ ಮಧ್ಯಾಹ್ನದ ಊಟಾನೂ ತೊಗೊಂಡು ಬರೋ ಪದ್ಧತಿ. ಆದರೆ ನಮ್ಮ ಗುರುಗಳು 'ಆರಿದ ಅಡಿಗೆ ಆರೋಗ್ಯಕ್ಕೆ ಕೆಡುಕು; ಬಿಸಿಬಿಸಿಯಾಗೇ ಊಟ ಮಾಡಬೇಕು' ಅನ್ನೋ ಅಭಿಪ್ರಾಯದವರು. ಅದ್ದರಿಂದ ದಿನಾ ಮಧ್ಯಾಹ್ನ ಅಡಿಗೆಯಮ್ಮನೇ ಅವರಿಗೆ ಊಟ ತರುತ್ತಿದ್ದಳು. ಒಂದು ದಿನ ಆಕೆಗೆ ಜ್ವರ ಬಂದಿದ್ದುದರಿಂದ ಚಲ್ಲಮ್ಮನೇ ಅಪ್ಪನಿಗೆ ಊಟ ತಂದಿದ್ದಳು.

''ಆಗಲೇ ಈ ಅಯೋಗ್ಯ ಅವಳ ಕಣ್ಣಿಗೆ ಬಿದ್ದದ್ದು. ಇಬ್ಬರೂ ಒಬ್ಬರನ್ನೊಬ್ಬರು ನೋಡಿದ ಘಳಿಗೆ ಮಹಾ ಕೆಟ್ಟ ಘಳಿಗೆ

''ಅವನು ಹೊಟ್ಟೇ ಪಾಡಿಗೇಂತ ದಕ್ಷಿಣದ ಕಡೆಯಿಂದ ಬಂದವನು. ನಮ್ಮ ಗುಂಪಿಗೆ ಸೇರಿ ಒಂದೆರಡು ವಾರವಾಗಿರಬೇಕು. ಈಗ ನೋಡಿದರೇ ಹೀಗೆ ತುಂಡಾಂಡಿಗನಾಗಿದ್ದಾನಲ್ಲಾ, ಇನ್ನು ಆಗ ಹೇಗಿದ್ದಿರಬಹುದು! ಅವನ ಮಾಟ, ನೋಟಗಳಿಗೆ ಚಲ್ಲಮ್ಮ ಸೋತುಹೋದಳು.

''ಮೊದಲ ದಿನ ಅಡಿಗೆಯಮ್ಮನಿಗೆ ಜ್ವರ ಎಂದು ಊಟ ತಂದು ಚಲ್ಲಮ್ಮ ಆ ಮೇಲೂ ತಾನೇ ಊಟ ತರೋದನ್ನ ರೂಢಿ ಮಾಡ್ಕೊಂಡಿದ್ದಳು.

''ಏನೇನು ಮಾತಾಡ್ಕೋತಾ ಇದ್ರೋ ಗೊತ್ತಿಲ್ಲ, ಆಗಾಗ್ಗೆ ನಗುತ್ತಿದ್ದರು. ಒಬ್ಬರನ್ನೊಬ್ಬರು ನುಂಗುವಂತೆ ನೋಡುತ್ತಲೇ ಕಾಲ ಕಳೆಯುತ್ತಿದ್ದರು. ಸುತ್ತಮುತ್ತಿನವರು ನೋಡ್ತಿರ್‍ತಾರಲ್ಲ. ಏನನ್ಕೊಂಡಾರು ಅನ್ನೋ ಪ್ರಶ್ನೆಯೇ ಅವರಿಗೆ ಇರುತ್ತಿರಲಿಲ್ಲ.

''ಅವರ ನಡೆವಳಿಕೆ ನಮಗೆ ಹಿಡಿಸ್ತಿರಲಿಲ್ಲವಾದರೂ ಅದನ್ನ ಗುರುಗಳ ಹತ್ತಿರ ಹೇಳೋದು ಅನ್ನೊ ಸಂಕೋಚ ನಮ್ಮನ್ನ ತಡೆದಿತ್ತು.

''ಒಂದು ದಿನ ಚಲ್ಲಮ್ಮ ಎರಡು ಕ್ಯಾರಿಯರ್‌ಗಳಲ್ಲಿ ಊಟ ತಂದಳು. ಮಾಮೂಲಿನಂತೆ ತಂದೆಗೆ ಬಡಿಸಿದಳು. ಅವರು ಹೊರಗೆ ಹೊರಟ ಮೇಲೆ ಇನ್ನೊಂದು ಕ್ಯಾರಿಯರ್‌ನಲ್ಲಿದ್ದ ಊಟಾನ ಈ ಅಯೋಗ್ಯನಿಗೆ ಬಡಿಸಿದಳು. ನಾಚಿಕೆಕೆಟ್ಟ ಮನುಷ್ಯ. ಅವನ ಎಂಜಲನ್ನಾನ ಅವಳ ಬಾಯಿಗೆ ಎರಡು ಸರ್ತಿಗಿಡಿದ. ಸಿಕ್ಕಿ ಹಾಕಿಕೊಂಡಮೇಲೆ ಲಜ್ಜೆ ಎಲ್ಲಿ ಬಂತು? ಹದಿನಾರು ವರ್ಷ ಮುಚ್ಚಟೆಯಾಗಿ ಬೆಳೆದ ಚಲ್ಲಾಯಿ ಆ ಒಂದೆರಡು ವಾರದ ಬಳಕೆಯವನ ತುತ್ತಿಗೆ ಬಾಯಿ ತೆರೆದಳು. ನಾವು ಕಣ್ಣುಗಳನ್ನು ಮುಚ್ಚಿಕೊಂಡೆವು. ಕೆಲವು ನಿಮಿಷದ ನಂತರ ಅವರಿಬ್ಬರೂ ಎಲ್ಲೋ ಕಣ್ಣಿಗೇ ಬೀಳಲಿಲ್ಲ. ಹುಡುಕಿಕೊಂಡು ಹೋಗಿ ನೋಡಿದೆ. ಮಹಡಿಯಲ್ಲಿ ಯಾರ ಕಣ್ಣಿಗೂ ಬೀಳದ ಜಾಗದಲ್ಲಿ, ಅವನ ತೊಡೆಯ ಮೇಲೆ ತಲೆಯಿಟ್ಟು ಅವಳು ಮಲಗಿದ್ದಳು. ''ವೇಲೂ ನಾವಿಬ್ಬರೂ ಹೀಗೇ ಸತ್ತುಹೋದರೆ ಎಷ್ಟು ಚೆನ್ನಾಗಿರುತ್ತೆ?'' ಅಂದಳು.

''ನಾವು ಬಾಳೋಕ್ಕೇಂತ ಹುಟ್ಟಿರೋರು! ಯಾಕೆ ಸಾಯಬೇಕು?'

''ಸದಾ ನಿನ್ನ ಜೊತೇಲೇ ಇರಬೇಕು. ಅದೇ ನನ್ನ ಆಸೆ. ಅದು ಬದುಕಿದ್ರೋ, ಸತ್ರೋ ಅದು ನನಗೆ ಬೇಕಿಲ್ಲ.

'ನಿನಗೆ ನಿನ್ನಪ್ಪ ಗಂಡು ಹುಡುಕ್ತಾ ಇದಾರಂತಲ್ಲ?'

'ನನ್ನ ಕತ್ತಿನಲ್ಲಿ ಒಂದೇ ತಾಲೀಗೆ ಜಾಗ ಇರೋದು. ಅದು ನೀನು ಕಟ್ಟೋ ತಾಲೀಗೆ ಮಾತ್ರ'

''ಅಯ್ಯೋ ಚಂಡಾಲ. ಏನೂ ಅರೀದ ಹುಡುಗೀನ ಇಷ್ಟೊಂದು ಮರುಳು ಮಾಡಿಬಿಟ್ಟ ದಾನಲ್ಲಾ! ಇನ್ನು ಸುಮ್ನಿರೋದು ಸರಿಯಲ್ಲಾ' ಅಂತ ನಾನೇ ರಾತ್ರಿ ಗುರುಗಳನ್ನ ನೋಡಿ ನಡೆದದ್ದನ್ನೆಲ್ಲಾ ಚಾಚೂ ತಪ್ಪದೇ ಹೇಳಿಬಿಟ್ಟೆ.

''ಅವರ ಕಣ್ಣುಗಳಲ್ಲಿ ಜ್ವಾಲೇ ಎದ್ದ ಹಾಗಾಯಿತು. ಮೈ ನಡುಗಿಹೋಯಿತು. ''ಚಲ್ಲಮ್ಮ ಅಂತ ಕೂಗಿಕೊಂಡರು.

''ಚಲ್ಲಮ್ಮ ಬಂದಳು. ಗುರುಗಳು ಅವಳ ಹತ್ತಿರ ಯಾವ ಮಾತ್ನೂ ಆಡಲಿಲ್ಲ. ಕೈಗೆ ಸಿಕ್ಕಿದ 'ಮಟ್ಟಗೋಲಿ'ನಲ್ಲಿ ಯದ್ವಾತದ್ವಾ ಅವಳನ್ನು ಹೊಡೆದರು. ಚಲ್ಲಮ್ಮಾ 'ಅಯ್ಯೋ ಅಪ್ಪಾ' ಎಂದು ಕೂಗಾಡಿದಳು. ಅವರನ್ನ ತಡೆಯೋ ಶಕ್ತಿ, ಅಡಿಗೆಯಮ್ಮನಿಗೋ ನನಗೋ ಬರಲಿಲ್ಲ. ಬೆಪ್ಪನ ಹಾಗೇ ನೋಡ್ತಾನೇ ನಿಂತಿದ್ದೆವು. ಎದುರು ಮನೆ ಪೊನ್ನಮ್ಮಾ ಓಡಿ ಬಂದು 'ಮಟ್ಟಗೋಲ'ನ್ನು ಅವರ ಕೈಯಿಂದ ಕಿತ್ತು ಬಿಸಾಡಿದಳು. 'ಅವಳು ನಿಮ್ಮ ಮಗಳು'! ಹೋಗಲಿ ಒಬ್ಬ ಮನುಷ್ಯ ಇನ್ನೊಂದು ಮನುಷ್ಯ ಪ್ರಾಣೀನ ಹೀಗೆ ಹೊಡೆಯೋದುಂಟೆ? ನೀವೇನು ಮನುಷ್ಯರಲ್ಲ ರಾಕ್ಷಸರೋ?' ಅಂದಳು. ಚಲ್ಲಮ್ಮ ಪೊನ್ನಮ್ಮನ್ನ ತಬ್ಬಿಕೊಂಡು 'ಹೋ' ಅಂತ ಅತ್ತಳು.

''ಪೊನ್ನಮ್ಮ, ನಿನಗೆ ಏನು ವಿಷಯಾಂತ ಗೊತ್ತಿಲ್ಲ. ಹದಿನಾರು ವರ್ಷ ಇನ್ನೂ ಸರಿಯಾಗಿ ತುಂಬಿಲ್ಲ. ಅಷ್ಟರಲ್ಲಿ ಯಾವನೋ ಹಿಂದೆ ಮುಂದೆ ತಿಳೀದೆ ಇದ್ದ, ನೀತಿ, ನಿಯಮಾಂದ್ರೇನೂ ಗೊತ್ತಿಲ್ಲದ, ಒಬ್ಬ ಕೀಳು ಮಟ್ಟದ ಕೂಲಿಯೊಬ್ಬನ ಹತ್ತಿರ ಇವಳು ಸರಸಾ ಆಡ್ತಾ ಇದ್ದಳಂತೆ!'

'ಅಷ್ಟೇ ತಾನೇ. ಅಷ್ಟಕ್ಕೋಸ್ಕರ ಆ ಹುಡುಗೀನ ದನ ಬಡಿಯೋ ಹಾಗೆ ಬಡಿಯೋದಾ?'

''ನಿನ್ನ ಬುದ್ಧಿ ಎಲ್ಲಿ ಹೋಗುತ್ತೆ. ಮನೇ ಬಿಟ್ಟು ಓಡಿಹೋದ ನಿನ್ನ ಮಗಳು ವರ್ಷಾ ಆದ ಮೇಲೆ ಕಂಕುಳಲ್ಲಿ ಒಂದು ಮಗು ಎತ್ತುಕೊಂಡು ಬಂದಳು. ಅವಳ್ನ ಮನೇಗೆ ಸೇರಿಸ್ಕೊಂಡ ಮಹಾತಾಯಿ ತಾನೆ ನೀನು?''

''ಸೇರಿಸ್ಕೊಂಡದ್ದು ಮಾತ್ರಾ ಅಲ್ಲ. ಮೊದಲಿಗಿಂತ ಅವಳ್ನ ಇನ್ನೂ ಚೆನ್ನಾಗಿ ನೋಡ್ಕೋತಾ ಇದೀನಿ. ಅವಳ ಮಗೂನ ಮಾಣಿಕ್ಯ ನೋಡ್ಕೊಂಡ ಹಾಗೆ ನೋಡ್ಕೋತಿದೀನಿ ...... ನೀವು ಶಾಸ್ತ್ರ ಪಾಸ್ತ್ರ ತಿಳಿದೋರು ಆದ್ದರಿಂದ ನಿಮ್ಮ ಕಣ್ಣಿಗೆ ನಿಮ್ಮ ಮಗಳು ಕಾಣಲಿಲ್ಲ. ನೀತಿ ಮಾತ್ರ ಕಂಡಿತು. ನಾನು ಹತ್ತು ತಿಂಗಳು ಮಗಳನ್ನ ಹೊತ್ತವಳು. ಇಪ್ಪತ್ತು ತಿಂಗಳು ಹಾಲು ಕೊಟ್ಟವಳು. ಅದಕ್ಕೇ ನನಗೆ ಅವಳು ನನಗೆ ಮಗಳ್ಹಾಗೇ ಕಂಡಳು. ನೀತಿ ನನಗೆ ಬೇಕಾಗಲಿಲ್ಲ...... ಅದೂ ಇರಲಿ, ನೀತಿವಂತರಾಗಿ ದೀವಿ ಅನ್ನೋ ಗರ್ವ ನಿಮ್ಮನ್ನ ಒರಟಾಗಿ ನಡೆಸುತ್ತೆ. ಅಧಿಕಾರ ಚಲಾಯಿಸ್ತೀರಿ. ಇಂಥಾ ಸಮಯದಲ್ಲಿ ಪ್ರೀತಿಯಾಗೇ ನಡ್ಕೋಬೇಕು ಅನ್ನೊ ನನ್ನ ಮನಸ್ಸು ''ಅಯ್ಯೋ ಪಾಪ ಅನ್ನು, ಅನುಸರಿಸಿಕೊಂಡು ಹೋಗೀ' ಅನ್ನುತ್ತೆ. ಇದೇ ನನಗೂ ನಿಮಗೂ ಇರೋ ವ್ಯತ್ಯಾಸ.''

''ಎಲ್ಲರೂ ಮಾತಾಡೋದು ಕಲಿತ್ಕೊಂಡು ಬಿಟ್ಟಿದೀರಿ. ಎಲ್ಲರ್ಗೂ ಓದದೇನೇ ಶಾಸ್ತ್ರಗಳು ತಲೇಗೆ ಬಂದು ತುಂಬ್ಕೊಂಡು ಬಿಟ್ಟಿವೆ. ಪೊನ್ನಮ್ಮಾ ಹೆಣ್ಣುಗಳು ಕಾಮದ ಗೊಂಬೆಗಳಾಗಬಾರದು .... ದೇವರ ಮಕ್ಕಳನ್ನು ಹೆರೋನು? ಹೆಣ್ಣು, ಹೆರೋಳು! ಆದ್ದರಿಂದ ಅವಳೇ ದೇವರು! ಮಕ್ಕಳನ್ನು ಹೆರೋದು ಮಾತ್ರ ಅಲ್ಲ. ಅವನ್ನ ಬುದ್ಧಿವಂತರನ್ನಾಗಿ ಗುಣವಂತರನ್ನಾಗಿ ದೇಶಕ್ಕೆ ಉಪಯೋಗವಾಗೋ ಅಂಥವರನ್ನಾಗಿ ಬೆಳೆಸಬೇಕಾದವಳು ಅವಳೇ! ನನ್ನ ಮಗಳು ಅಂಥಾ ದೇವತೆಯಾಗಬೇಕು! ಅವಳಿಗೆ ಸಮನಾದ ಗಂಡನ ಕೈ ಹಿಡಿದು ಒಬ್ಬ ಮೊಮ್ಮಗನನ್ನ ನನಗೆ ಕೊಡಬೇಕು. ಆ ಹುಡುಗ ನನ್ನ ವಂಶಾನ ಉದ್ಧಾರ ಮಾಡಬೇಕು.

ನನ್ನ ಅನುಭವಾನೆಲ್ಲಾ ಹಂಚಿಕೊಂಡು ನನಗಿಂತ ದೊಡ್ಡ ಗೋವಿಂದಸ್ವಾಮಿ ಮೇಸ್ತ್ರಿಯಾಗಿ ಮೆರೀಬೇಕು. ಅಂತೆಲ್ಲ ಕನಸುಕಾಣ್ತಾ ಇದ್ದೆ. ಅದನ್ನೆಲ್ಲಾ ಸುಟ್ಟು ಸುಡುಗಾಡು ಮಾಡಿಬಿಟ್ಟಳಲ್ಲಾ ಇವಳು?''

''ಏನೂ ಇಲ್ಲ. ಕೆಟ್ಟ ಮಾತಾಡಬೇಡಿ'' ಅಂದವಳೇ ಪೊನ್ನಮ್ಮ ಚಲ್ಲಮ್ಮನನ್ನು ಅಡಿಗೆಯಮ್ಮನ ಜೊತೆಯಲ್ಲಿ ಮನೆಯೊಳಕ್ಕೆ ಕಳುಹಿದಳು. ಆಮೇಲೆ 'ಮೇಸ್ತ್ರಿ, ನೀವು ಒಂದು ಬೆಟ್ಟ ಇದ್ದ ಹಾಗೆ. ನಿಮಗೆ ಹೀಗಾದದ್ದು ಎಂಥಾ ದುರದೃಷ್ಟ ಅನ್ನೋದು ನನಗೂ ಅರ್ಥವಾಗ್ತದೆ. ಆದರೆ ಇರೋ ಒಬ್ಬ ಮಗಳನ್ನ ಕಳ್ಕೋಳೋಕ್ಕಾಗ್ತದಾ? ಒಬ್ಬನ ಹತ್ರ ನಗನಗ್ತಾ ನಾಲ್ಕು ಮಾತಾಡಿದ್ದನ್ನೇ ದೊಡ್ಡ ತಪ್ಪು ಅಂತ ಕೊರಗೋಕ್ಕೆ ಬದಲು ತಕ್ಷಣ ಒಂದು ಒಳ್ಳೇ ಗಂಡು ನೋಡಿ ಮದುವೆ ಮಾಡಿಬಿಡಿ. ಚಲ್ಲಮ್ಮನಿಗೆ ಪ್ರಾಯದ ತಕರಾರು. ಅವಳಿಗೆ ಸಂತೋಷ ಮುಖ್ಯ ವ್ಯಕ್ತಿ ಎಂಥವನಿರಬೇಕು ಅನ್ನೋ ಜ್ಞಾನ ಇಲ್ಲ.'' ಎಂದಳು.

''ಗೋವಿಂದಸ್ವಾಮಿ ಏನಂದುಕೊಂಡರೋ ಏನೋ. ಮುಂದೆ ಮಾತಾಡಲಿಲ್ಲ. ಹೊರಗೆ ಹೊರಟುಹೋದರು. ಚಲ್ಲಮ್ಮ ಓಡಿಬಂದು ಪೊನ್ನಮ್ಮನನ್ನು ತಬ್ಬಿಕೊಂಡು ಅತ್ತಳು. 'ಅಮ್ಮ ನಾನು ಹುಟ್ಟುವಾಗಲೇ ತಾಯೀನ ತಿಂದುಕೊಂಡೆ. ತಾಯಿ ಪ್ರೀತಿ ಹೇಗಿರ್ತದೇಂತ ನಿಮ್ಮಿಂದಲೇ ನಾನು ಅಲ್ಪಸ್ವಲ್ಪ ತಿಳ್ಕೊಂಡಿದ್ದು. ನಿಮ್ಮ ಮಗಳು ಪುಣ್ಯವಂತೆ. ನಾನು ಇಂಥಾ ಒಬ್ಬ ಮೂರ್ಖ ತಂದೆಗೆ ಮಗಳಾಗಿದೇನಲ್ಲಾ? ಇವರ ನೀತಿ ಬುದ್ಧಿವಂತಿಕೆ, ಸಿರಿವಂತಿಕೆಯೆಲ್ಲ ಯಾರಿಗೆ ಬೇಕು? ಪ್ರೀತಿ, ಆಸೆ ತುಂಬಿರೋ ಸ್ಥಳಾನೇ ನನಗೆ ಸ್ವರ್ಗ. ಅದು ಗುಡಿಸಲಾಗಿದ್ರೂ ಪರವಾಗಿಲ್ಲ. ಅಂಥಾ ಪ್ರೀತಿ ಮಾಡೋವರು ಓದುಬರಹ, ನಡೆನುಡಿ ಅರೀದೇ ಇದ್ದೋರಾದರೂ ಪರವಾಗಿಲ್ಲ' ಅಂತ ಗೋಳಾಡಿದಳು. ಪೊನ್ನಮ್ಮ ಚಲ್ಲಮ್ಮನ್ನ ಸಮಾಧಾನ ಮಾಡಿ ಮನೇಗೆ ಹೋದಳು. ನನ್ನ ಗುರುಗಳಿಗಿಂತ ದೊಡ್ಡ ಮನಸ್ಸಿರೋ ಆತ್ಮ ಒಂದು ಪೊನ್ನಮ್ಮನ ರೂಪಿನಲ್ಲಿ ಪ್ರಪಂಚದಲ್ಲಿದೇ ಅನ್ನೋದು ನನಗೆ ಅವತ್ತೇ ತಿಳಿದದ್ದು.

''ಈ ಪ್ರಸಂಗ ನಡೆದ ಒಂದು ತಿಂಗಳೊಳಗೇ ಮಾಂಬಲಂಪೆರಿಯಾ ಸ್ವಾಮಿ ಮೇಸ್ತ್ರಿಗಳ ಒಬ್ಬನೇ ಮಗನಿಗೆ ಚಲ್ಲಮ್ಮನನ್ನು ತಂದುಕೊಳ್ಳುವುದೆಂದು ನಿಶ್ಚಿತಾರ್ಥವಾಯಿತು.

''ಪೆರಿಯಾಸ್ವಾಮಿ ಇಂಗ್ಲೆಂಡಿನ ವಿಕ್ಟೋರಿಯಾ ವಾಸ್ತುಶಿಲ್ಪ ಪದ್ಧತಿ ಪ್ರಕಾರ ಕಟ್ಟಡಗಳನ್ನು ಕಟ್ಟೋದರಲ್ಲಿ ನಿಸ್ಸೀಮರು. ಆದ್ದರಿಂದ ಬಹುತೇಕ ಆಂಗ್ಲೇಯರ ಕಟ್ಟಡಗಳನ್ನೆಲ್ಲಾ ಅವರೇ ಕಟ್ಟುತ್ತಿದ್ದವರು. ಅದಕ್ಕೆ ತಕ್ಕ ಹಾಗೆ ಅವರಿಗೆ ವರಮಾನವೂ ಬಹಳ. ಆಸ್ತಿ, ಅನುಕೂಲಗಳೂ ಯಥೇಷ್ಟ. ಅವರ ನಡೆನುಡಿಗಳೂ ಆಂಗ್ಲೇಯರ ಪದ್ಧತಿಗಳನ್ನೇ ಅನುಸರಿಸಿತ್ತು. ನಮ್ಮ ಜಾತೀಲಿ ಮೊದಲು ಮೊದಲು ಕಾರು, ಫೋನು ಇಟ್ಟುಕೊಂಡು, ಸೂಟು ಬೂಟುಗಳನ್ನು ತೊಟ್ಟುಕೊಂಡು ಇಂಗ್ಲೀಷಿನವರಿಗೆ ಸರಿಸಮನಾಗಿ ನಡ್ಕೊತಿದ್ದವರೂ ಅಂದರೆ ಅವರೇ. ನಮ್ಮ ಸಮುದಾಯಕ್ಕೆ ಗೋವಿಂದ ಸ್ವಾಮಿ ಮೇಸ್ತ್ರಿಗಳು ದೊಡ್ಡ ಹೆಸರನ್ನು ತಂದುಕೊಟ್ಟವರಾದರೆ, ಪೆರಿಯಾಸ್ವಾಮಿ ಮೇಸ್ತ್ರಿ ಅದಕ್ಕೆ ಶ್ರೀಮಂತಿಕೆಯ ಮೆರುಗನ್ನು ತಂದುಕೊಟ್ಟವರು. ಈ ಎರಡು ಕುಟುಂಬಗಳಿಗೆ ಸಂಬಂಧ ಬೆಳೆಯೋದರಲ್ಲಿ ನಮ್ಮ ಕುಲಬಾಂಧವರಿಗೆಲ್ಲಾ ಆನಂದವೋ ಆನಂದ.

''ಮದುವೆಯ ದಿನ ಕಲ್ಯಾಣಮಂಟಪ ಜನಜಾತ್ರೆಯಲ್ಲಿ ಮುಳುಗಿತ್ತು. ಬಾಗಿಲಲ್ಲಿ ಮೂವತ್ತು ಜನರ ಬ್ಯಾಂಡ್ ಸೆಟ್ ಮೊಳಗುತ್ತಿತ್ತು. ಒಳಗೆ ಮದುವೆ ಮಂಟಪದ ಎದುರಿನಲ್ಲಿ ಒಂದು ವೇದಿಕೆ ಅದರಲ್ಲಿ ವಲಯಪ್ಪಟ್ಟಿ ಆರುಮುಗಂರವರ ನಾದಸ್ವರಗೋಷ್ಠಿ. ಮದರಾಸಿನ ಬಹುತೇಕ ಶ್ರೀಮಂತರೂ, ಮುಂದಾಳುಗಳೂ ಕಲ್ಯಾಣ ಮಂಟಪದಲ್ಲಿ ಕಿಕ್ಕಿರಿದಿದ್ದರು.

''ಪೆರಿಯಾಸ್ವಾಮಿ ಮೇಸ್ತ್ರಿಗಳು ಹೆಣ್ಣುಮಕ್ಕಳ ಕಾಲೇಜೊಂದನ್ನು ಕಟ್ಟಲು ಐದು ಎಕರೆ

ಭೂಮಿಯನ್ನೂ, ಐದು ಲಕ್ಷ ರೂಪಾಯಿಗಳನ್ನೂ ಸರ್ಕಾರಕ್ಕೆ ಕೊಡುಗೆಯಾಗಿ ಕೊಟ್ಟಿದ್ದರು. ಅದರ ಪ್ರತಿಕ್ರಿಯೆಯಾಗಿ ಗೌರ್ನರೂ ಅವರ ಶ್ರೀಮತಿಯವರೂ ಮದುವೆಗೆ ಆಗಮಿಸಿದ್ದರು.

"ಮದುಮಗ ಮಂಟಪದ ಹಸೆಮಣೆಗೆ ಬಂದಾಗಿತ್ತು. ಮೂಹೂರ್ತ ಹತ್ತಿರ ಬರುತ್ತಿತ್ತು. ವಧುವನ್ನು ಕರೆತರುವವರು ಒಳಗೆ ಹೋದರು. ಆದರೆ ವಧುವೇ ಪತ್ತೆಯಿರಲಿಲ್ಲ.

"ಕಲ್ಯಾಣ ಮಂಟಪವೇ ಅದುರಿಹೋಯಿತು. ಎಲ್ಲೆಲ್ಲಿ ಹುಡುಕಿದರೂ ಚಲ್ಲಮ್ಮ ಸಿಕ್ಕಲೇ ಇಲ್ಲ. ಎಲ್ಲಿ ಹೋದಳು? ಹೇಗೆ ಹೋದಳು?

"ಎಲ್ಲಿಂದಲೋ ಒಬ್ಬ ಹುಡುಗ ಓಡಿಬಂದು ಪೆರಿಯಸ್ವಾಮಿ ಮೇಸ್ತ್ರಿಯವರ ಕೈಯಲ್ಲಿ ಒಂದು ಕಾಗದವನ್ನು ಕೊಟ್ಟು ಹೋದನು. ಅದರಲ್ಲಿ 'ಅಪ್ಪಾ! ನನ್ನ ಇಷ್ಟಕ್ಕೆ ವಿರೋಧವಾಗಿ ಈ ಮದುವೆ ಏರ್ಪಾಡಾಗಿದೆ! ನಾನು ವಡಿವೇಲು ಎಂಬುವರನ್ನು ಮೆಚ್ಚಿದ್ದೇನೆ. ಅವರಲ್ಲಿಗೆ ಹೋಗಿದ್ದೇನೆ. ನನ್ನನ್ನ ಕ್ಷಮಿಸಿ' ಎಂದು ಚಲ್ಲಮ್ಮ ಬರೆದಿದ್ದಳು. ಪೆರಿಯಸ್ವಾಮಿ ಕಾಗದವನ್ನು ಗೋವಿಂದ ಸ್ವಾಮಿಯವರು ಕೈಯಲ್ಲಿ ಕೊಟ್ಟರು. ಅವನ್ನೋದಿದ ಗುರುಗಳ ತಲೆಸುತ್ತಿತು. ತೂರಾಡುತ್ತ ಬಿದ್ದು ಬಿಡುವುದರಲ್ಲಿದ್ದರು. ಪಕ್ಕದಲ್ಲೇ ಇದ್ದ ನಾನು ಅವರನ್ನು ಹಿಡಿದುಕೊಂಡೆ.

" 'ನೀವೇನು ಮಾಡೋಕ್ಕಾಗುತ್ತೆ! ತಾಲೀ ಕಟ್ಟೋಕ್ಕೆ ಮುಂಚೇನೇ ಹೀಗಾದದ್ದು ನಮ್ಮ ಪೂರ್ವ ಪುಣ್ಯ,'' ಎಂದು ಹೇಳಿ ಪೆರಿಯ ಸ್ವಾಮಿ ಮೇಸ್ತ್ರಿ ತಿಳಿಸಿದರು. ಗೌರ್ನರ್ ದಂಪತಿಗಳು ಹೊರಟುಹೋದರು.

"ಬ್ಯಾಂಡು, ನಾದಸ್ವರಗಳೆಲ್ಲ ನಿಂತುಹೋದವು. ಗುಂಪುಕೂಡ ಅರ್ಧಗಂಟೆಯಲ್ಲಿ ಕರಗಿ ಮಾಯವಾಯಿತು.

"ಅಷ್ಟೊಂದು ಭಾರಿ ಕಲ್ಯಾಣ ಮಂಟಪದಲ್ಲಿ, ಗುರುಗಳು, ನಾನು, ಜೊತೆಗೆ ಇನ್ನು



ಎಂ.ದಸ್ತಗೀರ್

ಇಪ್ಪತ್ತು ರೂಪಾಯಿ ಸಾಲಾ ಕೇಳಿದ್ರೆ ಇಲ್ಲಾ..... ಅಂತಾನೆ ..... ಭಡವಾ !..... 'ವೀರಪ್ಪನ್‌ನ ಸಹಾಯಕ' ಅಂತ ಒದ್ದು ಒಳಗೆ ಹಾಕೋಣ್ವಾ ರಂಗಣ್ಣಾ ? !.....

ನಾಲ್ಕೈದು ಜನರು ಮಾತ್ರ ಉಳಿದುಕೊಂಡಿದ್ದರು.

"ಗುರುಗಳ ಕಣ್ಣಿನಲ್ಲಿ ನೀರು ಬತ್ತಲೇ ಇಲ್ಲ. ಮಗಳನ್ನು ಕಳೆದುಕೊಂಡ ದುಃಖ ಒಂದು ಕಡೆ! ಆ ಭಾರೀ ಜನ ಸಮೂಹದೆದುರು ಇಂಥಾ ಅಪಮಾನವಾದದ್ದು ಇನ್ನೊಂದು ಕಡೆ! 'ದೇವರೇ ನನಗ್ಯಾಕೆ ಇಷ್ಟೊಂದು ಭಾರೀ ಶಿಕ್ಷೆ? ಎಂದು ನಿಟ್ಟುಸಿರು ಬಿಟ್ಟಾಗ ಈ ಅಯೋಗ್ಯ ಎದುರಿಗಿದ್ದಿದ್ದರೆ ನಾನೇ ಅವನನ್ನು ತುಂಡುತುಂಡಾಗಿ ಕತ್ತರಿಸಿಬಿಡುತ್ತಿದ್ದೆ. ಅದನ್ನು ಗುರುಗಳಿಗೆ ಕೇಳುವಂತೆ ಬಡಬಡಸಿದೆ. ಅಂತಹ ಸಂಕಟದಲ್ಲೂ ಗುರುಗಳು 'ನಡೆದು ಹೋದದ್ದಕ್ಕೆ ಅದು ಖಂಡಿತ ಪರಿಹಾರವಾಗೋಲ್ಲ. ನಮ್ಮ ಯೋಗ್ಯತೆಗೆ ಆ ದಾರಿಯೂ ಸರಿಯಲ್ಲ' ಎಂದು ತಡೆದರು.

'ಸದ್ಯ, ಅದಾದ ಆರು ತಿಂಗಳಲ್ಲಿ ಒಂದು ಭಾರಿ ದೇವಸ್ಥಾನದವರು ಸಭಾಂಗಣವೊಂದನ್ನು ಕಟ್ಟಿಕೊಡಲು ಗುರುಗಳನ್ನು ಕೇಳಿದರು. ಅವರ

ಮನಸ್ಸು ಹದವಾಯಿತು. ಕೆಲಸವನ್ನು ಒಪ್ಪಿಕೊಂಡರು. ಹೊರನೋಟಕ್ಕೆ ಅವರು ಗಂಭೀರವಾಗೂ, ಚಿಂತೆ ಇಲ್ಲದವರ ಹಾಗೂ ತೋರುತ್ತಿದ್ದರು. ಒಳಗೆ ಮಗಳನ್ನು ಕಳೆದುಕೊಂಡ ಉರಿ ಅವರನ್ನು ಸ್ವಲ್ಪ ಸ್ವಲ್ಪವಾಗಿ ಸುಡುತ್ತ ಹೊರಟಿತ್ತು.

''ಚಲ್ಲಮ್ಮಾ ಮದರಾಸಿನಲ್ಲೇ ಅತೀ ಕೊಳಚೆ ಪ್ರದೇಶದ ಚಿಕ್ಕದೊಂದು ಗುಡಿಸಿಲಿನಲ್ಲಿ ವಡಿವೇಲೂ ಜೊತೆಯಲ್ಲಿ ಸಂಸಾರಕ್ಕೆ ತೊಡಗಿದ್ದಳು. ಅಕ್ಕಪಕ್ಕದ ಗುಡಿಸಿಲಿನಲ್ಲಿ ಇದ್ದವರು ಕೆಲವರು ನನಗೆ ಪರಿಚಯ. ಅವರ ಮೂಲಕ ಅವಳ ಸ್ಥಿತೀನ ಆಗಾಗ್ಗೆ ವಿಚಾರಿಸಿಕೊಳ್ಳುತ್ತಿದ್ದೆ.''

''ಮೊದಲ ಕೆಲವು ತಿಂಗಳುಗಳು ಅವರು ಸಂತೋಷವಾಗಿ ಕಾಲ ಕಳೆದಿದ್ದರು. ಆಗಲೂ ಅವರ ಸುತ್ತಮುತ್ತಲ ಸಹವಾಸ ಅಸಹ್ಯವೇ. ವಾಸವಾಗಿದ್ದ ನೆರೆಹೊರೆ ಸರಿಯಿಲ್ಲಾ ಅನ್ನೋದರ ಜೊತೆಗೆ ಅವನು ಸದಾ ಬೀಡಿ ಕುಡಿಯುತ್ತಿದ್ದುದೂ, ಸಂಜೆಯ ಮೇಲೆ ಸಾರಾಯಿ ಕುಡಿದು ತೂರಾಡುತ್ತ ಮನೆಗೆ ಬರುತ್ತಿದ್ದುದೂ, ಅಶ್ಲೀಲವಾದ ಮಾತುಗಳನ್ನಾಡುತ್ತಿದ್ದುದೂ ಚಲ್ಲಮ್ಮನಿಗೆ ಬಹಳ ಹಿಂಸೆ ಕೊಡುವ ವಿಷಯಗಳಾಗಿದ್ದವು. ಹೇಗೋ ಅವುಗಳನ್ನು ನುಂಗಿಕೊಂಡು ಕಾಲ ಕಳೆಯುತ್ತಿದ್ದಳು.''

''ಇಷ್ಟೆಲ್ಲಾ ಆದ ಮೇಲೇ ಅವನ ನಿಜವಾದ ಬಂಡವಾಳ ಹೊರಕ್ಕೆ ಬಿದ್ದದ್ದು. ವರ್ಷ ಮುಗಿಯುವುದರೊಳಗೆ ಅವನಿಗೆ ಹೆಂಡತಿಯರೆಂದು ಹೇಳಿಕೊಂಡು ಇಬ್ಬರು ಹೆಂಗಸರು ಕೈಯಲ್ಲಿ, ಕಂಕುಳಲ್ಲಿ ಮಕ್ಕಳನ್ನು ಹಿಡಿದುಕೊಂಡು ಗುಡಿಸಿಲಿನೊಳಗೇ ನುಗ್ಗಿ ತಳವೂರಿದರು. ವಡಿವೇಲುವಿನಲ್ಲಿ ಅವರು ತೋರುತ್ತಿದ್ದ ಸಲಿಗೆ, ಒಡನಾಟ, ಜಗಳಗಳು ಚಲ್ಲಮ್ಮನಿಗೆ ನರಕ ದರ್ಶನವಾಗಿತ್ತು.''

''ವಡಿವೇಲು ಕೆಲಸ ಮಾಡುತ್ತಿದ್ದ ಪ್ರತಿಯೊಂದು ಊರಿನಲ್ಲೂ ಒಬ್ಬೊಬ್ಬಳನ್ನು ಕಟ್ಟಿಕೊಂಡಿರುತ್ತಿದ್ದು, ಸ್ವಲ್ಪ ಕಾಲವಾದ ಮೇಲೆ, ತಲೆ ಮರೆಸಿಕೊಂಡು ಬೇರೇ ಊರಿಗೆ ಹೊರಟು ಬರುತ್ತಿದ್ದನೆಂಬುದು ತಿಳಿಯಿತು. ಸದ್ಯಕ್ಕೆ ಇವನು ಇಲ್ಲಿರುವುದು ತಿಳಿದದ್ದು ಇವರಿಬ್ಬರು ಹಳೇ ಹೆಂಡತಿಯರಿಗೆ ಮಾತ್ರ.''

''ಇಬ್ಬರಿಗೇ ಇಕ್ಕಟ್ಟಾಗಿದ್ದ ಆ ಗುಡಿಸಿಲಿನಲ್ಲಿ ನಾಲ್ಕು ಜನ ದೊಡ್ಡವರು ನಾಲ್ಕು ಜನ ಮಕ್ಕಳಿರಬೇಕಾಗಿ ಬಂದರೆ ಹೇಗಿರಬಹುದು? ಆ ಕುಡುಕ, ಆ ಇಬ್ಬರ ಕಣ್ಣೆದುರಿಗೇ ಚಲ್ಲಮ್ಮನ ಜೊತೆಗೆ ಸರಸಕ್ಕಿಳಿಯುತ್ತಿದ್ದ. ಎಲ್ಲಕ್ಕಿಂತ ಇದೇ ಸಹಿಸೋಕ್ಕೆ ಆಗದೇ ಇದ್ದ ಅವಮಾನ ಅವಳಿಗೆ. ಅವನ ಚೆಲ್ಲಾಟಕ್ಕೆ ಆಕ್ಷೇಪಿಸಿದಳು. ಅಂಥಾ ಸಮಯದಲ್ಲಿ ವಡಿವೇಲು ಚಲ್ಲಮ್ಮನನ್ನು ಸಿಕ್ಕಾಬಟ್ಟೆ ಬಡಿಯುತ್ತಿದ್ದ. ಬಾಯಿಗೆ ಬಂದ ಹಾಗೆ ಬಯ್ಯುತ್ತಿದ್ದ. ಕೆಳಗೆ ಬಿದ್ದವಳ ಹೊಟ್ಟೇ ಮೇಲೆ ಒದೆಯುತ್ತಿದ್ದ. ಅವನು ಹಾಗೆ ಮಾಡುತ್ತಿದ್ದಾಗ ಆ ಇಬ್ಬರೂ ಅವನ ಕಡೆಗೇ ಸೇರಿಕೊಂಡು ಇನ್ನಷ್ಟು ಹೊಡೆಯೋ ಹಾಗೆ ಕೋಪ ಬರಿಸ್ತಿದ್ದರು.''

''ಕೊನೇಗೆ ಒಂದು ದಿವಸ ಪೋಲೀಸಿನವರು ಬಂದು ಅವನ್ನ ಹಿಡ್ಕೊಂಡು ಹೋದರು. ತಿರುನೆಲ್ವೇಲಿಯಲ್ಲಿ ಕನಕಾ ಎನ್ನುವ ಹೆಣ್ಣುಮಗಳನ್ನು ಮದುವೆಯಾಗಿ ಓಡಿಬಂದಿದ್ದ ವಡಿವೇಲುವಿನ ಮೇಲೆ ಆಕೆಯ ತಂದೆ ಎಂದೋ ಕೊಟ್ಟಿದ್ದ ಪೋಲೀಸ್ ಕಂಪ್ಲೇಂಟು ಈಗ ಸಾರ್ಥಕವಾಗಿತ್ತು. ಚಲ್ಲಮ್ಮನಿಗೆ ಸಿಕ್ಕಿದ ನೆಮ್ಮದಿಗೆ ಇತಿಮಿತಿಯಿಲ್ಲ. ಅಂತಹವರಿಗೆ ಸುಖ ಅನ್ನೋದು ಇನ್ನು ಎಂದೆಂದಿಗೂ ಬೇಡ. ದುಃಖ ಇಲ್ಲದೇ ಇರೋದೇ ಪರಮಾನಂದ! ಭಾರಿ ನೆಮ್ಮದಿ!''

''ವಡಿವೇಲು ಲಾಕಪ್ಪಿಗೆ ಹೋದ ಮಾರನೇ ದಿನವೇ ಹಳೇ ಹೆಂಡತಿಯರ ಪತ್ತೆಯೇ ಇಲ್ಲ. ಚಲ್ಲಮ್ಮ ಒಬ್ಬಂಟಿಗಳಾಗಿ ಅಲ್ಲಿ ಎಷ್ಟು ದಿನಾ ತಾನೇ ಇರೋಕ್ಕೆ ಸಾಧ್ಯ?''

''ಒಂದು ದಿನ ಚಲ್ಲಮ್ಮ ಧೈರ್ಯ ತಂದುಕೊಂಡು ನಮ್ಮ ಗುರುಗಳ ಮನೆಗೆ ಬಂದು ಬಾಗಿಲಲ್ಲಿ ನಿಂತಳು. ಪೊನ್ನಮ್ಮ ತನ್ನ ಮಗಳನ್ನು ಸೇರಿಸಿಕೊಂಡ ಹಾಗೆ ತನ್ನ ತಂದೆಯೂ

ತನ್ನನ್ನು ಒಳಗೆ ಕರೆಯುತ್ತಾರೆ; ಇಷ್ಟು ದಿನಗಳ ಮೇಲೆ ಅವರ ಮನಸ್ಸು ಕರಗಿ ಸಮಾಧಾನವಾಗಿರುತ್ತೇಂತ ತಿಳಿದಿದ್ದಳು. ಆದರೆ ನನ್ನ ಗುರುಗಳ ಮನಸ್ಸು ಎಂಥದ್ದು? ಅದು ಕಲ್ಲುಮಣ್ಣು, ಕಬ್ಬಿಣಗಳ ಜೊತೇಲಿ ಹೊಡೆದಾಡಿದ ಜೀವಾ ಅಲ್ಲವೇ?''

''ಗುರುಗಳ ಒಳಗಿಂದ ಬಂದವರೇ ಮಗಳನ್ನು ಕಂಡು ಬೆಂಕಿಯಾದರು. 'ಮೈಕಾವಿನಿಂದ ಹುಚ್ಚು ಹುಚ್ಚಾಗಿ ಆಡಿದ ಮೂದೇವಿ! ಬೀದೀ ನಾಯಿಗೂ ನಿನಗೂ ಏನು ವ್ಯತ್ಯಾಸ? ಇಲ್ಲಿ ಯಾಕೆ ಬಂದೆ?'' ಎಂದು ಅರಚಿದರು.

''ಅಪ್ಪಾ!''

''ಥೂ! ಮಾತಾಡಬೇಡ. ಮಾತಾಡೋ ಯೋಗ್ಯತೆಯೇ ನಿನಗಿಲ್ಲ,'' ಅಂತ ಗುಡುಗಿದರು.

''ಆಗ ಮಾತಾಡೋದನ್ನ ನಿಲ್ಲಿಸಿದ ಚೆಲ್ಲಮ್ಮ ಇದುವರೆಗೂ ಮಾತೇ ಆಡಿಲ್ಲ,'' ಎಂದು ರಾಮಸ್ವಾಮಿ ಮೇಸ್ತ್ರಿ ಕಥೆಯನ್ನು ಮುಗಿಸಿದರು.

ದಾಮೋದರ ಪಿಳ್ಳೆಯವರಿಗೆ ಚಿತ್ರ ಸ್ಪಷ್ಟವಾಯಿತು. 'ಆದರೂ ಜನ್ಮಕೊಟ್ಟ ಅಪ್ಪ ಏನೋ ಕೋಪದಲ್ಲಿ ಕಿರುಚಿದ್ದಕ್ಕೆ ಒಬ್ಬ ಮಗಳು ಹಾಗೇ ನಡ್ಕೊಂಡು ಬಿಡಬೇಕೇ?' ಎಂದು ಕೇಳಿದಳು.

''ಅದೇನೋ ಸರಿ. ಅವಳು ಮಾತಾಡಿದರೆ ಯಾರು ಏನು ಮಾಡಬಲ್ಲರು. ಆದರೆ ಯಾಕೆ ಮಾತಾಡಬೇಕು? ಅವಳು ಮಾತಾಡಿದ ಮಾತ್ರಕ್ಕೆ ಬಹಳ ಪ್ರೀತಿಯಿಂದ ಬೆಳೆಸಿ, ದೇಶಕ್ಕೆ ಕೀರ್ತಿ ತರೋ ಅಂಥಾ ಒಬ್ಬ ಮಗನ್ನ ಗುರುಗಳ ಯೋಗ್ಯತೆಗೆ ತಕ್ಕ ಮಗನ್ನ ಕೊಡ್ತೋದಕ್ಕೆ ಅವಳಿಗೆ ಸಾಧ್ಯವೇ? ಗೌರ್ನರ್ ಹಾಗೂ ಊರಿನ ದೊಡ್ಡ ಮನುಷ್ಯರೆಲ್ಲ ಸೇರಿದ್ದ ಆ ಭಾರಿ ಸಮೂಹದಲ್ಲಿ ಅವರಿಗೆ ಅವಳು ಮಾಡಿದ ಅವಮಾನಾನ ಅಳಿಸೋಕ್ಕೆ ಸಾಧ್ಯವೇ? ಅಥವಾ ಅವಳೇ ಅನುಭವಿಸಿದ ಆ ನರಕಯಾತನೇನ ಮರೆಯೋಕ್ಕೆ ಸಾಧ್ಯವೇ? ತಾವಾಡೋ ಮಾತಿನಲ್ಲಿರೋ ಸತ್ಯಕ್ಕೆ ಮರ್ಯಾದೇ ಕೊಡಲೇಬೇಕೂ ಅನ್ನೋ ಪರಿಸ್ಥಿತಿ ಬಂದರೆ ಮುಕ್ಕಾಲು ಪಾಲು ಜನ ಮಾತೇ ಆಡೋಹಾಗಿಲ್ಲ.''

''ಸರಿ, ಆಮೇಲೆ?....'

''ನಮ್ಮ ಗುರುಗಳು ಚೆಲ್ಲಮ್ಮನ್ನ ಹೊರಗೆ ಹಾಕಿದ ಮೇಲೆ ಧೈರ್ಯವಾಗಿ ಅವಳಿಗೊಂದು ಆಶ್ರಯಕೊಟ್ಟವಳು. ಪೊನ್ನಮ್ಮನೇ. ಈ ಮಧ್ಯೆ ಪೊನ್ನಮ್ಮ ತನ್ನ ಮಗಳಿಗೆ ವಯಸ್ಸಾದ ಆದರೆ ಪರೋಪಕಾರಿಯಾದ ಒಬ್ಬ ವ್ಯಕ್ತಿಗೆ ಎರಡನೇ ಹೆಂಡತಿಯಾಗಿ ಮದುವೆಮಾಡಿಕೊಟ್ಟಿದ್ದಳು. ಅವರು ದೆಹಲಿಯಲ್ಲಿ ಗೌರವವಾಗಿ ಸಂಸಾರ ಮಾಡಿಕೊಂಡಿದ್ದರು. ಆದ್ದರಿಂದ ಚೆಲ್ಲಮ್ಮ ಪೊನ್ನಮ್ಮ ಇಬ್ಬರೂ ಒಬ್ಬರಿಗೊಬ್ಬರು ಆಧಾರವಾಗಿ, ಜೀವನ ಮಾಡುತ್ತಿದ್ದರು. ಚೆಲ್ಲಮ್ಮನೂ ಪೊನ್ನಮ್ಮನಿಗೆ ಭಾರವಾಗಿರಬಾರದೂಂತ ಮೊದಲು ಮೊದಲು ಇನ್ನೊಬ್ಬ ಮೇಸ್ತ್ರಿಹತ್ತಿರ ಕೂಲಿಯಾಳಾಗಿ ಕೆಲಸ ಮಾಡುತ್ತಿದ್ದಳು.''

''ಇದಾದ ಮೇಲೆ ನಮ್ಮ ಗುರುಗಳು ಆರು ವರ್ಷ ಬದುಕಿದ್ದರು. ಆ ಆರು ವರ್ಷವೂ ತಮ್ಮ ಎದುರು ಮನೆಯಲ್ಲೆ ಚೆಲ್ಲಮ್ಮಾ ಮಾತಾಡದೇ ಬಾಳುತ್ತಿದ್ದುದನ್ನು ಕಾಣುತ್ತಲೇ ಇದ್ದರೂ ಅವಳನ್ನು ಮಾತನಾಡುವ ಹಾಗೆ ಮಾಡಲು ಪ್ರಯತ್ನಪಡಲೇ ಇಲ್ಲ. ಮುಚ್ಚಿ ಚಿಲಕ ಹಾಕಿಕೊಂಡವರು ತೆಗೆದರೆ ತಾನೇ ಆ ಬಾಗಿಲು ತೆರೆದುಕೊಳ್ಳುವುದು? ನಾನೂ ಒಂದೆರಡು ಸಾರಿ ಮಾತೆತ್ತಿದೆ. 'ಅಹಲ್ಯೆ ಕಲ್ಲಾಗಿ ಬಿದ್ದಿರಲಿಲ್ಲವೇ? ಹಾಗೇ ಅವಳೂ ಮಾತಾಡದೇ ಬಿದ್ದಿರಲಿ ಹೇಳು. ಅವಳು ಮಾತಾಡಿ ಯಾರಿಗೆ ಏನಾಗಬೇಕು?'' ಎಂದರು.

''ಚೆಲ್ಲಮ್ಮ ಅಪ್ಪ ಹೇಳಿದ್ದಕ್ಕೆ ಕಟ್ಟುಬಿದ್ದು ಮಾತಾಡೋದನ್ನೇ ಬಿಟ್ಟು ಬಿಟ್ಳು. ಅನ್ನೋಕ್ಕಿಂತ ತಾನು ಮಾಡಿದ ತಪ್ಪಿಗೆ ತಾನೇ ಅದನ್ನ ಶಿಕ್ಷೆಯಾಗಿ ತೆಗೆದುಕೊಂಡಳೂ ಅನ್ನೋದೇ ನಿಜವಾದ ಸಂಗತಿ. ಅದರ ಜೊತೆಗೆ ನಮ್ಮ ಗುರುಗಳು ಮಾಡಿದ್ದೂ ಸರಿಯಲ್ಲ ಅನ್ನೋದನ್ನ ಅವರಿಗೆ ತೋರಿಸಬೇಕೂ ಅನ್ನೋ ಉದ್ದೇಶವೂ ಅವಳಿಗಿದ್ದಿರಬಹುದು. ನಮ್ಮ ಗುರುಗಳು ತೀರಿ

ಕೊಂಡಾಗ ಕೂಡ ಅವಳ ಕಣ್ಣಲ್ಲಿ ಒಂದು ತೊಟ್ಟು ನೀರನ್ನು ಕಾಣಲಿಲ್ಲ. ಅವರ ಆಸ್ತಿ ಪಾಸ್ತಿಗೂ ಅವಳು ಆಸೆ ಪಡಲಿಲ್ಲ.

''ಇನ್ನೊಂದು ಆಶ್ಚರ್ಯ, ಅಪ್ಪ ಸತ್ತಾಗ ಅಳದೇ ಇದ್ದ ಚಲ್ಲಮ್ಮಾ ಪೊನ್ನಮ್ಮ ಸತ್ತಾಗ ಅವಳ ಮೈಮೇಲೆ ಬಿದ್ದು ಅವಳಲ್ಲಿ ತುಂಬಿದ್ದ ಕಣ್ಣೀರನ್ನೆಲ್ಲಾ ಸುರಿಸಿ, ಬಿಕ್ಕಿ ಬಿಕ್ಕಿ ಅತ್ತಳು.'' ಎಂದರು ಮೇಸ್ಟ್ರು.

''ಮಾಡಬಾರದ್ದನ್ನ ಮಾಡಿದವರಿಗೂ ಜೈಲಿನಿಂದ ಬಿಡುಗಡೆ ಉಂಟೇ ಉಂಟಲ್ಲಾ. ಹಾಗೇ ಇವಳು ತನಗೆ ತಾನೇ ಮಾಡಿಕೊಂಡ ಶಿಕ್ಷೆ ಮುಗಿದ ಮೇಲಾದರೂ ಮಾತಾಡಬಹುದಲ್ಲಾ!'' ಪಿಳ್ಳೆಯವರ ಪ್ರಶ್ನೆ.

''ಅಲ್ಲೇ ಇರೋದು ಸ್ವಾರಸ್ಯ. ಮಾತನ್ನ ಕಡಿಮೆ ಮಾಡಿಕೊಳ್ಳುವುದು ಮೊದಲು ಮೊದಲು ಕಷ್ಟ. ಆಲೋಚನೆಗಳೆಲ್ಲಾ ಗುಂಪು ಕೂಡಿ ಯಾವಾಗ ಎಷ್ಟು ಹೊತ್ತಿಗೆ ಮಾತಿನ ರೂಪಾ ಹೊತ್ತು ಹೊರಗೆ ಹೋಗ್ತೀವೋ ಅಂತ ತುದಿ ನಾಲಿಗೇಲಿ ನಿಂತು ಹೋರಾಡುತ್ತವೆ. ಅದನ್ನ ಅಡಗಿಸುತ್ತಾ ಅಡಗಿಸುತ್ತಾ ಆಲೋಚನೆಗಳ ಪ್ರವಾಹ ಮೆಲ್ಲಮೆಲ್ಲಗೆ ಕಡಿಮೆಯಾಗ್ತಾ ಬಂದು ಒಂದು ಘಟ್ಟದಲ್ಲಿ ಆಲೋಚನೆಯೇ ಹುಟ್ಟದೇ ಇದ್ದ ಪರಿಸ್ಥಿತಿ ಬಂದು ಬಿಡುತ್ತೆ. ಇದೇ ಮಾತೇ ಬೇಡವಾಗುವ ಸ್ಥಿತಿ. ಆ ಸ್ಥಿತಿ ಬಂದ ಮೇಲೆ ಮಾತಾಡುವುದೆಂದರೇ ಒಂದು ಹಿಂಸೆ ಎನ್ನಿಸಬಹುದು. ಆ ಹಿಂಸೆಯನ್ನು ಯಾಕೆ ಅನುಭವಿಸಬೇಕು? ಅದ್ದರಿಂದಲೇ ಚಲ್ಲಮ್ಮ ಸ್ವಲ್ಪವೂ ಕಷ್ಟವಿಲ್ಲದೇ ಮೌನವಾಗೇ ಇದ್ದುಬಿಟ್ಟಿದ್ದಾಳೆ. ಈಗ ಹೇಳಿ, ಇಷ್ಟು ಹೇಳಿದ ಮೇಲಾದರೂ ಆ ಅಯೋಗ್ಯನ್ನ ಕೆಲಸ ಬಿಡಿಸಿ ಚೆಗೆ ಕಳಿಸ್ತೀರೊ ಇಲ್ಲವೋ?''

''ಉಂಟೇ? ನಿಮ್ಮ ಗುರುಗಳ ಆತ್ಮಕ್ಕೇ ಆಗಲಿ, ಚಲ್ಲಮ್ಮನ ಮನಸ್ಸಿಗೇ ಆಗಲಿ, ನೋವು ಕೊಡೋ ಅಂಥ ಪಾಪಕಾರ್ಯ ನನ್ನಿಂದ ಸಾಧ್ಯವಿಲ್ಲ!' ಎಂದರು ದಾಮೋದರ ಪಿಳ್ಳೆ! ●

# ಬೈಗುಳ ಮಕ್ಕಳಿಗೆ ಮಾರಕ

ಮಕ್ಕಳನ್ನು ಪದೇ ಪದೇ ಬಯ್ಯುತ್ತಿದ್ದರೆ ಅಂಥ ಮಕ್ಕಳ ಮಾನಸಿಕ ಬೆಳವಣಿಗೆ ವಿಕೃತವಾಗುವುದಲ್ಲದೆ ದೇಹದ ಬೆಳವಣಿಗೆಯು ಕುಬ್ಜವಾಗುತ್ತದೆ. ತಿರಸ್ಕಾರ, ತಾತ್ಸಾರ, ದೇಹದ ಮೇಲೆ ಗಾಯದ ಗುರುತನ್ನುಂಟು ಮಾಡದಿದ್ದರೂ ದೇಹದ ಬೆಳವಣಿಗೆಯನ್ನು ಕುಂಠಿತಗೊಳಿಸುವುದರ ಮೂಲಕ ದೇಹಕ್ಕೆ ಶಾಶ್ವತವಾದ ಗುರುತು ನೀಡುವುದೆಂದು ತಜ್ಞರು ಅಭಿಪ್ರಾಯಪಡುತ್ತಾರೆ.

'ಮಾನಸಿಕ ಕುಬ್ಜತನ' ಎಂದು ಕರೆಯಲಾಗುವ ಈ ರೋಗಕ್ಕೆ ಕಾರಣವಿಷ್ಟೇ. ಮೆದುಳಿನಲ್ಲಿರುವ ಯೋಚನೆ ಭಾವನೆಗಳ ಕೇಂದ್ರವು ಅಲ್ಲೇ ಪಕ್ಕದಲ್ಲಿರುವ ಹೈಪೋಥಲಾಮಸ್‌ನ ನರತಂತುಗಳಿಗೆ ಬೆಸೆದುಕೊಂಡಿದೆ. ಹೈಪೋಥಲಾಮಸ್ ಪಿಟ್ಯುಟರಿ ಗ್ರಂಥಿಗೆ ಬೆಳವಣಿಗೆಯ ಹಾರ್ಮೋನನ್ನು ಸ್ಫುರಿಸಲು ಉತ್ತೇಜಿಸುತ್ತದೆ. ಹೀಗೆ ಒಂದು ಕೇಂದ್ರದ ಮೇಲಿನ ಒತ್ತಡವು ಇನ್ನೊಂದು ಕೇಂದ್ರದ ಕೆಲಸವನ್ನು ಕುಂಠಿತಗೊಳಿಸುವುದು. ಮಾನಸಿಕ ನೋವು ಹೆಚ್ಚಾದಾಗ ಪಿಟ್ಯುಟರಿ ಗ್ರಂಥಿ ತನ್ನ ಕೆಲಸವನ್ನು ಕಡಿಮೆ ಮಾಡುವುದು. ಪರಿಣಾಮ ಬೆಳವಣಿಗೆ ಕುಂಠಿತವಾಗುವುದು.

(ಸಂಗ್ರಹ)

● ರಾಮನ್

# ಆ ಮಹಾಪಾಪಿ ಕಡೆಗೂ ಸಿಕ್ಕಿಬಿದ್ದ

*ಹಿಟ್ಲರ್ ಸತ್ತ ನಂತರವೂ 'ನಾಝಿ' ಪಾಪ ಸಂತತಿ ಮುಂದುವರೆದಿತ್ತು. ಅಂಥ ವರ ಪೈಕಿ ಒಬ್ಬ ಅರುವತ್ತು ಲಕ್ಷ ಜನರ ಕೊಲೆಗೆ ಕಾರಣವಾಗಿದ್ದ. ಕಡೆಗೂ ಆತ ಸಿಕ್ಕಿಬಿದ್ದಿದ್ದ.*

• ಆರ್.ವಿ. ಕಟ್ಟಿಮನಿ ತಡಕಲ್

ಬುದ್ಧ, ಕ್ರಿಸ್ತ, ಗಾಂಧಿ, ಮದರ್ ಥೆರೆಸಾ ಹುಟ್ಟಿದ ಈ ಪ್ರಪಂಚದಲ್ಲಿಯೇ ಅತ್ತಿಲ, ಚಂಗೀಜ್ ಖಾನ್, ಇದಿ ಅಮೀನ್, ಹಿಟ್ಲರ್ ಹುಟ್ಟಿದ್ದು ಈ ಸೃಷ್ಟಿಯ ವಿಪ ರ್ಯಾಸ.

ಮೊದಲಿನವರು ಶಾಂತಿದೂತರೂ, ಕರ ಣಾಳುಗಳೂ ಆಗಿದ್ದರೆ ನಂತರದವರು ಕ್ರೂರರೂ, ಕಟುಕರು, ಕೊನೆಯವನಾದ ಹಿಟ್ಲರ್ ಎರಡನೇ ಮಹಾಯುದ್ಧದ ಕಾಲದ ವನು.

ಈ ಹಿಟ್ಲರ್‌ನ ಕೈಕೆಳಗಿನ ಅಧಿಕಾರಿಗಳಲ್ಲಿ ಅತಿ ಕ್ರೂರನಾದವನು ಅಡಾಲ್ಫ್ ಐಚ್‌ಮನ್.

ಎರಡನೇ ಮಹಾಯುದ್ಧದ ಕಾಲದಲ್ಲಿ ನಾಝಿಗಳಿಂದ ನಡೆದ ನರಮೇಧ ಅದ ರಲ್ಲೂ ವಿಶೇಷವಾಗಿ ಯಹೂದಿಗಳ ಸಾಮೂಹಿಕ ನರಮೇಧ ಮಾನವನ ಇತಿಹಾ ಸದಲ್ಲಿಯೇ ಕರಾಳ ಅಧ್ಯಾಯ.

ಎರಡನೇ ಮಹಾಯುದ್ಧ ಆಗಷ್ಟೇ ಮುಗಿದಿತ್ತು, ಆದರೆ ಯುದ್ಧದ ಕರಾಳ ಛಾಯೆ ಇನ್ನೂ ಜನರಿಂದ ತೊಲಗಿರಲಿಲ್ಲ. ನಾಝಿಗಳಿಂದ ಹಿಂಸೆಗೊಳಗಾದ ಜನ ಕುದಿ ಯುತ್ತಿದ್ದರು. ಅದರಲ್ಲೂ ವಿಶೇಷವಾಗಿ ಯಹೂದಿಗಳು. ಯುದ್ಧ ಮುಗಿದ ತಕ್ಷ ಣವೇ ಹಿಟ್ಲರ್ ಮತ್ತವನ ಸಂಗಾತಿಗಳಿಗಾಗಿ ಬೇಟೆ ಪ್ರಾರಂಭವಾಯ್ತು. ಹಿಟ್ಲರ್ ಮತ್ತು ಅವರ ಬಲಗೈ ಭಂಟ, ಪ್ರಚಾರಾಧಿಕಾರಿ ಗೋಯ್‌ಬೆಲ್ಸ್ ಬಂಕರ್ ಒಂದರಲ್ಲಿ ಆತ್ಮ ಹತ್ಯೆ ಮಾಡಿಕೊಂಡು ಶವವಾಗಿ ಬಿದ್ದಿದ್ದರು. ಕೆಲವು ಜನ ಜನರಲ್‌ಗಳು ಸಿಕ್ಕಿಬಿದ್ದು ಅವ ರನ್ನು ಗಲ್ಲಿಗೇರಿಸಲಾಯ್ತು. ಕೆಲವರನ್ನು ಸೆರೆ ಮನೆಗೆ ತಳ್ಳಲಾಯ್ತು. ಆದರೆ ಒಬ್ಬ ಮಾತ್ರ ತಪ್ಪಿಸಿಕೊಂಡ. ಅವನೇ ಯುದ್ಧದ ಸಮಯ ದಲ್ಲಿ ೬೦ ಲಕ್ಷಕ್ಕೂ ಹೆಚ್ಚು ಜನ ಯಹೂದಿ ಗಳನ್ನು ಅತಿ ದಾರುಣವಾಗಿ-ಗ್ಯಾಸ್ ಛೇಂಬರ್‌ಗೆ ತಳ್ಳಿ ಕೊಂದುಹಾಕಿದ ನರ

ರೂಪ ರಾಕ್ಷಸ-ಅಡಾಲ್ಫ್ ಐಚ್‌ಮನ್. ಯಾರಿಗೂ ಅವನು ಸುಳಿವು ಸಿಗಲಿಲ್ಲ. ಆದ್ದರಿಂದ ಅವನ ಸತ್ತಿರಬೇಕೆಂದು ಬಹುಜನ ಭಾವಿಸಿದರು.

ಅಡಾಲ್ಫ್ ಐಚ್‌ಮನ್ ಸತ್ತಿದ್ದಾನೆಂಬುದನ್ನು ಇಸ್ರೇಲಿನ ಗೂಢಚಾರಿ ಫ್ರೀಡ್‌ಮನ್ ಮಾತ್ರ ನಂಬಲಿಲ್ಲ.

ಇಸ್ರೇಲ್ ಪುನರ್ ನಿರ್ಮಾಣಗೊಳ್ಳತೊಡಗಿತ್ತು. ಇಸ್ರೇಲ್ ಸೀಕ್ರೆಟ್ ಸರ್ವೀಸ್ ವಿಭಾಗದ ಮುಖ್ಯಾಧಿಕಾರಿ ಅಡಾಲ್ಫ್‌ನ ಬೇಟೆಯಾಡುವಂತೆ ಫ್ರೀಡ್‌ಮನ್‌ಗೆ ಹೇಳಿದ. "ಅವನಿನ್ನೂ ಸತ್ತಿಲ್ಲ" ಇದು ಮುಖ್ಯಾಧಿಕಾರಿಯ ಮಾತು. ಫ್ರೀಡ್‌ಮನ್ ಈ ಸವಾಲನ್ನು ಸ್ವೀಕರಿಸಿದ. ಅಡಾಲ್ಫ್‌ನ ಯಾವುದೇ ಫೋಟೋವಾಗಲಿ, ಅವನ ಬಗೆಗೆ ಯಾವುದೇ ಮಾಹಿತಿಯಾಗಲಿ ಇಲ್ಲದಿದ್ದಾಗ್ಯೂ ಫ್ರೀಡ್‌ಮನ್ ಹಿಂಜರಿಯಲಿಲ್ಲ. ತಾನೂ ಯುದ್ಧ ಸಮಯದಲ್ಲಿ ತೊಂದರೆಗೊಳಗಾದವನೆಂದು ಹೇಳಿಕೊಂಡು ತನ್ನ ಕಾರ್ಯ ಮುಂದುವರಿಸಲು ನಿಶ್ಚಯಿಸಿ ಅದಕ್ಕೋಸ್ಕರ ತಲೆಕೂದಲನ್ನು ತೆಗೆಸಿಬಿಟ್ಟ. ಮೊದಲನೆಯದಾಗಿ ಅವನು ಇಸ್ರೇಲ್‌ನಲ್ಲಿನ ಮತ್ತು ಇತರೆಡೆಗಳಲ್ಲಿನ ರೆಫ್ಯೂಜಿ ಕ್ಯಾಂಪ್‌ಗಳಿಗೆ ಭೇಟಿ ನೀಡಿದ. ಅವನು ಹಲವಾರು ಜನ ಯಹೂದಿಗಳನ್ನು ಅಡಾಲ್ಫ್‌ನ ಬಗೆಗೆ ವಿಚಾರಿಸಿದ. ಆದರೆ ಯಾರೊಬ್ಬರೂ ಆ ನಾರಿಭ ಕೊಲೆಗಾರನ ಬಗೆಗೆ ಏನೂ ಹೇಳದಾದರು.

ಇದರಿಂದ ಕೊಂಚ ಆಶಾಭಂಗವಾದರೂ ನಿರಾಶನಾಗದ ಫ್ರೀಡ್‌ಮನ್ ಫ್ರಾನ್ಸ್, ಬ್ರಿಟನ್, ಅಮೇರಿಕಾ ಸೀಕ್ರೆಟ್ ಸರ್ವೀಸ್‌ಗಳ ಬಾಗಿಲು ತಟ್ಟಿದ. ಅವನು ನೂರಾರು ಜನ ಪೊಲೀಸ್ ಅಧಿಕಾರಿಗಳನ್ನೂ, ಹಲವಾರು ಸಂಸ್ಥೆಗಳನ್ನೂ ಸಂದರ್ಶಿಸಿದ. ಸಿ.ಐ.ಎ. ಅವನಿಗೆ ಕೊಂಚ ಸುಳಿವನ್ನು ನೀಡಿತು. ಸಿ.ಐ.ಎ.ದ ಅಧಿಕಾರಿಗಳು ಅಡಾಲ್ಫ್ ತನ್ನ ಹೆಸರು ಮತ್ತು ವೃತ್ತಿಯನ್ನು ಬದಲಾಯಿಸಿಕೊಂಡು ಜರ್ಮನ್ ಯುದ್ಧ ಕೈದಿಗಳ ಕ್ಯಾಂಪನ್ನು ಸೇರಿಕೊಂಡಿರಬೇಕೆಂದು ತಿಳಿಸಿದರು. ೧೯೪೬ರ ಯುದ್ಧ ಕಾರಾಗೃಹದಿಂದ ಅವನು ತಪ್ಪಿಸಿಕೊಂಡು ಹೋಗಿರಬಹುದಾದ ಸಾಧ್ಯತೆಯಿದೆಯೆಂದು ಸಂಶಯ ವ್ಯಕ್ತಪಡಿಸಿತು ಸಿ.ಐ.ಎ.

ಅಡಾಲ್ಫ್‌ನ ಪತ್ನಿ ಆಸ್ಟ್ರಿಯಾದಲ್ಲಿ ಯಾರನ್ನೋ ಆಗಾಗ ಭೇಟಿ ಮಾಡುತ್ತಿರುವಳೆಂಬ ಸುದ್ದಿ ಫ್ರೀಡ್‌ಮನ್‌ಗೆ ತಿಳಿಯಿತು. ಅವನು ತಕ್ಷಣವೇ ಆಸ್ಟ್ರಿಯಾದಲ್ಲಿನ ಇಸ್ರೇಲಿ ಗೂಢಚಾರರನ್ನು ಸಂಪರ್ಕಿಸಿದ. ಆ ಅನಾಮಧೇಯ ವ್ಯಕ್ತಿ ಶೀಘ್ರವಾಗಿಯೇ ಬಂಧಿಸಲ್ಪಟ್ಟು ಯಾವುದೇ ವಿಚಾರಣೆಯಿಲ್ಲದೆ ಮರಣ ಶಿಕ್ಷೆಗೊಳಗಾದ. ಅವನ ಪರಿಚಯ ನಂತರ ಹೊರಬಿತ್ತು. ಅವನೊಬ್ಬ ನಾರಿಭಯನಾಗಿದ್ದ. ಆದರೆ ಅಡಾಲ್ಫ್ ಐಚ್‌ಮನ್ ಆಗಿರಲಿಲ್ಲ.

ಈಗ ಫ್ರೀಡ್‌ಮನ್‌ಗೆ ಸರಕಾರಿ ಕಾಗದ ಪತ್ರಗಳನ್ನು ಹುಡುಕಾಡುವುದರ ಹೊರತು ಬೇರೆ ದಾರಿಯಿರಲಿಲ್ಲ. ಆ ಕಾಗದ ಪತ್ರಗಳಲ್ಲಿ ಫ್ರೀಡ್‌ಮನ್‌ಗೆ ಅಡಾಲ್ಫ್ ಲಿಬೆಲ್ ಎನ್ನುವ ಆರ್ಯನ್ ಮಹಿಳೆಯನ್ನು ಮದುವೆಯಾಗಬೇಕೆಂದು ಕೋರಿ ಅಪ್ಪಣೆಗಾಗಿ ಸಲ್ಲಿಸಿದ್ದ ಅರ್ಜಿ ದೊರಕಿತು. ಆ ಅರ್ಜಿಯನ್ನು ೧೯೩೪, ಅಕ್ಟೋಬರ್ ೩೦ ರಂದು ಸಲ್ಲಿಸಲಾಗಿತ್ತು. ೧೯೩೫ರ ಮೇ ೧೭ ರಂದು ಮದುವೆಯಾಗಿತ್ತು. ಆದರೆ ಫ್ರೀಡ್‌ಮನ್‌ನಿಂದ ಲಿಬೆಲ್‌ಳ ವಿಳಾಸ ಕಂಡುಹಿಡಿಯಲಾಗಲಿಲ್ಲ.

ಹೇಗೋ ಜೆಕೋಸ್ಲೋವಾಕಿಯಾದ ಪೊಲೀಸರು ಅಡಾಲ್ಫ್‌ನ ಹಳೆಯ ಮಿತ್ರನೊಬ್ಬನನ್ನು ಹಿಡಿದರು. ಅವನು ಪೊಲೀಸರಿಗೆ ಅಡಾಲ್ಫ್‌ನ ಪ್ರೇಯಸಿಯೊಬ್ಬಳ ಬಗೆಗೆ ತಿಳಿಸಿದ. ಅವಳು ಡೋವಲ್‌ನಲ್ಲಿ ಒಂದು ಕಾರ್ಖಾನೆ ಹೊಂದಿದ್ದಳು.

ಫ್ರೀಡ್‌ಮನ್ ತನ್ನ ಯಹೂದಿ ಮಿತ್ರ

ಮನೋಸೆಯನ್ನು ಡೋಪಲ್‌ಗೆ ಕಳುಹಿಸಿದ. ಮನೋಸೆ ಸುಂದರನೂ ಬಹುಭಾಷಾ ಪ್ರವೀಣನೂ ಆಗಿದ್ದ. ಅನೇಕ ಭಾಷೆಗಳನ್ನು ನಿರರ್ಗಳವಾಗಿ ಮಾತಾಡಬಲ್ಲವನಾಗಿದ್ದ. ಡೋಪಲ್‌ಗೆ ಬಂದ ನಂತರ ಮನೋಸೆಗೆ ಅಡಾಲ್ಫ್‌ನ ಪ್ರೇಯುಸಿ ಒಬ್ಬ ವಿಧವೆಯೆಂದೂ, ಈಗ ರಜೆಯ ಮೇಲೆ ಬಡ್‌ಹೌಜ್‌ಗೆ ಹೋಗಿರುವಳೆಂದೂ ತಿಳಿದುಕೊಂಡ. ಮನೋಸೆ ತಕ್ಷಣವೇ ಬಡ್‌ಹೌಜ್‌ಗೆ ಹೋಗಿ ಅಲ್ಲಿನ ಹೋಟಲೊಂದರಲ್ಲಿ ಬದಲೀ ಹೆಸರಿನಲ್ಲಿ ತಂಗಿದ. ಅಲ್ಲಿ ಅವನು ತಾನು ನಾಝಿ ಜನರಲ್‌ಗಳ ವಿಧವೆಯರ ಹಿತೈಷಿಯೆಂದು ಹೇಳಿಕೊಳ್ಳತೊಡಗಿದ. ಇದರಿಂದಾಗಿ ಅವನಿಗೆ ಸಾಕಷ್ಟು ಜನ ಸ್ನೇಹಿತರಾದರು. ಕೊನೆಗೂ ಅವನು ಅಡಾಲ್ಫ್‌ನ ಪತ್ನಿ ಲಿಜೆಲ್‌ಳನ್ನು ಕಂಡುಹಿಡಿಯುವಲ್ಲಿ ಯಶಸ್ವಿಯಾದ. ಅವನು ಅವಳೊಂದಿಗೆ ಸ್ನೇಹ ಬೆಳೆಸಿದನಾದರೂ ಅಡಾಲ್ಫ್‌ನ ಬಗೆಗೆ ಯಾವುದೇ ಮಾಹಿತಿ ಪಡೆದುಕೊಳ್ಳುವಲ್ಲಿ ವಿಫಲನಾದ. ಲಿಜೆಲ್‌ಳಿಗೇ ಅಡಾಲ್ಫ್‌ನ ಬಗೆಗೆ ಏನೂ ಗೊತ್ತಿರಲಿಲ್ಲ.

ನಿರಾಶನಾದ ಮನೋಸೆ ಡೋಪಲ್‌ಗೆ ಮರಳಿದ. ಆದರೆ ಈ ಸಲ ಅಡಾಲ್ಫ್‌ನ ಪ್ರೇಯುಸಿಯನ್ನು ಭೇಟಿಯಾಗುವಲ್ಲಿ ಯಶಸ್ವಿಯಾದ. ಅವನ ಪ್ರೇಯುಸಿ ಈಗ ಶ್ರೀಮತಿ ಮಿಸ್ಕೆಲ್ ಬಾಚ್ ಆಗಿದ್ದಳು. ತಾನು ಅಡಾಲ್ಫ್‌ನ ಗೆಳೆಯನೆಂದೂ, ಅವನಿಗೆ ಕೆಲವೊಂದು ವಸ್ತುಗಳನ್ನು ತಲುಪಿಸಬೇಕಾಗಿರುವುದಾಗಿಯೂ ಹೇಳಿಕೊಂಡ. ಶ್ರೀಮತಿ ಮಿಸ್ಚೆಲ್ ಬಾಚ್‌ಳೂ ಅಡಾಲ್ಫ್‌ನ ಬಗೆಗೆ ಏನೂ ಹೇಳಲಿಲ್ಲವಾದರೂ ಅಡಾಲ್ಫ್‌ನ ತಂದೆಯ ವಿಳಾಸವನ್ನು ಕೊಟ್ಟಳು.

ಅಡಾಲ್ಫ್‌ನ ತಂದೆ ಆಸ್ಟ್ರಿಯಾದಲ್ಲಿ ವಾಸಿಸುತ್ತಿದ್ದ. ಆದ್ದರಿಂದ ಮನೋಸೆ ಆಸ್ಟ್ರಿಯಾಕ್ಕೆ ಹೋದ. ಆದರೆ ಅಡಾಲ್ಫ್‌ನ ತಂದೆ ಮನೋಸೆಯನ್ನು, ಅವನು ಅಡಾಲ್ಫ್‌ನ ಬಗೆಗೆ ವಿಚಾರಿಸುತ್ತಿದ್ದಂತೆಯೇ ಹೊರತಳ್ಳಿಬಿಟ್ಟ. ಮನೋಸೆ ಮತ್ತೊಮ್ಮೆ ಡೋಪಲ್‌ಗೆ ಮರಳಿದ.

ಒಂದು ದಿನ ಮನೋಸೆ ಮತ್ತು ಶ್ರೀಮತಿ ಮಿಸ್ಚೆಲ್ ಬಾಚ್ ಒಂದು ರೆಸ್ಟಾರೆಂಟ್‌ನಲ್ಲಿ ಕುಳಿತು ಬಿಯರ್ ಕುಡಿದು, ನಂತರ ಮಿಸ್ಚೆಲ್ ಬಾಚ್‌ಳ ಮನೆಗೆ




"ನಿಮ್ ಯಜಮಾನ್ರಿಗಿಂತ ನಮ್ಮೆಜಮಾನ್ರೇ ಎಷ್ಟೋ ವಾಸಿ - ಸರೋಜಮ್ಮಾ.... ಅಡುಗೆ ಮಾಡೋದಲ್ದೆ ಕೆಲವೊಮ್ಮೆ ಪಾತ್ರೆಗಳನ್ನೂ ಅವ್ರೇ ತೊಳಿತಾರೆ......"

ಹೋದರು. ಅಲ್ಲಿ ಶ್ರೀಮತಿ ಮಿಸ್ಬೆಲ್ ಬಾಚ್ ತನ್ನ ಕುಟುಂಬದ ಫೋಟೋ ಆಲ್ಬಮ್ ತೋರಿಸಿದಳು. ಆ ಆಲ್ಬಮ್‌ನಲ್ಲಿ ಅಡಾಲ್ಫ್ ಐಚ್‌ಮನ್‌ನ ಫೋಟೋ ಕೂಡ ಇತ್ತು. ಶ್ರೀಮತಿ ಮಿಸ್ಬೆಲ್ ಬಾಚ್ ಮುಗ್ಧತೆಯಿಂದ ಮನೋಸೆಗೆ ಆ ಫೋಟೋ ಯಾರದೆಂದು ಹೇಳಿದಳು. ಇದು ಮನೋಸೆ ಸಾಧಿಸಿದ ವಿಜಯವಾಗಿತ್ತು. ಆ ಫೋಟೋವನ್ನು ಪಡೆಯಲು ಅವನು ಪೊಲೀಸರ ನೆರವನ್ನು ಕೋರಿದ. ನಕಲಿ ರೇಶನ್ ಕಾರ್ಡ್‌ಗಳ ಬಗೆಗೆ ತನಿಖೆ ಮಾಡುವ ನೆಪದಿಂದ ಪೊಲೀಸರು ಆ ಮನೆಯ ಮೇಲೆ ದಾಳಿ ಮಾಡಿದರು. ಆ ದಾಳಿಯ ಸಮಯದಲ್ಲಿ ಫೋಟೋ ಆಲ್ಬಮ್‌ಸಿಂದ ಅಡಾಲ್ಫ್‌ನ ಫೋಟೋ ಮಾತ್ರವೇ ಕೈಚಳಕದಿಂದ ಹಾರಿಸಲ್ಪಟ್ಟಿತು.

ಈಗ ಅರ್ಧ ಯುದ್ಧವನ್ನು ಗೆದ್ದಂತಾಗಿತ್ತು. ಆದರೆ ಫೋಟೋದ ಸಹಾಯವಿದ್ದಾಗ್ಯೂ ಅಡಾಲ್ಫ್‌ನನ್ನು ಪತ್ತೆ ಹಚ್ಚುವುದು ಅಷ್ಟು ಸರಳವಾಗಿರಲಿಲ್ಲ. ಏಕೆಂದರೆ ಆಗ್ಗೆ ಅಡಾಲ್ಫ್ ತನ್ನ ಚಹರೆಯನ್ನು ಸಂಪೂರ್ಣವಾಗಿ ಬದಲಾಯಿಸಿಕೊಂಡಿದ್ದ. ಅವನು ಉತ್ತರ ಜರ್ಮನಿಯಲ್ಲಿ ಕಟ್ಟಿಗೆ ವ್ಯಾಪಾರ ಪ್ರಾರಂಭಿಸಿದ್ದ ಮತ್ತು ತನ್ನ ಹೆಸರನ್ನು ರಿಚರ್ಡ್ ಕ್ಲೆಮೆಂಟ್ ಎಂದು ಬದಲಾಯಿಸಿಕೊಂಡಿದ್ದ. ತಮ್ಮ ವೇತನವನ್ನು ಸಮಯಕ್ಕೆ ಸರಿಯಾಗಿ ಕೊಡುತ್ತಿದ್ದುದರಿಂದ ಕೆಲಸಗಾರರೂ ಅವನನ್ನು ಮೆಚ್ಚಿಕೊಂಡಿದ್ದರು. ಶೀಘ್ರದಲ್ಲಿಯೇ ಅವನಿಗೆ ವ್ಯಾಪಾರದಲ್ಲಿ ವಿಪರೀತ ನಷ್ಟ ಉಂಟಾಯಿತು. ಆದ್ದರಿಂದ ಅವನು ತನ್ನ ವ್ಯಾಪಾರ ಮುಚ್ಚಿಬಿಟ್ಟು ತನ್ನಿಬ್ಬರು ನಾಝಿಗೆಳೆಯರೊಂದಿಗೆ ಇಟಲಿಗೆ ಹೊರಟು ಹೋದ. ಇಟಲಿಯಿಂದ ಅಡಾಲ್ಫ್ ಮುಂದೆ ಜಿನೀವಾಕ್ಕೆ ಹೋದ. ಅಲ್ಲಿ ಅವನು ಕೆಲಕಾಲ ಕ್ರಿಶ್ಚಿಯನ್ ಸೊಸೈಟಿಯೊಂದರಲ್ಲಿ ಕೆಲಸ ಮಾಡಿದ. ಅವನು ಅಲ್ಲಿ ಕೆಲಸ ಮಾಡಿದ ಉದ್ದೇಶ ವ್ಯಾಟಿಕನ್ ಪಾಸ್‌ಪೋರ್ಟ್ ಪಡೆಯಬೇಕೆಂಬುದಾಗಿತ್ತು. ಪಾಸ್‌ಪೋರ್ಟ್ ಪಡೆದ ನಂತರ ಅವನು ಸಿರಿಯಾಕ್ಕೆ ಹೋದ. ಅವನು ಅಲ್ಲಿ ಮಾಜಿ ನಾಝಿಯೊಬ್ಬನ ಬಳಿ ಕೆಲಸಕ್ಕೆ ಸೇರಿಕೊಂಡ. ಅಲ್ಲಿ ಅಡಾಲ್ಫ್ ೧೯೪೯ ರವರೆಗೆ ಕೆಲಸ ಮಾಡಿದ ಮತ್ತು ಜಗತ್ತಿನ ಇತ್ತೀಚಿನ ಬೆಳವಣಿಗೆಗಳ ಬಗೆಗೆ ಯಾವುದೇ ಅರಿವು ಪಡೆಯದಂತೆ ತನ್ನನ್ನು ಹೊರ ಜಗತ್ತಿನಿಂದ ಬೇರ್ಪಡಿಸಿಕೊಂಡ.

೧೯೫೦ರ ಹೊತ್ತಿಗೆ ಪ್ರಪಂಚ ಬಲು ಬೇಗ ಬದಲಾವಣೆಗೊಳ್ಳತೊಡಗಿತು. ಇಸ್ರೇಲ್ ಒಂದು ದೇಶವಾಗಿ ರೂಪುಗೊಂಡಿತು. ಮತ್ತೊಮ್ಮೆ ಅಡಾಲ್ಫ್ ನಿರುದ್ಯೋಗಿಯಾದ. ಆದ್ದರಿಂದ ಅವನು ಜಿನೀವಾಕ್ಕೆ ಹಿಂದಿರುಗಿ ಜಿನೀವಾದಿಂದ ಅವನು ಅರ್ಜೆಂಟಿನಾಕ್ಕೆ ಹೋದ. ಇನ್ನೊಂದು ಕಡೆ ಅವರ ಹೆಂಡತಿ ಲಿಬೆಲ್, ತನ್ನ ಗಂಡ ಅಡಾಲ್ಫ್ ಐಚ್‌ಮನ್ ಜೆಕೋಸ್ಲೋವಾಕಿಯನ್ ಸೈನಿಕರಿಂದ ಕೊಲ್ಲಲ್ಪಟ್ಟನೆಂದು ಬಹಿರಂಗವಾಗಿ ಹೇಳಿಕೆ ಕೊಟ್ಟಳು. ಈ ಹೇಳಿಕೆ ಇಸ್ರೇಲ್ ಅಡಾಲ್ಫ್‌ನನ್ನು ಬೇಟೆಯಾಡುವುದನ್ನು ನಿಲ್ಲಿಸುವಂತೆ ಮಾಡಿತು. ಫ್ರೀಡ್‌ಮನ್ ಮತ್ತು ಮನೋಸೆಗೆ ಹಿಂದಿರುಗುವಂತೆ ಆಜ್ಞೆಯಾಯಿತು. ಆದರೆ ಫ್ರೀಡ್‌ಮನ್ ಈ ಹೇಳಿಕೆಯನ್ನು ನಂಬಲಿಲ್ಲ. ಅಡಾಲ್ಫ್ ಬದುಕಿರುವನೆಂದು ಅವನಿಗೆ ಗಟ್ಟಿ ನಂಬುಗೆಯಿತ್ತು.

ಕಾಕತಾಳೀಯವಾಗಿ ಈ ಹೇಳಿಕೆ ಅಡಾಲ್ಫ್‌ನನ್ನು ಕೊಂಚ ಭಾವುಕನನ್ನಾಗಿ ಮಾಡಿತು. ಅವನು ತನ್ನ ಕುಟುಂಬದ ಜೊತೆ ಪುನಃ ಕೂಡಿಕೊಳ್ಳಲು ಯೋಚಿಸಿದ. ಇದು ಅಡಾಲ್ಫ್ ಮಾಡಿದ ಬಹು ದೊಡ್ಡ ತಪ್ಪಾಗಿತ್ತು. ಅದಕ್ಕೋಸ್ಕರ ಅವನು ತನ್ನ ಪ್ರಾಣವನ್ನೇ ತೆರಬೇಕಾಯಿತು.

ಅಡಾಲ್ಫ್ ತನ್ನ ಕುಟುಂಬವನ್ನು ಅರ್ಜೆಂಟಿನಾಕ್ಕೆ ಕರೆಸಿಕೊಂಡ. ಲಿಬೆಲ್ ತನ್ನ

ಮೂವರು ಮಕ್ಕಳೊಂದಿಗೆ ಅರ್ಜೆಂಟಿನಾ ತಲುಪಿದಳು. ಅವರ ಕುಟುಂಬ ಮತ್ತೆ ಒಂದುಗೂಡಿ ಸಂತೋಷದಿಂದ ಜೀವನ ಸಾಗಿಸತೊಡಗಿತು. ಅಡಾಲ್ಫನ ಸಂಪಾದನೆಯೂ ಚೆನ್ನಾಗಿತ್ತು. ಅವನು ಕಪ್ರಿ ಫಾರ್ಮ್‌ನಿಂದ ಉತ್ತಮ ಸಂಬಳ ಪಡೆಯುತ್ತಿದ್ದ.

ಆದರೆ ಅವನಿಂದ ದಾರುಣವಾಗಿ ಕೊಲ್ಲಲ್ಪಟ್ಟಿದ್ದ ೬೦ ಲಕ್ಷ ಜನಗಳ ಶಾಪ ಅವನನ್ನು ಕಾಡದೆ ಬಿಡಲಿಲ್ಲ. ಅವರು ಸಾಯುವ ಕಾಲಕ್ಕೆ ಹಾಕಿದ ನಿಟ್ಟುಸಿರಿನ ಬಿಸಿಯ ಪರಿಣಾಮವೋ ಎಂಬಂತೆ ಅಡಾಲ್ಫ ಕೆಲಸ ಮಾಡುತ್ತಿದ್ದ ಕಂಪನಿ ದಿವಾಳಿಯೆದ್ದು ಅವನು ಮತ್ತೊಮ್ಮೆ ನಿರುದ್ಯೋಗಿಯಾದ. ಈಗ ಅವನು ಕೆಲಸವನ್ನು ಅರಸುತ್ತಾ ಬ್ರೆಝಿಲ್‌ಗೆ ಹೋದ. ಅವನು ಬ್ರೆಝಿಲ್‌ನಲ್ಲಿ ೧೯೫೬ ರವರೆಗೆ ಕೆಲಸ ಮಾಡುತ್ತಿದ್ದು ನಂತರ ಅರ್ಜೆಂಟಿನಾಗೆ ಹಿಂದಿರುಗಿದ.

ಆಗ ಅವನ ಪತ್ನಿ ಲಿಬೆಲ್ ಆಸ್ಟ್ರಿಯಾಕ್ಕೆ ಹಿಂದಿರುಗಿದಳು. ಅವಳು ತನ್ನ ಪಾಸ್‌ಪೋರ್ಟ್ ಅನ್ನು ನವೀಕರಿಸಲು ಕೊಟ್ಟಳು. ಇದೇ ಅವಳು ಮಾಡಿದ ಘೋರ, ಮರಣಾಂತಿಕ ತಪ್ಪಾಗಿತ್ತು. ಪಾಸ್‌ಪೋರ್ಟ್ ಗುಮಾಸ್ತ, ಲಿಬೆಲ್‌ಳ ಹೆಸರನ್ನು ಗುರುತಿಸಿ, ಇಸ್ರೇಲಿನ ಗೂಢಚಾರಿಗಳಿಗೆ ಸೂಚನೆಯಿತ್ತ. ಫ್ರೀಡ್‌ಮನ್ ಲಿಬೆಲ್‌ಳ ಮೇಲೆ ಬಲವಾದ ಕಣ್ಣಿಟ್ಟ. ಅವನು ಅವಳನ್ನು ಅರ್ಜೆಂಟಿನಾದವರೆಗೂ ಹಿಂಬಾಲಿಸಿದ.

ಆಕಸ್ಮಿಕವಾಗಿ, ಅರ್ಜೆಂಟಿನಾದ ೧೫೦ನೇ ಸ್ವಾತಂತ್ರ್ಯೋತ್ಸವ ದಿನದಂದು, ಎರಡೂ ದೇಶಗಳ ನಡುವಿನ ವಿಮಾನ ಮಾರ್ಗವನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಮಾತುಕತೆಯಾಡಲು ಇಟಲಿಯಿಂದ ಪ್ರತಿನಿಧಿಗಳ ಗುಂಪೊಂದು ಬಂದಿತು. ಫ್ರೀಡ್‌ಮನ್‌ಗೆ ಅಡಾಲ್ಫನನ್ನು ಸೆರೆ ಹಿಡಿಯಲು ಇದು ತಕ್ಕ ಸಮಯವಾಗಿತ್ತು. ಒಂದು ದಿನ ಸಾಯಂಕಾಲ ನಾಲ್ಕು ಜನ ಇಸ್ರೇಲಿನ ಗೂಢಚಾರಿಗಳು ಅಡಾಲ್ಫ ಐಚ್‌ಮನ್‌ನನ್ನು ಹಿಡಿದರು. ಅವರು ಅವನನ್ನು ಒಂಬತ್ತು ದಿನಗಳವರೆಗೆ ಸಾಲಿಟರಿ ಕೋಣೆಯೊಂದರಲ್ಲಿ ಕೊಳೆ ಹಾಕಿದರು. ಹತ್ತನೆಯ ದಿನ, ಇಸ್ರೇಲಿನ ವಿಮಾನವೊಂದು ಅಡಾಲ್ಫನನ್ನು ಟೆಲ್ ಅವೀವ್‌ಗೆ ರಹಸ್ಯವಾಗಿ ಕೊಂಡೊಯ್ದಿತು. ಗೋಲ್ಡಾ ಮೇಯರ್, ಇಸ್ರೇಲಿನ ಪ್ರಧಾನಿ, ಈ ರೀತಿಯ ವರ್ತನೆಗೆ ಅರ್ಜೆಂಟಿನಾ ಸರಕಾರದೊಂದಿಗೆ ಕ್ಷಮೆಯಾಚಿಸಿದ ಮತ್ತು ಅದೇ ಸಮಯದಲ್ಲಿ ನೈತಿಕವಾಗಿ ತಾವು ಮಾಡಿದ್ದೇ ಸರಿಯಾದುದೆಂದು ಸಮರ್ಥಿಸಿಕೊಂಡ.

ಯಹೂದಿಗಳು ಅಡಾಲ್ಫ ಐಚ್‌ಮನ್‌ಗೆ ಮರಣದಂಡನೆ ವಿಧಿಸಿದರು. ಕೊನೆಗೂ ಅವರು ತಮ್ಮ ಸೇಡು ತೀರಿಸಿಕೊಂಡರು. ಇಸ್ರೇಲಿಗಳು, ತಮಗಾದ ನೋವು, ಅಪಮಾನವನ್ನು ಎಂದಿಗೂ ಮರೆಯುವುದಿಲ್ಲ. ಇಸ್ರೇಲಿನ ಸರಕಾರ ಮುಂದಿನ ಯುವ ಪೀಳಿಗೆಗೆ ಅಡಾಲ್ಫ ಐಚ್‌ಮನ್‌ನ ಕ್ರೂರ ಕೃತ್ಯಗಳ ನೆನಪು ಮಾಡಿಕೊಡಲು ಮ್ಯೂಜಿಯಂ ಒಂದನ್ನು ತೆರೆಯಿತು. ಆ ಮ್ಯೂಜಿಯಂನಲ್ಲಿ ಮಾನವ ಚರ್ಮದಿಂದ ತಯಾರಿಸಿದ ಸೋಪ್‌ಗಳನ್ನು, ಮಾನವರ ಎಲುಬುಗಳಿಂದ ತಯಾರಿಸಿದ ಮೂರ್ತಿಗಳನ್ನೂ ಪ್ರದರ್ಶನಕ್ಕಿಡಲಾಯ್ತು. ಈ ದೃಶ್ಯಗಳು ಭಯವನ್ನುಂಟು ಮಾಡುತ್ತವೆ. ಅದನ್ನು ನೋಡಿದ ನಂತರ ಪ್ರತಿಯೊಬ್ಬ ಮನುಷ್ಯನ ಮನಸ್ಸಿನಲ್ಲಿ ಒಂದೇ ಪ್ರಶ್ನೆ ಏಳುತ್ತದೆ. "ಮನುಷ್ಯನೆನಿಸಿಕೊಂಡ ಒಬ್ಬ ತನ್ನಂತಹುದೇ ಇನ್ನೊಬ್ಬ ವ್ಯಕ್ತಿಯೊಂದಿಗೆ ಈ ರೀತಿ ಅಮಾನುಷವಾಗಿ ವರ್ತಿಸಿದ್ದಾದರೂ ಹೇಗೆ?"

ಬಹುಶಃ ಇದಕ್ಕೆ ಉತ್ತರ ಕೊಡಬಲ್ಲವನು ಅಡಾಲ್ಫ ಒಬ್ಬನೇ! (ಆಧಾರ) *

# ಹೆಣ್ಣು ಕರಡಿಯ ಪತಿ ಪ್ರೇಮ

* ಹರಪ್ರಸಾದ ಶರ್ಮಾ

**ಹಿಂದೀ ಚಲಚ್ಚಿತ್ರ ಪ್ರಪಂಚದ ನಿರ್ದೇಶಕರೊಬ್ಬರ ಹೃದಯಸ್ಪರ್ಶಿ ಶಿಕಾರಿ ಅನುಭವ**

'**ಮಾ**ಸೂಮ' ಚಿತ್ರದ ಉದ್ಘಾಟನಕ್ಕಾಗಿ ನಾನು ಕಲಕತ್ತೆಯಿಂದ ಮುಂಬಯಿಗೆ ಬಂದಿದ್ದೆ. ನನ್ನ ಪರಮ ಮಿತ್ರ, ಕುಂವರ ಜಸಜಿತ ಸಿಂಹರು ಕಾಜಪುರದಿಂದ "ಕೂಡಲೆ ಹೊರಟುಬನ್ನಿ. ಬೇಟೆಗೆ ತೆರಳಬೇಕು" ಎಂದು ತಂತಿ ಕಳಿಸಿದರು. ನನಗಿರುವ ಏಕಮಾತ್ರ ಹವ್ಯಾಸ ಬೇಟೆಯಾಗಿದ್ದುದರಿಂದ ತಂತಿಯ ಮೂಲಕ ಶ್ರೀ ಹಸನೈನ ಜಿಯವರಿಂದ ರಜೆ ಪಡೆದುಕೊಂಡೆ. ಅವರಾಗ ಕಲಕತ್ತೆಯಲ್ಲಿದ್ದರು. ಮರುದಿನವೇ ಪಂಜಾಬ ಮೇಲಿನಲ್ಲಿ ಹೊರಟೆ. ರೇಲ್ವೆ, ಮೋಟರ್ ಮತ್ತು ಆನೆಗಳ ಮೇಲೆ ಪ್ರವಾಸ ಮಾಡಿ 1942 ಡಿಸೆಂಬರ್ 16ರಂದು ಸದಲ ಅಮಾನಗಡ ಫಾರೆಸ್ಟ ಬಂಗಲೆಯನ್ನು ತಲುಪಿದೆ.

ನಾಲ್ಕು ದಿನಗಳವರೆಗೆ ಇಡೀ ಬೇಟೆಯ ಪರಿವಾರ ಪ್ರತಿ ದಿನ ಮುಂಜಾನೆ ಬೇಟೆಗೆಂದು ಹೊರಟು ಸಂಜೆ ನಿಷ್ಫಲವಾಗಿ, ನಿರಾಶವಾಗಿ, ದಣಿದು ಸುಸ್ತಾಗಿ ತಿರುಗಿ ಶಿಬಿರಕ್ಕೆ ಬರುತ್ತಿತ್ತು. ಆನೆಗಳು ಮತ್ತು ಮಾವುತರು ಹೊಸಬರೂ ಅನುಭವಹೀನರೂ ಆಗಿದ್ದುದೇ ಇದಕ್ಕೆ ಕಾರಣವಾಗಿತ್ತು. ಆನೆಗಳು ಸರಳ ರೇಖೆಯಲ್ಲಿ ನಿಲ್ಲುತ್ತಿರಲಿಲ್ಲ. ಒಂದೆಡೆ ನಿಶ್ಚಲವಾಗಿ ನಿಲ್ಲುತ್ತಲೂ ಇರಲಿಲ್ಲ. ಸರಳ ರೇಖೆಯಲ್ಲಿ ನಿಲ್ಲುವ ಬದಲು ಎಡಕ್ಕೆ ಅಥವಾ ಬಲಕ್ಕೆ ಹೊರಳಿಬಿಡುತ್ತಿದ್ದವು. ಆದರಿಂದ ಬೇಟೆಯ ಮೃಗವು ಎದುರಿಗೆ ಬರದೆ ಎಡಕ್ಕೂ ಬಲಕ್ಕೂ ಓಡಿಹೋಗಿಬಿಡುತ್ತಿತ್ತು. ನಾವು ಏನೂ ಮಾಡಲಾರದೆ ಸುಮ್ಮನೆ ನಿಂತಿರಬೇಕಾಗುತ್ತಿತ್ತು. ನಾಲ್ಕು ದಿನ ಅಸಫಲರಾದ ಬಳಿಕ ಇನ್ನು ಆನೆಯ ಮೇಲೆ ಸವಾರಿ ಮಾಡಿ ಬೇಟೆಯಾಡುವ ಆಶೆ ಹಿಡಿದು ಪ್ರಯೋಜನವಿಲ್ಲವೆಂದು ಯೋಚಿಸಿ ನಾವೆಲ್ಲರೂ ಗಿಡಗಳನ್ನೇರಿ ಕುಳಿತುಕೊಳ್ಳಬೇಕು ಮತ್ತು ಆನೆಗಳ ಮುಖಾಂತರ ಅಡವಿ ಎಬ್ಬಿಸಿ ಬೇಟೆಯಾಡಬೇಕು ಎಂದು ನಿರ್ಧರಿಸಿದೆವು.

ಜಗಲಿಯ ಮೇಲೆ ನಾವೆಲ್ಲ ಚಹಾಪಾನ ಮಾಡುತ್ತ ಕುಳಿತಿದ್ದೆವು. ಮಾವುತರು ಆನೆಗಳನ್ನು ಸಿದ್ಧಪಡಿಸುವುದರಲ್ಲಿ ಮಗ್ನರಾಗಿದ್ದರು. ಬೇಟೆಗಾರರು ಆಯುಧಗಳನ್ನು ಸ್ವಚ್ಛ ಮಾಡಿಡುತ್ತಿದ್ದರು. ಒಮ್ಮಿಂದೊಮ್ಮೆ ಬಹು ಹಳೆಯ ಬೇಟೆಗಾರ ಫೂಲಸಿಂಹನು ವೇಗದಿಂದ ಓಡುತ್ತ ಬಂದು ನಮ್ಮೆದುರು ನಿಂತ. ದೂರದಿಂದ ಓಡುತ್ತ ಬಂದದ್ದರಿಂದ ಆತ ತೇಕುತ್ತಿದ್ದನಾದ್ದರಿಂದ ಅವನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಹೊರಡುವುದು ಅಸಂಭವವೂ ಆಗಿತ್ತು. ಆತ ಭಯಭೀತನಾಗಿದ್ದನೆಂಬುದು ಆತನ ಮುಖಚರ್ಯೆಯಿಂದ ಗೊತ್ತಾಗುತ್ತಿತ್ತು. ನಾನು ಅವನಿಗೆ ಧೈರ್ಯ ಹೇಳಿ ಕೂಡ್ರಿಸಿದೆ. ಬಳಿಕ ಆತನ

ಭಯ ಮತ್ತು ಆತ ಇಷ್ಟು ಜೋರಾಗಿ ಓಡಿ ಬಂದದ್ದರ ಕಾರಣವನ್ನು ಕೇಳಿದೆ. ಆತ ತುಸು ಸಾವರಿಸಿಕೊಂಡ ಬಳಿಕ ಹೇಳಿದ. ''ನಾನು ಬಹು ದೊಡ್ಡ ಕರಡಿ ದಂಪತಿಯೊಂದನ್ನು ಕಂಡೆ ಸ್ವಾಮಿ, ಅಷ್ಟು ದೊಡ್ಡ ಕರಡಿಯನ್ನು ನಾನು ನನ್ನ ಜೀವನದಲ್ಲಿಯೇ ನೋಡಿಲ್ಲ.''

45 ವರ್ಷಗಳನ್ನು ಇವೇ ಅಡವಿಗಳಲ್ಲಿ ಹುಲಿ, ಕರಡಿ, ಆನೆ ಮುಂತಾದ ಪ್ರಾಣಿಗಳನ್ನು ನೋಡುವುದರಲ್ಲಿ ಕಳೆದಿದ್ದ ಫೂಲಸಿಂಹನ ಈ ಮಾತುಗಳು ನಂಬಲರ್ಹವಾಗಿದ್ದವು.

ಎಲ್ಲರೂ ಎದ್ದು ಫೂಲಸಿಂಹನನ್ನು ಜೊತೆಗೆ ಕರೆದುಕೊಂಡು ಹೊರಟೆವು. ಇಷ್ಟೊತ್ತಿಗೆ ಫೂಲ ಸಿಂಹ ಪೂರ್ತಿಯಾಗಿ ಆತ್ಮವಿಶ್ವಾಸ ಪಡೆದಿದ್ದ. ತುಸು ಹೊತ್ತಿನಲ್ಲಿಯೇ ಆತ ತಾನು ಕರಡಿಗ ಳನ್ನು ಕಂಡಿದ್ದ ಸ್ಥಳಕ್ಕೆ ನಮ್ಮನ್ನು ಕರೆದೊಯ್ದ. ಕರಡಿ ದಂಪತಿ ಹೋಗಿದ್ದ ಅಡವಿಯ ಭಾಗಕ್ಕೆ ಟಾಂಗಿಯಾ ಎಂದು ಹೆಸರಿದೆ. ಇದು ಬ್ರಹ್ಮೀ ಶಬ್ದ. ಅಡವಿ ಅಧಿಕಾರಿಗಳು ಬೇರೆ ಬೇರೆ ಬಗೆಯ ಗಿಡಗಳನ್ನು ನಟ್ಟು ಬೆಳೆಸುವ ಅಡವಿಗೆ ಟಾಂಗಿಯಾ ಅನ್ನುತ್ತಾರೆ. ಇಂಥ ಅಡವಿಗಳಲ್ಲಿ ಆನೆಗಳನ್ನೊಯ್ಯಲು ನಿರ್ಬಂಧವಿರುತ್ತದೆ.

ನಾವೆಲ್ಲ ನೆಲದ ಮೇಲೆಯೇ ಇರಲು ನಿರ್ಣ ಯಿಸಿದೆವು. ಕರಡಿಗಳು ಎಲ್ಲಿ ಮಾರ್ಗ ದಾಟ ದ್ದವೋ ಆ ಸ್ಥಳದಲ್ಲಿಯೇ ನಾನು ನಿಂತು ಕೊಂಡೆ. ನನಗೆ ತುಸು ದೂರದಲ್ಲಿ ಕುಂವರ ಗಜಪತಿ ರಿಕ್ಷರು ನಿಂತರು. ಉಳಿದವರು ಅಡವಿ ಯಲ್ಲಿ ಬೇರೆ ಬೇರೆ ಕಡೆಗೆ ನಿಂತರು. ಕರಡಿದಂ ಪತಿ ಹೋಗಿದ್ದ ಅಡವಿಭಾಗಕ್ಕೆ ಕುಂವರ ಜಸ ಜೀತ ಸಿಂಗರು ತಮ್ಮ ಇಬ್ಬರು ಜೊತೆಗಾರರೊ ಡನೆ ಹೋದರು. ಅವರು ತುಸು ದೂರ ಹೋಗುವಷ್ಟರಲ್ಲಿ ಅವರಿಗೆ ಆ ಉನ್ಮತ್ತ ಕರಡಿ ಜೋಡಿ ದೃಷ್ಟಿಗೆ ಬಿತ್ತು. ಅವುಗಳಲ್ಲಿ ಒಂದು ಕುಳಿತಿತ್ತು. ಇನ್ನೊಂದು ನಿಂತಿತ್ತು. ಅವೆರಡೂ ಕಾಮಲಾಲಸೆಯಿಂದ ಕುರುಡಾಗಿದ್ದುದರಿಂದ ಅವಕ್ಕೆ ಮನುಷ್ಯರು ಬಂದ ಸುಳಿವು ಹತ್ತಲಿಲ್ಲ. ಕಾಮದ ಪ್ರಭಾವ ನೋಡಿದಿರಾ! ಮೃತ್ಯು




೧೯೫೯ ಜನವರಿ ತಿಂಗಳ
'ಕಸ್ತೂರಿ' ಸಂಚಿಕೆಯಲ್ಲಿ
ಪ್ರಕಟವಾದ ಲೇಖನ.

ಎದೆಯ ಮೇಲೆರಗಿದರೂ ಕಾಮದ ಮಬ್ಬಿನಲ್ಲಿ ಪ್ರಾಣಿಗೆ ಅದರ ಪರಿವೆಯಿರುವುದಿಲ್ಲ. ಕುಂವರ ಜಿಯವರು ಗುಂಡು ಹಾರಿಸಿದರು. ನಿಂತಿದ್ದ ಗಂಡು ಕರಡಿ ನೆಲಕ್ಕೊರಗಿತು. ಆದರೆ ಕೂಡಲೆ ಎದ್ದು ಓಡಿತು. ಹೊಡೆಯಬೇಕೆಂದಿದ್ದರೂ ಎರ ಡನೆಯ ಗುಂಡು ಹೊಡೆಯುವುದು ಕುಂವರಜಿ ಯಿಂದಾಗಲಿಲ್ಲ. ಏಕೆಂದರೆ ಅಡವಿ ಚಿಕ್ಕದಾ ಗಿತ್ತು. ನಾವೆಲ್ಲ ಸಮೀಪ ಸಮೀಪವಾಗಿ ನಿಂತಿ ದ್ದೆವು. ಗಿಡಗಂಟಿ ಅತಿ ದಟ್ಟವಾಗಿದ್ದುದರಿಂದ ಅವರಿಗೆ ತಿರುಗಿ ಕರಡಿ ಸರಿಯಾಗಿ ಕಾಣಿಸಲಿಲ್ಲ. ಇಂಥ ಪ್ರಸಂಗದಲ್ಲಿಯೇ ಹೊಸಬರೂ ಅನನು ಭವಿಕರೂ ಆದ ಬೇಟೆಗಾರರು ಗಂಡಾಂತರ ತಂದುಕೊಳ್ಳುತ್ತಾರೆ. ಗುಂಡು ಬೇಟೆಯ ಪ್ರಾಣಿಗೆ ತಗಲುವ ಬದಲು ತಮ್ಮ ಜೊತೆಗಾರ ರಿಗೆ ತಗುಲೀತು ಎಂಬುದರ ಪರಿವೆಯಿಲ್ಲದೆ ಗುಂಡು ಹಾರಿಸಿಬಿಡುತ್ತಾರೆ. ಆದರೆ ಕುಂವರಜಿ ಮತ್ತು ಅವರ ಜೊತೆಗಾರರು ಅನುಭವಿಗಳೂ ಧೀರರೂ ಆಗಿದ್ದರು. ಅವರು ಕರಡಿಯ ಜಾಡು ಹಿಡಿದು ಹೊರಟರು.

ಗುಂಡು ಹಾರಿದ ಸಪ್ಪಳ ಕೇಳಿದಾಗಲೇ ಕರ ಡಿಗೆ ಗುಂಡು ತಗಲಿರಬೇಕು ಎಂದು ತಿಳಿದು ಕೊಂಡ. ಆದರೆ ಎರಡನೆಯ ಗುಂಡಿನ ಸಪ್ಪಳ ಕೇಳಿ ಬರದ್ದರಿಂದ ಜಾಗರೂಕನಾಗಿ ನಿಂತು ಕೊಂಡೆ. ತುಸುಹೊತ್ತಿನಲ್ಲಿಯೇ ನನ್ನೆದುರಿನಲ್ಲಿ

ಅಡವಿಯಿಂದ ಹೊರಬಿದ್ದು ಮಂದಗತಿಯಿಂದ ರಸ್ತೆಯ ಮೇಲೆ ನಡೆದುಬರುತ್ತಿದ್ದ ಕರಡಿ ಕಂಡಿತು. ನಾನು ಬಂದೂಕನ್ನು ಹೆಗಲಿಗೆ ಆನಿಸಿ ಕೊಳ್ಳುವಷ್ಟರಲ್ಲಿ ಕರಡಿ ರಸ್ತೆಯ ಮಧ್ಯಕ್ಕೆ ಬಂತು. ಧಡಂ! ಗುಂಡು ತಗುಲಿದೊಡನೆ ಅದು ಕೆಳಗುರುಳಿತು. ಇನ್ನೊಂದು ಗುಂಡು ಹಾರಿಸು ವುದು ಉಚಿತವೆಂದು ನನಗೆನಿಸಲಿಲ್ಲ. ಕರಡಿಗೆ ನನ್ನ ಗುಂಡು ಬಡಿಯುವ ಮೊದಲೇ ಗಾಯವಾ ಗಿತ್ತು. ಚರ್ಮವನ್ನು ವ್ಯರ್ಥ ಕೆಡಿಸುವುದರಿಂ ದೇನು ಪ್ರಯೋಜನ? ಕರಡಿ ಮೇಲಕ್ಕೇಳದ್ದನ್ನು ಕಂಡು ನಾನು ನಿಂತಲ್ಲಿಂದ ಅದರತ್ತ ಎರಡು ಹೆಜ್ಜೆ ಮುಂದಿಟ್ಟೆ. ಅಷ್ಟರಲ್ಲಿ ಹೆಣ್ಣು ಕರಡಿ ವೇಗದಿಂದ ಓಡುತ್ತ ಬಂದು ಗಂಡು ಕರಡಿಯನ್ನೆ ತ್ತಿಕೊಂಡು ನನ್ನೆದುರಿನಲ್ಲಿಯೇ ಅಡವಿಯನ್ನು ಹೊಕ್ಕಿತು. ನಾನು ಮೌನವಾಗಿ ನಿಂತುಕೊಂಡು ಪತ್ನೀಪ್ರೇಮವನ್ನು, ಪರಮಾತ್ಮನ ಲೀಲೆಯನ್ನು ನೋಡುತ್ತಿದ್ದೆ. ಬಂದೂಕು ಮತ್ತು ಕೊಲ್ಲುವು ದನ್ನು ಮರೆತೆ.

ಅಷ್ಟರಲ್ಲಿ ಕುಂವರಜಿ ಮತ್ತು ಅವರ ಜೊತೆ ಗಾರರು ನಾಸಿನದ್ದಲ್ಲಿಗೆ ಬಂದರು. ಬಂದವರೇ "ಎಲ್ಲಿದೆ ಕರಡಿ?" ಎಂದು ಕೇಳಿದರು. ನಾನಾ ದರೋ ಶಿಲಾಮೂರ್ತಿಯಂತೆ ಪತ್ನಿ ಗಾಯ ಗೊಂಡ ತನ್ನ ಪತಿಯನ್ನು ಎದೆಗೆತ್ತಿಕೊಂಡು ಹೋದ ಕಡೆಗೆ ನೋಡುತ್ತ ನಿಂತಿದ್ದೆ. ಅವರು ನನ್ನನ್ನು ಅಲುಗಾಡಿಸುತ್ತ "ನಿದ್ದೆ ಮಾಡುತ್ತಿರು ವಿರೇನು?" ಎಂದು ಕೇಳಿದರು. ನಾನು ಎಚ್ಚತ್ತೆ. ನನ್ನ ಸ್ಮೃತಿ ಮರಳಿತು. ಜೀವನದಲ್ಲಿ ಇದೊಂದು ಅದ್ಭುತ ಪ್ರೇಮಲೀಲೆಯನ್ನು ನೋಡಿದೆನೆಂದು ಅವರಿಗೆ ಹೇಳಿದೆ. ನನ್ನ ಮಾತುಗಳಲ್ಲಿ ಅವರಿಗೆ ನಂಬಿಕೆಯಾಗಲಿಲ್ಲ. ಇಷ್ಟರಲ್ಲಿ ಅವರ ಅಣ್ಣ ಬಂದು ಶರ್ಮಾಜಿ (ನಾನು) ಹೇಳುತ್ತಿರುವುದು ಅಕ್ಷರಶಃ ಸತ್ಯ ವೆಂದು ನುಡಿದರು. "ನಾನು ಕೂಡ ಹೆಣ್ಣು ಕರಡಿ ಗಂಡು ಕರಡಿಯನ್ನು ಹೊತ್ತುಕೊಂಡು ಹೋಗುವುದನ್ನು ಕಂಡೆ. ಆದರೆ ಅವುಗಳ ದುಃಸ್ಥಿತಿಯನ್ನು ಕಂಡಾಗ ಗುಂಡು ಹೊಡೆ ಯುವ ಮನಸ್ಸಾಗಲಿಲ್ಲ; ಹೆಣ್ಣು ಕರಡಿ ಗಂಡು ಕರಡಿಯನ್ನೆತ್ತಿಕೊಂಡು ಎದುರಿನ ಹಳ್ಳದ ಕಡೆಗೆ ಹೋಗಿದೆ" ಎಂದರವರು. ಎಲ್ಲರಿಗೂ ಆಗ ನನ್ನ ಮಾತಿನಲ್ಲಿ ವಿಶ್ವಾಸ ಉಂಟಾಯಿತು. ಆಶ್ಚ ರ್ಯವೂ ಆಯಿತು.

ಪತಿಯನ್ನೆತ್ತಿಕೊಂಡು ಕರಡಿ ಎಲ್ಲಿ ಹೋಯಿ ತೆಂದು ನೋಡಲು ನಾವು ನಿರ್ಧರಿಸಿದೆವು. ತುಸು ದೂರ ಹೋದ ಬಳಿಕ ನಾವು ಒಂದು ಮುರು ವನ್ನು ದಾಟಿದಾಗ ಹೆಣ್ಣು ಕರಡಿ ಗಂಡು ಕರಡಿ ಯನ್ನು ಎದೆಗವಚಿಕೊಂಡು ಕುಳಿತಿರುವುದನ್ನು ಕಂಡೆವು. ಪತಿವಿಯೋಗದಿಂದ ಶೋಕವಿಹ್ವಲ ವಾದ, ಕಣ್ಣುಗಳಿಂದ ದುಃಖಾಶ್ರುಗಳನ್ನು ಸುರಿ ಸುತ್ತಿದ್ದ ಆ ಹೆಣ್ಣು ಕರಡಿಗೆ ನಾವು ಅದರ ತೀರ ಹತ್ತಿರಕ್ಕೆ ಹೋದಾಗಲೂ ಸುಳಿವು ಹತ್ತಲಿಲ್ಲ. ಆಗ ನಮ್ಮಲ್ಲಿ ಯಾರು ಬೇಕಾದರೂ ಒಂದೇ ಗುಂಡಿನಿಂದ ಒಂದು ನಿಮಿಷದಲ್ಲಿ ಅದನ್ನು ಕೊಂದು ಕೆಡವಬಹುದಿತ್ತು. ಆದರೆ ಯಾರಿಗೂ ಮೈಮೇಲೆ ಪ್ರಜ್ಞೆ ಇರಲಿಲ್ಲ. ಎಲ್ಲರೂ ಆ ಅದ್ಭುತದಲ್ಲಿ ಲೀನರಾಗಿ ಹೋಗಿದ್ದರು.

ಹೆಣ್ಣು ಕರಡಿಯು ಮುಖ ಪತಿಯ ದೇಹದ ಮೇಲೆ ಒರಗಿತ್ತು. ಪತಿಯ ಕರಗಳನ್ನು ಪುನಃ ಪುನಃ ಮೇಲಕ್ಕೆತ್ತಿ ಅದನ್ನು ತನ್ನ ಗಲ್ಲಕ್ಕೆ ಸ್ಪರ್ಶಿಸಿ ಕೊಳ್ಳುತ್ತಿತ್ತು. ಎದೆಗವಚಿಕೊಳ್ಳುತ್ತಿತ್ತು. ಬಿಡು ತ್ತಿತ್ತು.

ಅಕಸ್ಮಾತ್ತಾಗಿ ಅದು ಮುಖ ಮೇಲಕ್ಕೆತ್ತಿತು. ನಮ್ಮನ್ನೆಲ್ಲ ನೋಡಿತು. ಬಳಿಕ ತಿರಸ್ಕಾರದ ನೋಟವನ್ನು ಬೀರಿ ಮುಖ ತಿರುಗಿಸಿಕೊಂಡಿತು. ಮೆಲ್ಲಗೆ ಎದ್ದು ಪತಿಯನ್ನು ಬಗಲಲ್ಲೆತ್ತಿ ಕೊಂಡು ಮಂದಗತಿಯಿಂದ ಎದುರಿನ ಹಳ್ಳ ದಲ್ಲಿ ಇಳಿಯಿತು. ಎಲ್ಲ ಬೇಟೆಗಾರರು ನೋಡು ತ್ತಲೇ ನಿಂತಿದ್ದರು. ನಾನಂದೆ, "ಬಹಾದ್ದೂರ ಬೇಟೆಗಾರರೇ, ನಿಮ್ಮ ಬಂದೂಕುಗಳಿಗೇನಾಗಿ ದೆ?" ಯಾಕೆ ಹೊಡೆಯಲಿಲ್ಲ? ನೀವು ಕೂಡ ಈಗ ಹೆಣ್ಣು ಕರಡಿಯನ್ನು ನೋಡುತ್ತಿದ್ದೀರಿ." ಎಲ್ಲರೂ ಒಮ್ಮೆಲೇ ನಿದ್ದೆಯಿಂದೆಚ್ಚತ್ತವರಂತೆ ಬೆಚ್ಚಿದರು. "ಶರ್ಮಾಜಿ, ಯಾವುದೋ ಶಕ್ತಿ

ನಮ್ಮೆಲ್ಲರ ಕೈ ಕಟ್ಟಿಹಾಕಿತು'' ಎಂದರು. ''ಅದು ಕರಡಿಯ ನಿಜ ಪತಿಪ್ರೇಮ'' ಎಂದೆ ನಾನು.

ನಾವು ಕೂಡ ಹಳ್ಳದಲ್ಲಿಳಿದು ಹೆಣ್ಣು ಕರಡಿ ಹೋದತ್ತ ಹೊರಟೆವು. ತುಸು ದೂರ ಹೋದ ಬಳಿಕ ಗಂಡು ಕರಡಿಯನ್ನು ನೆಲದ ಮೇಲೆ ಮಲಗಿಸಿರುವುದು ಕಾಣಿಸಿತು. ಬಹುಶಃ ಕಲಿಯುಗದಲ್ಲಿ ಮೃತ್ಯುವಿನ ಕೈಯಿಂದ ಪತಿಯನ್ನು ಮರಳಿ ಪಡೆಯುವುದು ಸಾಧ್ಯವಿಲ್ಲೆಂದು ಭಾವಿಸಿ ಹೆಣ್ಣು ಕರಡಿ ಹೊರಟುಹೋಗಿರಬೇಕು. ಮಣ್ಣನ್ನು ಮಣ್ಣಿಗರ್ಪಿಸಿ ಅದು ಹೋಗಿತ್ತು. ನಾಲ್ಕೂ ದಿಕ್ಕುಗಳಿಂದ ಮೃತ ಕರಡಿಯನ್ನು ಪರೀಕ್ಷಿಸಿದ ಫೂಲಸಿಂಹನು ಅವಾಕ್ಕಾದ ಎರಡೂ ಗಾಯಗಳಲ್ಲಿ ಒಂದು ಹನಿ ರಕ್ತ ಕೂಡ ಸೋರದಂತೆ ಹುಲ್ಲು ತುಂಬಿರುವುದನ್ನು ನಮಗೆ ತೋರಿಸಿದ. ಹೆಣ್ಣು ಕರಡಿಯ ಚಾತುರ್ಯವನ್ನು ನಾವು ಹೊಗಳತೊಡಗಿದೆವು. ಕರಡಿ ಪಶುಗಳ ವೈದ್ಯ, ಅದಕ್ಕೆ ಅನೇಕ ವನಸ್ಪತಿಗಳ ಪರಿಚಯವಿದೆಯೆಂಬ ಮಾತನ್ನು ಕೇಳಿದ್ದೆವು. ಇಂದದರ ಪ್ರತ್ಯಕ್ಷ ಪ್ರಮಾಣವನ್ನು ಕಂಡೆವು.

ಮರುದಿನ ನಾವೆಲ್ಲ ಬಂಗಲೆಯ ಜಗುಲಿಯ ಮೇಲೆ ಹರಟುತ್ತ ಕುಳಿತಿದ್ದಾಗ ರಾನಿನಾಗಲದ ನಾಲ್ವಾರು ಆಗಸರು ಓಡುತ್ತ ಒಂದು ಅಳುತ್ತ ಅಳುತ್ತ ಒಂದು ಕರಡಿ ತಮ್ಮ ಊರಿನ ಒಂಬತ್ತು ಜನರನ್ನು ಗಾಯಗೊಳಿಸಿದೆಯೆಂದೂ ಜನರು ಹೋಗಿಬರುವ ರಸ್ತೆಯನ್ನು ಬಂದು ಮಾಡಿದೆಯೆಂದೂ ತಿಳಿಸಿದರು. ''ಏಳು ಮೈಲು ದೂರ ನಡೆದು ನಿಮ್ಮಲ್ಲಿಗೆ ಬಂದಿದ್ದೇವೆ. ನಮ್ಮ ಕಷ್ಟ ನಿವಾರಿಸಿ ನಮ್ಮನ್ನು ರಕ್ಷಿಸಿರಿ. ನಮ್ಮ ಮಕ್ಕಳ ಕಲ್ಯಾಣ ಮಾಡಿರಿ'' ಎಂದವರು ಬೇಡಿಕೊಂಡರು.

ಎತ್ತಿನ ಬಂಡಿಗಳ ಮೇಲೆ ಕುಳಿತು ಒಂದೂವರೆ ತಾಸಿನಲ್ಲಿ, ಆ ಹೆಣ್ಣು ಕರಡಿ ಮೃತ್ಯುವಿನ ತಾಂಡವ ನೃತ್ಯಗೈಯ್ಯುತ್ತ ತನ್ನ ಮೃತ್ಯುವನ್ನು ಆಹ್ವಾನಿಸುತ್ತಿದ್ದ ಸ್ಥಳವನ್ನು ಮುಟ್ಟಿದೆವು. ಅದು ಕೂಗಿ ಕೂಗಿ ''ನನಗೆ ನನ್ನ ಪತಿಯ ವಿಯೋಗ ಸಹನವಾಗುವುದಿಲ್ಲ. ಅವನೆಡೆಗೆ ನನ್ನನ್ನು ಕಳಿಸಿರಿ. ಅವನನ್ನು ಬಿಟ್ಟು ನಾನೊಂದು ನಿಮಿಷವೂ ಜೀವಿಸಿರಲಾರೆ'' ಎಂದು ಮನುಷ್ಯ ಮಾತ್ರರಿಗೆಲ್ಲ ಹೇಳುವಂತಿತ್ತು. ಹಾಗೆ ಹೇಳುವಾಗ ಅದರ ಉಗುರುಗಳು ಯಾರನ್ನಾದರೂ ಗಾಯಗೊಳಿಸುತ್ತಿದ್ದರೆ ಅದರ ತಪ್ಪೇನು? ಅದು ತನ್ನ ದುಃಖದಲ್ಲಿ ಎಷ್ಟು ಮುಳುಗಿತ್ತೆಂದರೆ ಮೃತ್ಯುರೂಪದಲ್ಲಿ ನಾವೆಲ್ಲ ಅದರ ಎದುರಿನಲ್ಲಿ ನಿಂತರೂ ಅದಕ್ಕೆ ಅರಿವಾಗಲಿಲ್ಲ. ಕೊನೆಗೆ ಅದು ನಮ್ಮನ್ನು ಕಂಡಿತು. ತನ್ನ ಶತ್ರುವಿನ ಗುರುತು ಹತ್ತಿತೆಂಬಂತೆ ನೋಡುತ್ತಲೇ ಉಳಿಯಿತು. ಬಳಿಕ ಬಹು ದ್ವೇಷದಿಂದ ಆಕ್ರಮಣ ಮಾಡಿತು.

ಅಷ್ಟರಲ್ಲಿ ಎರಡು ಗುಂಡುಗಳು ಹಾರಿದವು. ಹೆಣ್ಣು ಕರಡಿಯ ಪ್ರಾಣಪಕ್ಷಿ ಹಾರಿ ತನ್ನ ಪ್ರಿಯಕರನ ತಾಣಕ್ಕೆ ಹೋಯಿತು. ವಿಧವೆ ಸತಿಯಾದಳು. ಪತಿವಿಯೋಗದ ಪೀಡೆಯಿಂದ ಮುಕ್ತಳಾದಳು. ಅನಂತದಲ್ಲಿ ಮತ್ತೆ ಎರಡು ಪ್ರಾಣಿಗಳ ಮಿಲನವಾಯಿತು.

ನಮ್ಮನ್ನು ಅಭಿನಂದಿಸುತ್ತಿದ್ದ ಊರವರನ್ನೂ, ಚಪ್ಪಾಳೆ ತಟ್ಟುತ್ತಿದ್ದ ಬಾಲಕರನ್ನೂ ಬಿಟ್ಟು ನಾವೆಲ್ಲ ನಮ್ಮ ಶಿಬಿರಕ್ಕೆ ಮರಳಿದೆವು. ಆದರೆ ಆ ಹೆಣ್ಣು ಕರಡಿಯನ್ನು ಕೊಂದು ಇಂದು ನನ್ನ ಹೃದಯ ರೋದಿಸುತ್ತಿತ್ತು. ಯಾಕೆಂದು ಹೇಳಲಾರೆ.



# ಸೌಂದರ್ಯವರ್ಧಕಗಳು




ಎಂ. ಶಿವರಾಮ ಆಚಾರ್

ಮಾನವನು ತನ್ನ ದೈವದತ್ತವಾದ ಸೌಂದರ್ಯದಿಂದ ತೃಪ್ತನಾಗುವುದಿಲ್ಲ. ಎಷ್ಟೇ ಸೌಂದರ್ಯವತಿಯಾದ ಸ್ತ್ರೀಯರೂ ತಮ್ಮ ಸೌಂದರ್ಯವನ್ನು ಇನ್ನಷ್ಟು ಆಕರ್ಷಕವಾಗಿ ಕಾಣುವಂತೆ ಮಾಡಲು ಯತ್ನಿಸುತ್ತಾರೆ. ಅದಕ್ಕೆ ಬೇಕಾದ ಎಲ್ಲಾ ಸಲಕರಣೆಗಳೂ, ಸೌಕರ್ಯಗಳೂ ಆಧುನಿಕ ಕಾಲದಲ್ಲಿ ಒದಗಿಬಂದಿವೆ. ಸ್ತ್ರೀಯರ ಮಾತು ಹಾಗಿರಲಿ. ಪುರುಷರು ಕೂಡಾ ತರುಣರಿಂದ ಹಿಡಿದು ಮುದುಕರವರೆಗೆ ತಾವು ಚಂದವಾಗಿ ಕಾಣಬೇಕೆಂದೇ ಆಶಿಸುತ್ತಾರೆ. ಈಗಿನ ಪತ್ರಿಕೆಗಳು, ರೇಡಿಯೋ, ಟಿ.ವಿ. ಮೊದಲಾದವುಗಳು ಶೃಂಗಾರ ಸಾಧನಗಳನ್ನು ಸೌಂದರ್ಯ ವರ್ಧಕಗಳನ್ನು, ಅವನ್ನು ತಯಾರಿಸುವ ಕಂಪನಿಗಳಿಗಾಗಿ ಪ್ರಚಾರ ಮಾಡುತ್ತಿವೆ. ಪರಿಮಳಯುಕ್ತವಾದ ಸಾಬೂನು, ಸ್ನೋ, ಪೌಡರು, ಕ್ರೀಮ್ (ಮುಲಾಮು), ತುಟಿಗೆ ಹಚ್ಚುವ ವಿವಿಧ ಬಣ್ಣಗಳು (lipstics), ಉಗುರುಗಳಿಗೆ ಸವರುವ ಬಣ್ಣಗಳು (nail polish), ಕೂದಲಿಗೆ ಬಳಿಯುವ ಬಣ್ಣಗಳೂ (hair dyes), ಸ್ತ್ರೀಯರ ಮೊಲೆಕಟ್ಟುಗಳು (ಬ್ರಾಗಳು), ಕೃತಕ ಕೂದಲುಗಳುಳ್ಳ ಕವಚಗಳು (wigs), ರೋಮನಾಶಕಗಳು, ವಿವಿಧ ವಿನ್ಯಾಸಗಳ ಉಡುಗೆ ತೊಡುಗೆಗಳು, ರುಮಾಲುಗಳು, ಮುಂಡಾಸು ಟೋಪಿಗಳು ಹೀಗೆ ಒಂದೇ ಎರಡೇ ಇನ್ನೂ

ಏನೇನೋ ವಸ್ತುಗಳು ಬಳಕೆಯಲ್ಲಿವೆ. ಇವೆಲ್ಲವನ್ನು ಆಧುನಿಕ ಸ್ತ್ರೀ ಪುರುಷರು ತಮ್ಮ ಸೌಂದರ್ಯವರ್ಧನೆಗಾಗಿ ಉಪಯೋಗಿಸುತ್ತಾರೆ.

ಸ್ವಲ್ಪ ಸಮಯದ ಹಿಂದೆ ಲಂಡನ್ನಿನಲ್ಲಿ ಒಂದು ವಿಶೇಷ ರೀತಿಯ ಪ್ರದರ್ಶನವನ್ನು ಏರ್ಪಡಿಸಿದ್ದರಂತೆ ಅದು ಮಾನವನು ಪ್ರಪಂಚದ ಮೂಲೆ ಮೂಲೆಗಳಲ್ಲೂ ಹಿಂದಿನ ಕಾಲದಿಂದಲೂ ಕಾಲ ಬದಲಾದಂತೆ ಶೃಂಗಾರ ಸಾಧನಗಳನ್ನು, ಕೃತಕಾಲಂಕಾರ ಸಾಮಗ್ರಿಗಳನ್ನು, ಸೌಂದರ್ಯ ವರ್ಧಕಗಳನ್ನು ಹೇಗೆ ಉಪಯೋಗಿಸುತ್ತಿದ್ದ ಎಂಬ ವಿಷಯಕ್ಕೆ ಸಂಬಂಧಿಸಿತ್ತು. ವಸ್ತು ಸಂಗ್ರಹಾಲಯವೊಂದರಲ್ಲಿ ಇವನ್ನು ಪ್ರದರ್ಶಿಸಿದ್ದರು. ಅದರಿಂದ ನಮಗೆ ತಿಳಿಯದ ಹಲವು ವಿಚಾರಗಳು ಬೆಳಕಿಗೆ ಬಂದಿವೆ. ವಿವಿಧ ತರದ ಪ್ರಾಣಿ ಪಕ್ಷಿಗಳು ತಮ್ಮ ಪರಿಸರಕ್ಕೆ ಹೊಂದಿಕೊಂಡಿರುವಂತೆ ಸ್ವಾಭಾವಿಕವಾದ ಒಂದು ಸೌಂದರ್ಯವನ್ನು ಪಡೆದಿವೆ. ಆದರೆ ಮಾನವನು ನಾಗರಿಕನಾದಂತೆ, ನಿಸರ್ಗದಿಂದ, ಪರಿಸರದಿಂದ ದೂರದೂರ ಹೋಗಿ ಸ್ವಾಭಾವಿಕ ನೈಸರ್ಗಿಕ ಜೀವನವನ್ನು ತೊರೆದು ಕೃತಕ ಜೀವನವನ್ನು ಅನುಸರಿಸುತ್ತಿದ್ದಾನೆ. ಹಾಗಾಗಿ ಅವನಿಗೆ ಕೃತಕ ವಸ್ತುಗಳ ಅಗತ್ಯ ಜೀವನದ ಎಲ್ಲ ಹಂತಗಳಲ್ಲೂ ಕಂಡು ಒಂದು ಅವನ್ನು ಉಪಯೋಗಿಸಿಕೊಂಡು ಬಂದಿರುತ್ತಾನೆ. ತನ್ನ ರೂಪ ಸೌಂದರ್ಯದ ಕುರಿತೂ ಹಾಗೆಯೇ.

ಅಮೆರಿಕದ ರೆಡ್ ಇಂಡಿಯನ್ನರು ತಮ್ಮ ಸೌಂದರ್ಯವು ಹೆಚ್ಚುವುದು ಎಂಬ ಕಾರಣದಿಂದ ಮುಖಕ್ಕೆ ಬಣ್ಣ ಹಚ್ಚಿಕೊಳ್ಳುತ್ತಿದ್ದರು; ಅದೂ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವಿಧವಾಗಿ ಕಾಣಿಸಿಕೊಳ್ಳಲು. ಕೆಲವು ಗಿರಿವರ್ಗದ ಜನರು (tribes) ಮುಖಕ್ಕೂ ದೇಹಕ್ಕೂ ಪಚ್ಚೆ ಕೊಟ್ಟಿ (tattooing) ವಿವಿಧ ಚಿತ್ರಗಳನ್ನು, ರೂಪಗಳನ್ನು ಬರೆಸಿದಲ್ಲಿ ತಮ್ಮ ಸೌಂದರ್ಯ ಹೆಚ್ಚುವುದೆಂದು ತಿಳಿದು ಹಾಗೆ ಮಾಡುತ್ತಿದ್ದರು. ನಾಗರಿಕ ಜನರೂ ಕೆಲವರು ಈ ಪಚ್ಚೆಕೊಟ್ಟಿ ಕೊಳ್ಳುವ ಸಂಪ್ರದಾಯವನ್ನು ಅನುಸರಿಸುತ್ತಾರೆ. ಪ್ರತಿಯೊಬ್ಬ ಮಾನವನಿಗೂ ಅವನ ತಲೆಗೂದಲಿಗೆ ಸ್ವಾಭಾವಿಕವಾದ ಒಂದು ಬಣ್ಣವಿದ್ದರೂ ಅದರಿಂದ ಸಂತೃಪ್ತನಾಗದೆ ಬೇರೆ ಬೇರೆ ತರದ ಬಣ್ಣಗಳನ್ನು ತಲೆಗೆ ಹಚ್ಚಿಕೊಂಡು ವಿಹರಿಸುತ್ತಿರುವುದನ್ನು ಈಗ ನಾವು ಕಾಣುವಂತೆ ಹಿಂದೆಯೂ ಜನರು ಹಾಗೆ ಮಾಡುತ್ತಿದ್ದರು. ಮುದುಕರಾದವರು ತಮ್ಮ ಮುದಿತನವನ್ನು ಮುಚ್ಚಿಡಲು ತಲೆಗೂದಲು ಅಂದವಾಗಿ ಕಾಣುವಂತೆ ಕೇಶತೈಲಗಳನ್ನೋ, ಬಣ್ಣಗಳನ್ನೋ ಉಪಯೋಗಿಸುವುದು ಈಗ ಹೇಗೂ ರೂಢಿಯಲ್ಲಿರುವುದನ್ನು ನಾವು ಕಾಣುತ್ತೇವೆ. ಹಾಗೆಯೇ ಬಕ್ಕತಲೆಯುವರು ತಮ್ಮ ತಲೆಯು ಬೋಳಲ್ಲವೆಂದು ಇತರರಿಗೆ ತೋರಿಸಲು ಹಲವು ತರದ ಕೂದಲ ಕವಚಗಳನ್ನು (wigs) ಧರಿಸುವುದನ್ನು ಕೂಡಾ ನಾವು ಕಾಣತ್ತಲಿದ್ದೇವೆ. ಇವೆರಡೂ ಹಿಂದಿನಿಂದಲೂ ಅನುಸರಿಸಿಕೊಂಡು ಬಂದ ಪದ್ಧತಿಗಳಾಗಿವೆ.

ಕ್ರಿ.ಶ. ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಪ್ರಚಾರದಲ್ಲಿದ್ದ ಕೆಲವು ಸೌಂದರ್ಯ ಸಾಧನಗಳನ್ನು ಕಂಡಲ್ಲಿ ನಮಗೆ ವಿಸ್ಮಯವುಂಟಾಗುತ್ತದೆ. ಕಣ್ಣಿನ ಹುಬ್ಬುಗಳು ನಷ್ಟವಾದವರು ಇಲಿಯ ರೋಮದಿಂದ ಮಾಡಿ ಹುಬ್ಬುಗಳನ್ನು ಧರಿಸುತ್ತಿದ್ದರು. ಕೆಲವರು ತಮ್ಮ ಹಲ್ಲುಗಳು ಹುಳ ಹಿಡಿದು ಹಾಳಾದಲ್ಲಿ, ಮುರಿದಲ್ಲಿ ಬೆಳ್ಳಿಯ, ಚಿನ್ನದ ಹಲ್ಲುಗಳನ್ನು ಕೃತಕವಾಗಿ ಜೋಡಿಸಿರುವುದನ್ನು ನಾವು ಕಾಣುತ್ತಿರುತ್ತೇವೆ. ಅದೂ ಈಗಿನ ವೈದ್ಯಕೀಯ ವಿಜ್ಞಾನದ ಪ್ರಗತಿಯಿಂದ ಕೃತಕ ದಂತಗಳನ್ನೇ ಇರಿಸಿಕೊಳ್ಳುವ ವ್ಯಕ್ತಿಗಳನ್ನು

ನಾವು ಕಾಣುತ್ತೇವೆ. ಆದರೆ ಹಿಂದಿನ ಜನರು ಹಿಪ್ಪೊಪ್ಪೊಟಮಸ್ ನದಾದೆಯಿಂದ ಮಾಡಿದ ಕೃತಕ ಹಲ್ಲುಗಳನ್ನು ಧರಿಸುತ್ತಿದ್ದರು. ಹಾಗೆಯೇ ಕೃತಕ ತಲೆಗೂದಲ ಕವಚವನ್ನು ಈಗಲೀಗ ಸ್ವಾಭಾವಿಕ ಮಾನವರ ಕೂದಲನ್ನೇ ಉಪಯೋಗಿಸಿ ರಚಿಸುತ್ತಿದ್ದರೆ ಹಿಂದಿನ ಆ ಕಾಲದಲ್ಲಿ ಕುದುರೆಯ ಬಾಲದ ರೋಮವನ್ನು ಉಪಯೋಗಿಸಿ ತಯಾರಿಸುತ್ತಿದ್ದರೆಂದು ತಿಳಿದುಬಂದಿದೆ. ಇವನ್ನು ಸ್ತ್ರೀ ಪುರುಷರೂ ತಮ್ಮ ಸೌಂದರ್ಯ ಸಾಧನವಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಹಾಗೆಯೇ ಹಲ್ಲುಗಳೆಲ್ಲಾ ಹೋಗಿ ಗುಳಿ ಬಿದ್ದ ಕೆನ್ನೆಗಳು ತುಂಬಿ ಸರಿ ಕಾಣುವಂತೆ ಮಾಡುವುದು ಹೇಗೆ? ಈಗ ದಂತ ವೈದ್ಯರಿದ್ದಲ್ಲಿ ಹೋಗಿ ಕೃತಕ ಹಲ್ಲುಗಳ ಸೆಟ್ ಪಡೆದು ಧರಿಸಿದಲ್ಲಿ ಅದಷ್ಟು ಗುಳಿ ಮಾಯವಾಗಿ ಬಿಡುತ್ತದೆ. ಆದರೆ ಹಿಂದಿನ ಕಾಲದಲ್ಲಿ ಅದಕ್ಕೋಸ್ಕರವಾಗಿಯೇ ತಯಾರಿಸಿದ ಉಬ್ಬು ಸಾಧನ (pads) ಗಳನ್ನು ಉಪಯೋಗಿಸುತ್ತಿದ್ದರಂತೆ. ಇನ್ನು ಮುಖದಲ್ಲಿ ಸಿಡುಬು ರೋಗದಿಂದುಂಟಾದ ಕಲೆಗಳಿದ್ದರೆ ಚಂದವೇ? ಈಗಲಾದರೆ ಪ್ಲಾಸ್ಟಿಕ್ ಸರ್ಜರಿಯಿಂದ ಮುಖದ ಗಾಯಗಳೆಲ್ಲವೂ ಮಾಸುವಂತೆ ಮಾಡಬಹುದು. ಆದರೆ ಹಿಂದೆ? ಲಂಡನ್ನಿನಲ್ಲಿ ಆಗ ಸಿಡುಬು ರೋಗವು ಅಧಿಕವಾಗಿ ಜನರನ್ನು ಬಾಧಿಸುತ್ತಿತ್ತೆಂದು ತಿಳಿದುಬರುತ್ತದೆ. ಲಂಡನ್ನಿನಲ್ಲಿ ಮಾತ್ರವಲ್ಲ ಇಡೀ ಯುರೋಪಿನಲ್ಲೆಂದರೂ ಹೆಚ್ಚಾಗದು. ಸುಮಾರು ಕ್ರಿ.ಶ. ೧೭೫೦ರ ಕಾಲಕ್ಕೆ ಇಂಗ್ಲೆಂಡಿನಲ್ಲಿ ಸಾಧಾರಣ ಐದು ಮೈಲು ಚದರ ಪ್ರದೇಶದಲ್ಲಿ ಸುಮಾರು ಕಡಿಮೆ ೭೫೦,೦೦೦ ಸಂಖ್ಯೆಯಲ್ಲಿ ಜನರು ಮನೆ ಕಟ್ಟಿ ವಾಸಿಸುತ್ತಿದ್ದರು. ಈಗಿನಂತೆ ನಲ್ಲಿ ನೀರಿನ ವ್ಯವಸ್ಥೆಯಾಗಲೀ, ವಿದ್ಯುದ್ದೀಪದ ವ್ಯವಸ್ಥೆಯಾಗಲೀ ಇಲ್ಲದ ಆ ಕಾಲದಲ್ಲಿ ನೀರಿನ ಅಸೌಕರ್ಯ ಹೆಚ್ಚಾಗಿತ್ತು. ಶ್ರೀಮಂತರು, ಬಡವರು ಎಂಬ ಭೇದ ಅತಿಯಾಗಿತ್ತು. ಹೆಚ್ಚಿನವರು ನೀರಿನ ಆಶ್ರಯವಿಲ್ಲದೆ ಜೀವಿಸಬೇಕಾಗಿತ್ತು. ಆಗ ಎಲ್ಲಾ ತರದ ರೋಗರುಜಿನಗಳೂ ಅವರಲ್ಲಿ ತಾಂಡವವಾಡುತ್ತಿತ್ತೆಂಬುದರಲ್ಲಿ ಆಶ್ಚರ್ಯವಿಲ್ಲ. ಭಾರತದ ಜನರಲ್ಲಿದ್ದಂತೆ ಸ್ನಾನ ಮಾಡುವ ಅಭ್ಯಾಸವೇ ಹೆಚ್ಚಿನ ಇಂಗ್ಲೆಂಡಿನ ಜನರಿಗೆ ಇದ್ದಿರಲಿಲ್ಲ. ಕಾರಣ ಅಲ್ಲಿನ ಚಳಿ ಹವೆಯೂ ಆಗಿದ್ದಿರಬಹುದು. ಶ್ರೀಮಂತರಲ್ಲೇಕೆ ಕೆಲವು ರಾಜರು ಇಂಗ್ಲೆಂಡಿನಲ್ಲಿ ಹುಟ್ಟಿದ ಕೂಡಲೇ ಬಿಸಿ ನೀರಿನ ಸ್ನಾನ ಅನುಭವಿಸಿದ್ದಾರೇನೋ! ಆ ಬಳಿಕ ಜೀವನಪೂರ್ತಿ ಸ್ನಾನವನ್ನೇ ಮಾಡದವರಿದ್ದರೆಂಬುದಾಗಿ ತಿಳಿದುಬರುತ್ತದೆ. ಹಾಗಾಗಿ ಸಿಡುಬು ರೋಗವು ಉಚ್ಚ ನೀಚ ಎಂಬ ಭೇದಭಾವವಿಲ್ಲದೆ ಎಲ್ಲರನ್ನೂ ಬಲಿ ತೆಗೆದುಕೊಳ್ಳುತ್ತಿತ್ತು. ಅಳಿದುಳಿದವರು ಜೀವಮಾನಪೂರ್ತಿ ಮುಖದಲ್ಲಿ ಸಿಡುಬಿನಿಂದಾದ ಕಲೆಗಳನ್ನು ಹೊತ್ತು ತಿರುಗಾಡಬೇಕಾಗಿತ್ತು. ಸಿಡುಬು ರೋಗವೊಂದರಿಂದಲೇ ಶೇಕಡಾ ೧೦ ಮಂದಿ ಸಾವನ್ನಪ್ಪುತ್ತಿದ್ದರಂತೆ. ಹೀಗಾಗಿ ಸಿಡುಬಿನ ಕಲೆಗಳನ್ನು ಮುಚ್ಚಲು ಸಿಲ್ಕಿನ ಚೂರುಗಳನ್ನು ಉಪಯೋಗಿಸುತ್ತಿದ್ದರಂತೆ. ಆಮೇಲೆ ಅದರ ಮೇಲೆ ಮುಖಕ್ಕೆ ಪೌಡರು ಹಚ್ಚಿ ಕಲೆ ಕಾಣದಂತೆ ಮಾಡುತ್ತಿದ್ದರಂತೆ. ಹಾಗೆಯೇ ಆಧುನಿಕ ಶೃಂಗಾರ ಸಾಧನಗಳಷ್ಟೇ ನವನವೀನವಾದ ಕೆಲವು ಸಾಮಗ್ರಿಗಳನ್ನು ಪ್ರದರ್ಶಿಸಲಾಗಿತ್ತೆಂದು ತಿಳಿದುಬಂದಿದೆ. ಅವೆಲ್ಲವೂ ಹೆಚ್ಚಾಗಿ ಬಾಲಕ ಬಾಲಕಿಯರನ್ನು ಯೌವನಭರಿತ ತರುಣ ತರುಣಿಯರಂತೆ ಕಾಣುವುದಕ್ಕಾಗಿಯೂ, ಮುದಿತನಕ್ಕೆ ಪದಾರ್ಪಣೆ ಮಾಡಿದವರನ್ನು ಮುಖ್ಯವಾಗಿ ಹೆಂಗಸರನ್ನು ಅವರ ಮಕ್ಕಳಂತೆ ಯುವತಿಯರನ್ನಾಗಿ ಮಾಡುವುದಕ್ಕಾಗಿಯೂ ಉಪಯೋಗಿಸಲು ಅನುಕೂಲವಾದ ಸೌಂದರ್ಯ ಸಾಧನಗಳಾಗಿದ್ದವು. *

# ಮತ್ತೆ ಮತ್ತೆ ಕದತಟ್ಟುವ ಕಾಳ ಜ್ವರ

*ಗೋಪಾಲ ಆಶ್ರಿತ*

ಇದೊಂದು ವಿಚಿತ್ರ ರೋಗ. ಯಾವಾಗ, ಎಲ್ಲಿ, ಎಂಥವರ ಮೇಲೆ ದಾಳಿ ಮಾಡುತ್ತದೆಂಬುದು ಗುರುತಿಸಲಸಾಧ್ಯ. ಒಂದು ಜನ ಸಮೂಹದ ಮೇಲೆ ಇದರ ದಾಳಿಯಾಗಿ, ನೂರಾರು ಜನರು ಸತ್ತು, ಇದೊಂದು ಪಿಡುಗೆಂಬ ವಿಷಯ ಎಲ್ಲೆಡೆ ಹರಡಿದಾಗ, ಆರೋಗ್ಯ ಇಲಾಖೆಯವರು ಔಷಧೋಪಚಾರ ಪ್ರಾರಂಭಿಸುತ್ತಾರೆ.

ವಿಶ್ವ ಆರೋಗ್ಯ ಸಂಸ್ಥೆ(W.H.O)ಯ ಅಂದಾಜಿನ ಪ್ರಕಾರ ಪ್ರತಿ ವರ್ಷ ವಿಶ್ವದಾದ್ಯಂತ ಸುಮಾರು ನಾಲ್ಕು ಲಕ್ಷ ಜನ, ಕಾಳ ಜ್ವರ (ವಿಸೆರಾಲ್ ಲೈರೆ ಮ್ಯಾನಿಯಾಸಿಸ್ ಎಂಬುದು ಇದರ ವೈದ್ಯಕೀಯ ಹೆಸರು)ದಿಂದ ಬಳಲುತ್ತಾರೆ. ಭಾರತದಲ್ಲಿ ಜಮ್ಮು ಮತ್ತು ಕಾಶ್ಮೀರ, ಗುಜರಾತ ಮತ್ತು ತಮಿಳನಾಡು ರಾಜ್ಯಗಳಲ್ಲಿ ಈ ರೋಗದಿಂದ ಬಳಲಿದವರ ಉದಾಹರಣೆಗಳಿವೆ. ಆದರೂ ಈ ರೋಗ ಹೆಚ್ಚಾಗಿ ಬಿಹಾರಿನ ಗ್ರಾಮಗಳಲ್ಲಿನ ಜನರ ಮೇಲೆ ಆಗಾಗ ಪಿಡುಗಿನಂತೆ ದಾಳಿ ಮಾಡುತ್ತಿರುತ್ತದೆ. 1984 ಮತ್ತು 1985ರ ಅವಧಿಯಲ್ಲಿ ಬಿಹಾರ ರಾಜ್ಯದಲ್ಲಿ ಸುಮಾರು 25000 ಜನರು ಈ ಜ್ವರದಿಂದ ಬಳಲಿದರಲ್ಲದೆ, ಒಂದು ನೂರಕ್ಕಿಂತ ಹೆಚ್ಚು ಜನರು ಈ ರೋಗಕ್ಕೆ ಬಲಿಯಾದರು. ಈ ಜ್ವರದಿಂದ ಬಳಲುವವರು ಪಶ್ಚಿಮ ಬಂಗಾಳ, ಉತ್ತರ ಪ್ರದೇಶ ಮತ್ತು ಬಿಹಾರದ ಗಡಿಯಲ್ಲಿರುವ ನೇಪಾಳದ ಕೆಲವು ಗ್ರಾಮಗಳಲ್ಲೂ ಇದ್ದಾರೆಂದು ತಿಳಿದು ಬಂದಿದೆ.

ಅತಿ ಸೂಕ್ಷ್ಮವಾದ ಪರೋಪಜೀವಿ (Parasite) ಯೊಂದರಿಂದ ಈ ರೋಗ ಹುಟ್ಟಿಕೊಳ್ಳುತ್ತದೆ. ಹೊಲಸಿನಲ್ಲಿರುವ ಒಂದು ಜಾತಿಯ ಹೆಣ್ಣು ಮರಳು ನೊಣ (Sand flies) ಗಳು ಈ ರೋಗವನ್ನು ಹಬ್ಬಿಸುತ್ತವೆ. ಈ ಸೂಕ್ಷ್ಮಜೀವಿಗಳು ಮೂಳೆಯ ಪೊಳ್ಳು ಭಾಗ ಮತ್ತು ಪ್ರಮುಖ ಅಂಗಗಳಾದ ಕರುಳು (Liver) ಮತ್ತು ತೊರಳೆ (Spleen)ಗಳ ಮೇಲೆ ದಾಳಿ ಮಾಡಿ ಆಗಾಗ ಜ್ವರ ಬರುವಂತೆ ಮಾಡುತ್ತವಲ್ಲದೆ, ಚಳಿ ಜ್ವರ, ನಿಶ್ಶಕ್ತಿ, ಕೆಮ್ಮು ಮತ್ತು ಅತಿಬೇಧಿಯಿಂದ ಬಳಲುವಂತೆ ಮಾಡುತ್ತವೆ. ರೋಗಿಯ ಕೂದಲು ಒರಟಾಗುತ್ತವಲ್ಲದೆ, ಅವನ ಚರ್ಮ ಕೂಡಾ ಒರಟಾಗುತ್ತದೆ. ಅವನ ಕೈಕಾಲುಗಳು ಹಾಗೂ ಕೆಳ ಹೊಟ್ಟೆ ಕಪ್ಪಾಗುತ್ತದೆ. ಎಂತಲೇ ಈ ಜ್ವರಕ್ಕೆ ಕಾಳ ಜ್ವರ (ಕಾಲಾ ಅಝೂರ) ಎಂದು ಹೆಸರಿಡಲಾಗಿದೆ.

ಟೈಫಾಯಿಡ್, ಮಲೇರಿಯಾ ಮತ್ತು ಯಕೃತ್ತಿನ ರೋಗದ ಲಕ್ಷಣಗಳೇ ಈ ರೋಗದಲ್ಲಿ ಕಾಣುವುದರಿಂದ ಕಾಳಜ್ವರವನ್ನು ಗುರುತಿಸುವುದು ಸುಲಭವಲ್ಲ. ಮೂಳೆಯ ಪೊಳ್ಳು ಭಾಗದಲ್ಲಿ (ಸುಮಾರು 70 %ರಷ್ಟು)ರುವ ಈ ಸೂಕ್ಷ್ಮಜೀವಿಗಳನ್ನು ಪರೀಕ್ಷಿಸುವ ಸೌಲಭ್ಯ ಕೆಲವೇ ಆಸ್ಪತ್ರೆಗಳಲ್ಲುಂಟು.

ಈ ಜ್ವರದಿಂದ ಬಳಲುವವರು ಕೂಡಲೇ ಚಿಕಿತ್ಸೆ ಪಡೆಯದಿದ್ದರೆ, ಇದು ಮಾರಕವಾಗಬಹುದು. 19ನೆಯ ಶತಮಾನದಲ್ಲಿ ಇದರ ಒಂದು ಪಿಡುಗಿಗೆ 75,000ಕ್ಕೂ ಹೆಚ್ಚು ಜನರು ಬಲಿಯಾದುದುಂಟು. ರೋಗಿಗಳು ದಿನೇ ದಿನೇ ಅಶಕ್ತರಾಗುತ್ತ ಹೋಗಿ ಕೊನೆಗೆ ಸಾವನ್ನಪ್ಪುತ್ತಾರೆ. ಕಾಳಜ್ವರದಿಂದ ಎಲ್ಲರೂ ಬಳಲುತ್ತಾರೆ. ಆದರೆ ಪೌಷ್ಟಿಕ ಆಹಾರ ದೊರೆಯದ ಬಡ ಜನರೇ ಇದಕ್ಕೆ ಹೆಚ್ಚಾಗಿ ಬಲಿಯಾಗುತ್ತಾರೆ:

ಆಧುನಿಕ ವೈದ್ಯಕೀಯ ಬೆಳವಣಿಗೆಯಿಂದಾಗಿ ಇಂದು ಕಾಳ ಜ್ವರ ಅಷ್ಟು ಮಾರಕವಾಗಿ ಉಳಿದಿಲ್ಲ. ಸೋಡಿಯಮ್ ಸ್ಟಿಬೊ ಗ್ಲುಕೊನೆಟ್ ಇಂಜೆಕ್ಷನ್ನುಗಳಿಂದ ರೋಗಿ ಗುಣ ಹೊಂದಬಹುದು. ಆದರೆ ಈ ರೋಗ ಎರಡರಿಂದ ಐದು ವರ್ಷಗಳ ಅವಧಿಯಲ್ಲಿ ಮರುಕಳಿಸುವ ಸಾಧ್ಯತೆಯುಂಟು. ಕಾಳಜ್ವರ ನಂತರ ಚರ್ಮದ ಲಿಷ್ಮನ್ ರೋಗ (Post kala Azar dermal Leishmaniasis-PKDL) ದಿಂದ ದೇಹದ ಮೇಲೆ ಬಿಳಿ ಕಲೆಗಳು ಕಾಣಿಸಿಕೊಳ್ಳುತ್ತವೆ. ಕ್ರಮೇಣ ಈ ಬಿಳಿ ಕಲೆಗಳು ಕಡಲೆ ಕಾಳಿನ ಗಾತ್ರದ ಗುಳ್ಳೆಗಳಾಗುತ್ತವೆ. ಇದನ್ನು ಗುಣಪಡಿಸಲು ಆರು ತಿಂಗಳಿನಿಂದ ಎರಡು ವರ್ಷ ಹಿಡಿಯುತ್ತದೆ. ಈ ಅವಧಿಯಲ್ಲಿ ರೋಗಿಗಳಿಂದ ರೋಗ ಹರಡುವ ಸಾಧ್ಯತೆ ಹೆಚ್ಚಿರುತ್ತದೆ.

ಈ ರೋಗದ ಅನೇಕ ತೊಡಕುಗಳು ಅಗಾಧ ರೀತಿಯಲ್ಲಿ ಉಲ್ಬಣಿಸಲು ನಮ್ಮ ಆರೋಗ್ಯ ಇಲಾಖೆಯ ನಿರ್ಲಕ್ಷ್ಯವೇ ಕಾರಣ. ರೋಗವನ್ನು ಗುರುತಿಸಿ ಗುಣ ಪಡಿಸಲು ಅನುಕೂಲಗಳೇ ಇರುವುದಿಲ್ಲ. ಆಸ್ಪತ್ರೆಗಳಲ್ಲಿ ಔಷಧಗಳ ಕೊರತೆ, ಕಳಪೆ ದರ್ಜೆಯ ಮೋಸದ ಗುಳಿಗೆಗಳು ಹಾಗೂ ವೈದ್ಯರ ಅಲಕ್ಷ್ಯದಿಂದಾಗಿ ಅಷ್ಟ-ಸುಚಿ (Quacks) ವೈದ್ಯರಿಗೆ ಅನುಕೂಲವಾಗಿದೆ. ''ಬಿಹಾರದಲ್ಲಿ ಪ್ರತಿವರ್ಷ ಬೇರೆ ಬೇರೆ ಕಾರಣಗಳಿಂದ ಸಾವಿರಾರು ಜನರು ಸಾಯುತ್ತಾರೆ. ಅದರಲ್ಲಿ ಕೆಲವರು ಮಾತ್ರ ಕಾಳಜ್ವರದಿಂದ ಸಾಯುತ್ತಾರೆ. ಅದಕ್ಕೆ ಇಷ್ಟೇಕೆ ಗಲಾಟೆ ಮಾಡಬೇಕು?'' ಎಂಬುದೇ ಆರೋಗ್ಯ ಇಲಾಖೆಯ ಅಧಿಕಾರಿಗಳ ಹೇಳಿಕೆ.

ಅಗ್ಗದ ಹಾಗೂ ಪರಿಣಾಮಕಾರಿ ಲಸಿಕೆಗಳು ದೊರೆತಲ್ಲಿ ಈ ರೋಗದಿಂದ ಮುಕ್ತರಾಗಲು ಸಾಧ್ಯವಿದೆ. ಪ್ರಯೋಗಾಲಯಗಳಲ್ಲಿ ಇಂಥ ಲಸಿಕೆಯನ್ನು ತಯಾರಿಸಲು ವಿಶ್ವದಾದ್ಯಂತ ಪ್ರಯತ್ನ ನಡೆದಿದ್ದರೂ ಇನ್ನೂವರೆಗೆ ಈ ದಿಶೆಯಲ್ಲಿ ಹೆಚ್ಚಿನ ಪ್ರಗತಿಯಾಗಿಲ್ಲ. ಆದರೆ ಇದರ ಬದಲು ಒಂದು ಸುಲಭ ಹಾಗೂ ಪರಿಣಾಮಕಾರಿ ಉಪಾಯವುಂಟು. 1950ರ ದಶಕದಲ್ಲಿ, ಬಿಹಾರಿನ ಗ್ರಾಮಗಳಲ್ಲೆಲ್ಲ ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಯೋಜನೆಯನ್ವಯ ಡಿ.ಡಿ.ಟಿ. ಸಿಂಪಡಿಸಿದಾಗ ಈ ರೋಗ ದೂರವಾಗಿತ್ತು. 1960ರ ದಶಕದ ಮಧ್ಯ ಭಾಗದಲ್ಲಿ ಬಿಹಾರ, ಮಲೇರಿಯಾ ಮುಕ್ತವೆಂದು ಘೋಷಿಸಿದಾಗ, ಡಿ.ಡಿ.ಟಿ. ಸಿಂಪಡಿಸುವದನ್ನು ನಿಲ್ಲಿಸಲಾಯಿತು. ನಂತರದ ವರ್ಷಗಳಲ್ಲಿ ಮಲೇರಿಯಾ ಮತ್ತೆ ಕಾಣಿಸಿಕೊಳ್ಳಲಿಲ್ಲ. ಆದರೆ ಮರಳು ನೊಣ (Sand flies) ಮರಳಿದವು. ಜೊತೆಯಲ್ಲಿಯೇ (1977ರಲ್ಲಿ) ಬಂದ ಕಾಳ ಜ್ವರ ಪಿಡುಗಿನ ಭಾರೀ ಸ್ವರೂಪದ್ದಾಗಿತ್ತು. ಸರಕಾರದ ವಲಯದ ಹೇಳಿಕೆಯ ಪ್ರಕಾರ ನಾಲ್ಕು ವರ್ಷಗಳಲ್ಲಿ ಸುಮಾರು ಒಂದು ಲಕ್ಷ ಜನರಿಗೆ ಈ ರೋಗದ ಸೋಂಕು ತಗುಲಿತು; 407 ಜನರು ಮೃತರಾದರು. ಪಿಡುಗಿನ ಹಾವಳಿ ಅವಧಿಯಲ್ಲಿ ವೃತ್ತಪತ್ರಿಕೆಗಳ ಟೀಕೆ ಮತ್ತು ಸಂಸತ್ತಿನಲ್ಲಿನ ಟೀಕೆಗೆ ಮಣಿದ ಬಿಹಾರ ಸರಕಾರ ರೋಗಗ್ರಸ್ತ ಭಾಗಗಳಲ್ಲಿ ಡಿ.ಡಿ.ಟಿ ಸಿಂಪಡಿಸುವ ಕೆಲಸ ಮಾಡಿತು. ಆದರೆ ರೋಗ ಶಮನವಾಗುತ್ತಲೇ

ಸಿಂಪಡಿಸುವ ಕಾರ್ಯವೂ ನಿಂತಿತು.

ಸರಕಾರದ ಈ ಧೋರಣೆ ಈಗಲೂ ಮುಂದುವರೆದಿದೆ. 1983ರಲ್ಲಿ ಚಕಾತ್‌ದಲ್ಲಿ ಸುಮಾರು 60 ಜನರು ಕಾಳಜ್ವರದಿಂದ ಮೃತರಾದರೆಂಬ ವರದಿ ಬಂದ ನಂತರವೇ ಆ ಗ್ರಾಮದಲ್ಲಿ ಡಿ.ಡಿ.ಟಿ ಸಿಂಪಡಿಸಲಾಯಿತು. ಅದೇ ರೀತಿ 1984ರಲ್ಲಿ ಸರಬರಪುರ ಎಂಬಲ್ಲಿ ಕಾಳಜ್ವರದ ದಾಳಿ ಅಪಾಯದ ಮಟ್ಟ ತಲುಪುತ್ತಿದ್ದಂತೆ, ಹತಾಶರಾದ ಹಳ್ಳಿಗರು ಆರೋಗ್ಯ ಇಲಾಖೆಯ ಅಧಿಕಾರಿಗಳನ್ನು ಘೇರಾವ್ ಮಾಡಿದಾಗ, ಅಲ್ಲಿಯ ಮನೆಗಳಲ್ಲಿ ಡಿ.ಡಿ.ಟಿ. ಸಿಂಪಡಿಸುವ ಕಾರ್ಯ ಪ್ರಾರಂಭವಾಯಿತು.

ಈ ರೋಗವನ್ನು ಆಧುನಿಕ ರೀತಿಯಲ್ಲಿ ಗುರುತಿಸಬೇಕು. ಮತ್ತು ಚಿಕಿತ್ಸೆಗೆ ಬೇಕಾಗುವ ಎಲ್ಲ ಸಾಧನಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಒದಗಿಸಬೇಕೆಂದು ತಜ್ಞರು ಸೂಚಿಸಿದ್ದಾರೆ. ಸೋಡಿಯಮ್ ಸ್ಟಿಬೊಗ್ಲುಕೊನೆಟ್ ತೀಕ್ಷ್ಣತೆ ಹೆಚ್ಚಿಸಿ ಚುಚ್ಚುಮದ್ದು ಕೊಟ್ಟರೆ, ಬಹಳ ಅವಧಿಯವರೆಗೆ ರೋಗ ಮರುಕಳಿಸುವುದನ್ನು ತಡೆಯಬಹುದೆಂದು ತಜ್ಞರು ಬಿಹಾರದ ಡಾಕ್ಟರುಗಳಿಗೆ ತಿಳಿಸಿ ಹೇಳಿದ್ದಾರೆ. ಈ ರೋಗ ಹರಡುವ ಗ್ರಾಮಗಳಿಗೆ ವೈದ್ಯರ ತಂಡಗಳು ಆಗಾಗ ಹೋಗಿ, ರೋಗ ಹರಡುವ ಮೊದಲೇ ಗುರುತಿಸಿ ಚಿಕಿತ್ಸೆ ನಡೆಸಲು ಸಾಧ್ಯ. ಗ್ರಾಮಸ್ಥರು ಕೂಡಾ ವೈದ್ಯರ ಸಲಹೆಯಂತೆ, ತಮ್ಮ ಮನೆಗಳನ್ನು, ಕೊಟ್ಟಿಗೆಗಳನ್ನು ಸ್ವಚ್ಛವಾಗಿರಿಸುವುದರಿಂದ ಮರಳು ನೊಣಗಳ ಸಂಖ್ಯೆ ಹೆಚ್ಚುವುದನ್ನು ತಡೆಯಬಹುದು.

ಕಾಳಜ್ವರವನ್ನು ನಿಯಂತ್ರಿಸುವುದು ಸುಲಭದ ಕೆಲಸವಲ್ಲ. ಆದರೆ ನಿಸ್ಸಹಾಯಕ ಹಾಗೂ ಬಡನಾಗರಿಕರ ರಕ್ಷಣೆಯೂ ಸರಕಾರದ ಹೊಣೆಯಾಗಿದೆ. ಈ ದಿಶೆಯಲ್ಲಿ ಅಲಕ್ಷ್ಯ ಮಾಡದೆ ಎಲ್ಲ ವೈದ್ಯಕೀಯ ಸೌಕರ್ಯವೊದಗಿಸಿ, ಈ ರೋಗವನ್ನು ಹೊಡೆದೋಡಿಸಲು ಆರೋಗ್ಯ ಇಲಾಖೆಯವರು ಶ್ರಮಿಸಬೇಕು. ಇಲ್ಲದಿದ್ದರೆ ಈ ಮಾರಕ ರೋಗ ಇನ್ನಷ್ಟು ಜನರ ಬಲಿ ತಗೆದುಕೊಳ್ಳುವುದರಲ್ಲಿ ಸಂದೇಹವಿಲ್ಲ.

*

## ಮಡಿಲ ಮಗು

ಒಬ್ಬ ಸಿನಿಮಾ ಅಭಿನೇತ್ರಿ ಮುದುಕಿಯಾಗುತ್ತಿದ್ದಾಗ ಅವಳಿಗೆ ತಿರುಗಾಡಿಬರುವ ಮನಸ್ಸಾಯಿತು. ಹಾಗೆ ಹೋಗುವಾಗ ಒಂದು ಚಿಕ್ಕ ಊರಿನಲ್ಲಿ ಅವಳು ಕಾರು ನಿಲ್ಲಿಸಿದಳು. ಆ ಊರಿನ ನಿವಾಸಿಗಳು ಅವಳಿಗೆ ಸನ್ಮಾನ ಏರ್ಪಡಿಸಿದರು. ಆ ಸನ್ಮಾನ ಸಮಾರಂಭದಲ್ಲಿ ಅವಳು ಮಾತನಾಡುತ್ತಿರುವಾಗ "ನನಗೆ ಇಷ್ಟು ವರ್ಷಗಳಾದರೂ ನೀವೆಲ್ಲರೂ ನನ್ನನ್ನು ಇಷ್ಟೊಂದು ಇಷ್ಟಪಡುತ್ತಿರುವುದು ನನಗೆ ತುಂಬ ಸಂತೋಷದ ವಿಷಯ. ನಾನೀಗ ಇನ್ನು ಕೆಲವೇ ದಿನಗಳಲ್ಲಿ ನನ್ನ ಮೂವತ್ತೈದನೇ ವರ್ಷವನ್ನು ದಾಟುತ್ತಿದ್ದೇನೆ" ಎಂದಳು.

ಸಭಿಕರಲ್ಲಿ ಸುಮಾರು ನಲವತ್ತೈದು ವರ್ಷದವನೊಬ್ಬ ಎದ್ದುನಿಂತು "ನೀವು ಮೂವತ್ತೈದನೇ ವರ್ಷ ದಾಟುತ್ತಿದ್ದೇನೆ ಎಂದಿರಲ್ಲವೇ ?" ಎಂದು ಕೇಳಿದ.

"ಹೌದು".

"ನಿಮಗೆ ಆ ಒಂದು ಸಿನಿಮಾ ನೆನಪಿರಬಹುದಲ್ಲವೆ ? ಆ ಸಿನಿಮಾದಲ್ಲಿ ನೀವು ಒಂದು ವಿಧವೆಯ ಪಾತ್ರ ಮಾಡಿದ್ದಿರಿ. ನಿಮ್ಮ ಮಡಿಲಲ್ಲಿ ಯಾವಾಗಲೂ ಒಂದು ಮಗು ಇರುತ್ತಿತ್ತು".

"ಹೌದು ನನಪಿದೆ".

"ಆ ಮಡಿಲ ಮಗುವೇ ನಾನು".

● **ಕೆ. ಶಾಂತಾಮಣಿ.**
(ಸಾರಿಕಾದಿಂದ)

# ಬೈಜಾಂಟಿಯಮ್

ಸರಿಯುತ್ತಿವೆ ಹಿಂದೆ ಹಗಲಿನ ಅಶುದ್ಧ ಪ್ರತಿಮೆಗಳು;
ನಿದ್ರಿಸಿದ್ದಾರೆ ಚಕ್ರವರ್ತಿಯ ಮತ್ತ ಸೈನಿಕರು;
ಇರುಳ ದನಿಯನುರಣನ ಮೆಲ್ಲಮೆಲ್ಲಗೆ ಅಳಿದು;
ದೊಡ್ಡ ಚರ್ಚಿನ ಗಂಟೆ ಬಡಿದು ಗಾಳಿಯಲೀಗ
ರಾತ್ರಿಂಚರರ ಹಾಡು: ಚಿಕ್ಕೆಯದೋ ಚಂದ್ರನದೋ
ಹಚ್ಚಿಟ್ಟ ಧವಳಗುಮ್ಮಟ ತಿರಸ್ಕರಿಸುತಿದೆ ಮರ್ತ್ಯನ ಸಮಸ್ತವನ್ನೂ,
ಮರ್ತ್ಯ ಬಾಳಿನ ಎಲ್ಲ ಸಂಕೀರ್ಣತೆಗಳನ್ನು
ಮರ್ತ್ಯ ಧಮನಿಗಳಲ್ಲಿ ಕುದಿದ ಆವೇಶ ರೊಚ್ಚೆ ಕೆರಳುಗಳನ್ನು.

ತುಯ್ಯುತಿದೆ ಕಣ್ಣಮುಂದೊಂದು ಪ್ರತಿಮೆ, ಮನುಷ್ಯನೊ ನೆರಳೊ,
ನೆರಳೆನ್ನುವುದೆ ಸರಿ, ನೆರಳಿಗಿಂತಲು ಪ್ರತಿಮೆ ಎಂದರಿನ್ನೂ ಸರಿ;
ಮಮ್ಮಿವಸ್ತ್ರದಲಿ ಹುಗಿದಿಟ್ಟ ಅಧೋಲೋಕದ ಆತ್ಮ
ಸುತ್ತಬೇಕಾದ ಪಥ ಬಿಚ್ಚಬಹುದು;
ಉಸಿರಿರದ ತೇವವಿಲ್ಲದ ಬಾಯಿಯೊಂದು
ಉಸಿರುಗಟ್ಟಿದ ಬಾಯಿಗಳ ಕರಸಬಹುದು;
ಅತಿಮಾನುಷಕ್ಕೆ ಉಘೇ, ಎನ್ನುವವ ನಾನು;
ಬಾಳಿನಲ್ಲಿನ ಸಾವು, ಸಾವಿನಲ್ಲಿನ ಬಾಳು ಎನ್ನುವೆ ಅದನ್ನು.

ಇದು ಪವಾಡವೆ, ಹಕ್ಕಿಯೆ, ಹೊನ್ನಿನಲಿ ಕೊರೆದ ಕುಶಲ ಕೈಕಸುಬೆ?
ಹಕ್ಕಿಗಿಂತ, ಹಸ್ತಕೌಶಲಕ್ಕಿಂತ ಇದು ದಿಟ ಪವಾಡವೇ.
ನಕ್ಷತ್ರ ದೀಪ ಚಿನ್ನದ ಕೊಂಬೆ ಮೇಲೆ ಇದು ನೆಟ್ಟು ನಿಲ್ಲಿಸಿದ್ದು,
ಅಧೋಲೋಕದ ಹುಂಜಗಳ ಹಾಗೆ ಕೊರಳೆತ್ತಿ ಕೂಗಬಲ್ಲದ್ದು.

ಚಂದ್ರಕಾಂತಿಯು ತಿವಿತ ಕುದ್ದೀಪ್ರವಾಗಿ ಇದು ಮೂದಲಿಸೀತು ಕೂಗಿ
ನಿಜದ ಹಕ್ಕಿಗಳನ್ನು ಹೂವಿನೆಸುಳುಗಳನ್ನು
ರಕ್ತದ್ದೊ ರೊಚ್ಚೆಯದೊ ಎಲ್ಲ ಗೋಜಲುಗಳನ್ನು
ಪರಿವರ್ತನೆಯೆ ಇದರ ಲೋಹವೈಭವದಲ್ಲಿ ಬೀಗಿ.

ಚಕ್ರವರ್ತಿಯ ಸೌಧದ ನೃತ್ಯದಂಗಣದಲ್ಲಿ
ಅರಣೆ ಉದ್ದೀಪಿಸದ, ಉಕ್ಕು ಉರಿಹೊತ್ತಿಸದ, ಬಿರುಗಾಳಿ ಬಾಧಿಸದ
ಜ್ವಾಲೆಯಿಂದಲೆ ಎದ್ದ ಜ್ವಾಲೆ ಜಿಗಿದಾಡುವವು;
ಅಲ್ಲಿ ಬರುವವು ರಕ್ತ ಸಂಜನಿತ ಜೀವಗಳು
ಕೆರಳು ಮೊಳೆಸಿದ ತೊಡಕುಗಳನ್ನೆಲ್ಲ ನೀಗುವವು
ಲಯವಾಗಿ ನೃತ್ಯದಲಿ, ಸಮಾಧಿಯ ಮಧುರ ನೋವಿನಲಿ
ವಸ್ತ್ರದಂಚನ್ನು ಸಹ ಸುಡಲಾರದಂಥ ಜ್ವಾಲೆಯ ವೇದನೆಯಲ್ಲಿ.

ಕೆಸರು ನೆತ್ತರ ಮಧ್ಯೆ ಡಾಲ್ಫಿನಿನ ಬೆನ್ನೇರಿ ಜೀವಗಳ ಸಾಲು
ಸಾಲು ಜೀವದ ಧಾರೆಯನ್ನು ಭೇದಿಸುವ ಕುಲುಮೆಗಳು
ಚಕ್ರವರ್ತಿಯ ಹೊನ್ನ ಕುಲುಮೆಗಳು!
ಒಡೆಯುತಿವೆ ಕೆರಳು ಮೂಡಿಸಿದ ಗೋಜಲುಗಳನ್ನು
ನೃತ್ಯದಂಗಣದ ಅಮೃತ ಶಿಲೆಯ ಹಾಸುಗಳು.
ಆ ಪ್ರತಿಮೆಗಳು ಅವುಗಳಿಂದ ಒಡಮೂಡುವ
ಬೇರೆ ಹೊಸ ಪ್ರತಿಮೆಗಳು,
ಆ ಡಾಲ್ಫಿನ್ನು ಸೀಳಿರುವ, ಆ ಗಂಟೆದನಿ ಪೀಡಿಸುವ ಕಡಲುಗಳು.

ಮೂಲ: ವಿಲಿಯಂ ಬಟ್ಲರ್ ಯೇಟ್ಸ್
ಅನುವಾದ: ಡಾ.ಎಸ್.ಎಸ್.ಲಕ್ಷ್ಮೀನಾರಾಯಣ ಭಟ್ಟ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸುವ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಜೋರು
   (ಅ) ಚಪ್ಪರಿಸುವುದು
   (ಆ) ಕಳ್ಳತನ
   (ಇ) ಇಲಿ
   (ಈ) ಮೋಸದ ವೇಷ

2. ಗಂಡಾಗುಂಡಿ
   (ಅ) ನೀತಿನಿಯಮವಿಲ್ಲದ ಪ್ರಯತ್ನ
   (ಆ) ಅತಿ ಆಳ
   (ಇ) ಗಂಡನನ್ನು ಬಿಟ್ಟವಳು
   (ಈ) ಅಪಾಯಕಾರಿ

3. ಬೀಳಾಗು
   (ಅ) ಹಾಳಾಗು
   (ಆ) ಸಾಯು
   (ಇ) ಹುಲುಸಾಗಿ ಬೆಳೆ
   (ಈ) ಕೃಶವಾಗು

4. ಲೋಷ್ಠ
   (ಅ) ಸುಳ್ಳು
   (ಆ) ಕೋಪಗೊಂಡ
   (ಇ) ಕಟ್ಟಿಗೆ
   (ಈ) ಮಣ್ಣಿನ ಹೆಂಟೆ

5. ಪೆಟ್ಟಿಗೆ ಕಟ್ಟು
   (ಅ) ಹಣ ಕೊಡದಂತೆ ಆಜ್ಞೆ
   (ಆ) ಹೊರಡಲನುವಾಗು
   (ಇ) ಧನ ಸಂಗ್ರಹ ಮಾಡು
   (ಈ) ಹೊಡೆತ ತಿನ್ನು

6. ಸ್ವಾದು
   (ಅ) ಹಣೆಯ ತಿಲಕ
   (ಆ) ಆಡಂಬರವಿಲ್ಲ
   (ಇ) ಒಳ್ಳೆಯ
   (ಈ) ರುಚಿಕಟ್ಟು

7. ಕವಳು
   (ಅ) ಹೋಳು
   (ಆ) ಕೆನ್ನೆ
   (ಇ) ತುತ್ತು
   (ಈ) ಒಪ್ಪಂದ

8. ಮಡಸು
   (ಅ) ಮೋಸ
   (ಆ) ಜಿದ್ದು
   (ಇ) ಅಳಿಸು
   (ಈ) ಹಿಂದಿರುಗಿಸು

9. ನಡುಕು
   (ಅ) ಮೆತ್ತಗೆ
   (ಆ) ಬೆಳ್ಳಗಾಗು
   (ಇ) ಉತ್ಸಾಹದಿಂದ ಪ್ರವೇಶಿಸು
   (ಈ) ಜಮ್ಮು

10. ಮೃತಿ
    (ಅ) ಸಣ್ಣಗಿಂಡಿ
    (ಆ) ಸಾವು
    (ಇ) ಹುಚ್ಚಿ
    (ಈ) ಗಾಳಿ.

11. ತೊರೆ
    (ಅ) ಹಾಲು ತುಂಬು
    (ಆ) ಸಮಾನ
    (ಇ) ಹೆರ
    (ಈ) ದಪ್ಪವಾದ

12. ವಸ್ತ್ರಾದಿ
    (ಅ) ಬಟ್ಟೆ ವ್ಯಾಪಾರ
    (ಆ) ಪದಾರ್ಥಗಳ ರಾಶಿ
    (ಇ) ಬಟ್ಟೆ
    (ಈ) ಒಕ್ಕಲು

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

1. ಜೋಹ
(ಈ) ಮೋಸದ ವೇಷ, ಸೋಗು, ಕಪಟ ವೇಷ; ರೂಪ, ಆಕಾರ. ಉದಾ: ಸಂನ್ಯಾಸಿಯ ಜೋಹ. (ಜೋಹ ಎಂದೂ ಇದೆ - ಸಂ. ಯೋಗ?) .

2. ಗಂಡಾಗುಂಡಿ
(ಅ) ದುಷ್ಟತನ, ಅಕ್ರಮವಾದ ಪ್ರಯತ್ನ, ಉದಾ: ಗಂಡಾಗುಂಡಿ ಮಾಡಿದರೂ ಕೆಲಸವಾಗಲಿಲ್ಲ. (ಖಂಡಾಖಂಡಿ?)

3. ಬೀಳಾಗು
(ಅ) ಪಾಳಾಗು, ಪತನಗೊಳ್ಳು, ಸೋಲು, ವ್ಯರ್ಥವಾಗು. ಉದಾ: ಒಗೆದದ್ದು ಬೀಳಾಯಿತು. (ದೇಶ್ಯ - ಬೀಳ್ = ಪಾಳು ಬೀಳು - ಎಂಬುದರಿಂದ)

4. ಲೋಷ್ಟ
(ಈ) ಮಣ್ಣಿನ ಹೆಂಟೆ, ಮಣ್ಣು ಗಟ್ಟಿ. ಉದಾ: ಸಮಲೋಷ್ಟ ಕಾಂಚನ ನಿನಾದವನೇ ಜ್ಞಾನಿ = ಮಣ್ಣು ಗಟ್ಟಿಯನ್ನು ಬಂಗಾರವನ್ನು ಸಮನಾಗಿ ಬಗೆಯುವವ. (ಸಂ.)

5. ಪೆಟ್ಟಿಗೆ ಕಟ್ಟು
(ಅ) ಹೊರಡಲನುವಾಗು, ಬೀಳ್ಕೊಳ್ಳು. (ವ್ಯಂಗ್ಯಾರ್ಥದಲ್ಲಿ) ಸಾಯು. ಉದಾ: ಹೇಳದೆ ಕೇಳದೆ ಪೆಟ್ಟಿಗೆ ಕಟ್ಟಿದ. (ಸಂ. ಪೇಟಿಕಾ + ಕಟ್ಟು)

6. ಸ್ವಾದು
(ಈ) ರುಚಿಯಾದದ್ದು, ಸಿಹಿ, ಸವಿ. ಉದಾ: ಸ್ವಾದುವಾದ ಭೋಜನ. (ಸಂ.)

7. ಕಪ್ಪುಳು
(ಅ) ಕೆನ್ನೆ, ಕಪೋಲ, ಗಲ್ಲ. ಉದಾ: ಕಪ್ಪುಳು ಉಬ್ಬಿಸಿಕೊಂಡು ಕೂತಿದ್ದಳು. (ಸಂ. ಕಪೋಲ)

8. ಮರಸು
(ಅ) ಮೋಸ, ವಂಚನೆ, ಹೊಂಚು, ಬೇಟೆಗಾಗಿ ಅಡಗಿ ಕೂಡುವುದು. ಉದಾ: ಮರಸಿನಲ್ಲಿ ವಾಲಿಯನ್ನು ಕೊಂದನು. (ದೇಶ್ಯ - ಮರೆ = ಅಡಗಿರುವಿಕೆ - ಎಂಬುದರಿಂದ)

9. ನರುಕು
(ಈ) ಜಜ್ಜು, ನುಚ್ಚುನುರಿ ಮಾಡು. ಉದಾ: ಮುಷ್ಟಿಯಿಂದ ನರುಕಿದನು. (ದೇಶ್ಯ)

10. ಮೃತಿ
(ಅ) ಸಾವು, ಮರಣ. ಉದಾ: ಮೃತಿಯನ್ನೈದಿದ ತಂದೆಗೆ ಕ್ರಿಯೆಯಾಗಲಿಲ್ಲ. (ಸಂ. - ಮೃ - ಮರಣ ಹೊಂದು.)

11. ತೊರೆ
(ಅ) ಮೊಲೆಯಲ್ಲಿ ಹಾಲು ತುಂಬು, ಹರಿ, ಜಿನುಗು. ಉದಾ: ತೊರೆದ ಮೊಲೆಯನ್ನು ಮಗುವಿನ ಬಾಯಲ್ಲಿ ತುರುಕಿದಳು. (ದೇಶ್ಯ)

12. ವಸ್ತಾದಿ
(ಇ) ಜಟ್ಟಿ, ಮಲ್ಲ. ಉದಾ: ದೊಡ್ಡ ವಸ್ತಾದಿಯ ಹಾಗೆ ನಟಿಸುತ್ತಾನೆ. (ಫಾರಸಿ - ಉಸ್ತಾದ್ = ಗುರು)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ನಮ್ಮ ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| 6- 8 | ಸರಿಯಿದ್ದರೆ | ... ಸಾಧಾರಣ |
| 9-10 | " | ... ಉತ್ತಮ |
| 11-12 | " | ... ಅತ್ಯುತ್ತಮ |

# ವಿಜ್ಞಾನಕ್ಕೂ ವಿಸ್ಮಯವಾದ ಅಭಿಚಾರ

- ಎಂ.ವಿ.ಶರ್ಮಾ ತದ್ದಲಸೆ

**ಮ**ಳೆ ಬೀಳುವಂತೆ ಮಾಡಲು, ಪ್ರಕೃತಿ ಪ್ರಕೋಪಗಳನ್ನು ಎದುರಿಸಲು, ರೋಗನಿವಾರಣೆ ಮಾಡಲು, ಇಷ್ಟಕಾಮಾರ್ಥ ಸಿದ್ಧಿಸಲು ಇತ್ಯಾದಿಗಳಿಗೆಲ್ಲಾ ಪ್ರಾಚೀನ ಕಾಲದಲ್ಲಿ ಮನುಷ್ಯನು ಮಂತ್ರವಾದಿಯನ್ನು ಕಾಣುತ್ತಿದ್ದನು. ಪ್ರಕೃತಿಯನ್ನೇ ಒಲಿಸಲು ಜಯಿಸಲು ನಿಯಂತ್ರಿಸಲು ಸಮರ್ಥನಾಗಿದ್ದ ಮಂತ್ರವಾದಿಗೆ ಎಲ್ಲರೂ ಹೆದರುತ್ತಿದ್ದರು. ಅಂದು ಮಂತ್ರವಾದಿಗೆ ಉನ್ನತ ಸ್ಥಾನ ಮಾನಗಳಿದ್ದವು. ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲೂ ಪ್ರಚಾರದಲ್ಲಿದ್ದ ಒಂದು ಕಲೆಯಾಗಿ ಅಭಿಚಾರ ಮಂತ್ರ, ತಂತ್ರಗಳ ಪ್ರಯೋಗ ನಡೆಯುತ್ತಿತ್ತು. ಈಗಲೂ ಇದರ ಆಚಾರ ಅನುಷ್ಠಾನಗಳು ಅಲ್ಲಲ್ಲಿ ಇವೆ. ಮನುಷ್ಯನ ಎಲ್ಲಾ ಚಟುವಟಿಕೆಗಳಿಗೂ ಅಭಿಚಾರವು ಅನಿವಾರ್ಯವಾಗಿ ಪರಿಗಣಿಸಲ್ಪಟ್ಟಿದ್ದ ಪ್ರಾಚೀನ ಕಾಲದ ಜನಜೀವನ ಕುತೂಹಲಕರವಾದುದಾಗಿದೆ. ಅಭಿಚಾರ ಪ್ರಯೋಗ ಎಂದೂ ಅಂಥ ವಿಶ್ವಾಸಕ್ಕೊಳಪಟ್ಟಿರಲಿಲ್ಲವೆಂದು ಸರ್ ಜೇಮ್ಸ್ ಫ್ರೇಜಿಯರ್ ತನ್ನ 'ಮ್ಯಾಜಿಕ್ ಆರ್ಟ್' ಪುಸ್ತಕದಲ್ಲಿ ಹೇಳಿದ್ದಾನೆ. ಈ ಪ್ರಯೋಗಗಳು ಪ್ರಾಯೋಗಿಕ ಸ್ವರೂಪದ್ದಾಗಿದ್ದುದರಿಂದ ಅನೇಕ ಶತಮಾನಗಳ ತನಕವೂ ನೆಲೆನಿಂತಿವೆ. ಮತ ವಿಶ್ವಾಸಕ್ಕಿಂತಲೂ ಹೆಚ್ಚಿನ ಪ್ರಾಯೋಗಿಕ ಪ್ರಾಧಾನ್ಯವುಳ್ಳ ತಳಹದಿಯ ಮೇಲೆಯೇ ಈ ಪ್ರಯೋಗಗಳು ಬೆಳೆದವು. ಅಭಿಚಾರಗಳು ಮತವನ್ನಾಶ್ರಯಿಸಿ ಬೆಳೆದವೆಂಬ ವಾದ ಒಂದೆಡೆಯಾದರೆ ಮತಗಳೆಲ್ಲವೂ ಅಭಿಚಾರಗಳ ಮೂಲಕ ರೂಪಾಂತರಗೊಂಡವೆಂಬ ವಾದ ಮತ್ತೊಂದೆಡೆಯಿದೆ. ಮತ ವಿಶ್ವಾಸವು ಆದರಲ್ಲಡಕವಾದ ಸಿದ್ಧಾಂತವನ್ನು ಹೊಂದಿಕೊಂಡಿದೆ. ಅನುಷ್ಠಾನಗಳಿಗಿಂತಲೂ ವಿಶ್ವಾಸಕ್ಕೆ ಪ್ರಾಧಾನ್ಯ ಹೆಚ್ಚು. ಅಭಿಚಾರಗಳು ಬರೇ ಸಿದ್ಧಾಂತಗಳೋ, ವಿಶ್ವಾಸಾರ್ಹ ವೀಕ್ಷಣಗಳೋ ಆಗಿರಲಿಲ್ಲ. ಅನುಷ್ಠಾನಗಳಲ್ಲಿ ಪ್ರಧಾನ. ಮಂತ್ರವಾದಗಳ ಪರಂಪರೆಯಲ್ಲಿ ಈಗಲೂ ಈ ವೈಶಿಷ್ಟ್ಯವನ್ನು ಕಾಣಬಹುದು.

**ವಿಶ್ವವ್ಯಾಪಿ**

ಅಭಿಚಾರ ಪ್ರಯೋಗಗಳಲ್ಲಿ ಪ್ರತಿಯೊಂದಕ್ಕೂ ಅದರ ಮಹತ್ವವನ್ನ ವಿವರಿಸುವ ಪುರಾಣ ಕತೆಗಳಿದ್ದವು. ಮಂತ್ರವಾದಗಳಲ್ಲಿನ ವಿಶ್ವಾಸ ಕಡಿಮೆಯಾಗದಂತೆ ಇಂಥ ಕತೆಗಳು ಸಹಾಯಕವಾಗಿದ್ದವು. ವೇದದಲ್ಲಿ ನಿರೂಪಿಸಿದ ಇಂದ್ರನು ಮಾಯಾವಿ ಮತ್ತು ಇಂದ್ರಜಾಲ ತಜ್ಞನು. ಪುರಾಣಗಳಲ್ಲಿನ ಶಂಬರನು ಮಾಯೆಯಿಂದ ಅದ್ಭುತಗಳನ್ನೇ ಸೃಷ್ಟಿಸಿದ್ದನು. ಲಂಕಾಧಿಪತಿ ರಾವಣನು ಈ ವಿದ್ಯೆಯನ್ನು ಸಾಧಿಸಿಕೊಂಡಿದ್ದನು. ಮಹಾಭಾರತದಲ್ಲಿಯೂ ಮಂತ್ರವಾದದ ಪ್ರಾಧಾನ್ಯವನ್ನು ತಿಳಿಸುವಂತಹ ಅನೇಕ ಸನ್ನಿವೇಶಗಳಿವೆ. ಪ್ರಾಚೀನ ಭಾರತದಂತೆಯೇ ಅಂದಿನ ಈಜಿಪ್ಟ್, ಬ್ಯಾಬಿಲೋನ್, ಚೈನಾ ಮುಂತಾದ ದೇಶಗಳಲ್ಲಿಯೂ ಅಭಿಚಾರ ಕರ್ಮಗಳು ಪ್ರಚಲಿತವಲ್ಲಿದ್ದವು. ಇವುಗಳಲ್ಲಿ ಕೆಲವು ಪ್ರಾಕೃತ ಸ್ವಭಾವದ್ದಾಗಿದ್ದವು.

'ಮ್ಯಾಜಿಕ್' ಎಂಬ ಶಬ್ದದ ಉತ್ಪತ್ತಿಯೇ ಬ್ಯಾಬಿಲೋನ್‌ದಿಂದ ಬಂದುದಾಗಿದೆ. ಪರ್ಶಿಯನ್ ಭಾಷೆಯಲ್ಲಿ 'ಮಾಗಿ' ಯೆಂದರೆ ಬುದ್ಧಿವಂತರು. ಈ ಶಬ್ದ ಮೂಲದಿಂದ 'ಮ್ಯಾಜಿಕ್' ಉದ್ಭವಿಸಿತಂತೆ. 'ಮಾಗಿ'ಗಳು ಆ ದೇಶದಲ್ಲಿ ಪುರೋಹಿತರಾಗಿದ್ದರು. ಆದರೆ ಪರ್ಶಿಯನ್

ರಾಜರುಗಳ ಅಧೀನದಲ್ಲಿ ಮಾಗಿಗಳು ಪುರೋಹಿತರು ಮಾತ್ರವೇ ಆಗಿರಲಿಲ್ಲ. ಪಕ್ಷಿಶಾಸ್ತ್ರ, ಜ್ಯೋತಿಷ್ಯ ಇತ್ಯಾದಿಗಳಲ್ಲೂ ಪ್ರವೀಣರಾಗಿದ್ದರು. .

ತೀರಾ ಪುರಾತನ ಅಭಿಚಾರ ಪದ್ಧತಿ ಚೈನಾದಲ್ಲಾಗಿರಬೇಕೆನ್ನಲಾಗಿದೆ. ಕ್ರಿ.ಪೂ. 3000ದಲ್ಲೇ ಆ ದೇಶದಲ್ಲಿ ಅಭಿಚಾರ ಪ್ರಯೋಗಗಳು ಪ್ರಚಾರದಲ್ಲಿದ್ದುದಾಗಿ ಪ್ರಾಚೀನ ಗ್ರಂಥಗಳೇ ಹೇಳುತ್ತವೆ. 'ದಿ ಬುಕ್ ಆಫ್ ಚೇಂಜಸ್' ಎಂಬ ಗ್ರಂಥದಲ್ಲಿ ಭವಿಷ್ಯ ನಿರ್ಣಯ ಹಾಗೂ ಮಂತ್ರವಾದಗಳ ಕುರಿತು ಉಲ್ಲೇಖಗಳಿವೆ. ಅತಿ ನಿಗೂಢವಾಗಿದ್ದ ಅನೇಕ ಅಭಿಚಾರ ಕರ್ಮಗಳು ಪ್ರಾಚೀನ ಈಜಿಪ್ಟ್‌ನಲ್ಲಿದ್ದುದಾಗಿ ವಲ್ಲೀಸ್ ಬಡ್ಜ್ ಬರೆದ 'ಈಜಿಪ್ಷಿಯನ್ ಮ್ಯೂಜಿಕ್' ಎಂಬ ಗ್ರಂಥದಲ್ಲಿ ಹೇಳಿದೆ. ಮರಣಾನಂತರ ಶವಸಂಸ್ಕಾರ ಕರ್ಮಗಳಿಗೆ ಇವುಗಳಲ್ಲಿ ಹೆಚ್ಚಿನ ಪ್ರಯೋಗಗಳು ಸಂಬಂಧಿಸಿವೆ. ಮೃತ ದೇಹಗಳು ಹಾಳಾಗದಂತೆ ಸುಗಂಧ ದ್ರವ್ಯಗಳಲ್ಲಿ ಹೊದೆದು ದಾಸ್ತಾನಿರಿಸುವುದರಲ್ಲಿ ಈಜಿಪ್ಟಿನ ನಿವಾಸಿಗಳಿಗಿದ್ದ ಸಾಮರ್ಥ್ಯವು ವಿಶಿಷ್ಟ. ಇಂತಹ ಸಂದರ್ಭಗಳಲ್ಲೆಲ್ಲಾ ಮದ್ದಿನೊಂದಿಗೆ ಮಂತ್ರವಾದದ ಪ್ರಯೋಗಗಳು ಇದ್ದವೆನ್ನಲಾಗಿದೆ. ಗಾಯಗಳಿಗೆ ಬ್ಯಾಂಡೆಜ್ ಹಾಕುವಾಗ ಕೆಲವು ಮಂತ್ರಗಳ ಉಚ್ಚಾರಣೆ; ಶವಸಂಸ್ಕಾರದ ಮುನ್ನ ಕರುಳುಗಳನ್ನು ಹೊರಕ್ಕೆ ತೆಗೆಯುವಾಗ; ಮಾಂತ್ರಿಕ ಕಣ್ಣುಗಳನ್ನು ನಿಕ್ಷೇಪಿಸುವಾಗಲೆಲ್ಲಾ ವಿಶಿಷ್ಟ ಮಂತ್ರೋಚ್ಚಾರಣೆಗಳಿದ್ದವು. ಈ ಬಗೆಯ ಮಂತ್ರವಾದಗಳನ್ನು ಹೈಕ್ಸ್ (HIKES) ಎಂದು ಕರೆಯುತ್ತಿದ್ದರು. ಅಪೂರ್ವವಾದ ಔಷಧಿಗಳ ಮತ್ತು ದಿವ್ಯವಾದ ಮಂತ್ರಗಳನ್ನು ಈಜಿಪ್ಟಿನ ಪಿರಮಿಡ್‌ಗಳಲ್ಲಿ ಕೆತ್ತಲಾಗಿದೆ.

ಪ್ರಾಚೀನ ಸಾಂಸ್ಕೃತಿಕ ಹಿರಿಮೆಯ ಗ್ರೀಸ್‌ನಲ್ಲೂ ಅಭಿಚಾರ ಪದ್ಧತಿ ಪ್ರಚಾರದಲ್ಲಿದ್ದವು. ವೈದ್ಯರಿಗೂ ಪಂಡಿತರಿಗೂ ಮಾತ್ರವೇ ಔಷಧಿಗಳ ಮತ್ತು ಅಭಿಚಾರಗಳ ಮಾಹಿತಿಯಿದ್ದುದಾಗಿ ಪ್ರಸಿದ್ಧ ಗ್ರೀಕ್ ತತ್ವಜ್ಞಾನಿಯಾದ ಪ್ಲೇಟೋ ಬರೆದಿದ್ದಾನೆ.

ವಿಶ್ವತೋಮುಖ

ಪ್ರಾಚೀನ ಭಾರತದಲ್ಲಿದ್ದ ಅಭಿಚಾರ ಪದ್ಧತಿ ಕುರಿತು ಮಾಹಿತಿ ಲಭಿಸುವುದು ಅಥರ್ವವೇದದಿಂದ. ಅದರಲ್ಲಿ ಕೆಲವೆಡೆ ಕಾಣುವ ಇಂದ್ರಸ್ತುತಿ ಮುಂತಾದವುಗಳನ್ನು ಬಿಟ್ಟರೆ ಹೆಚ್ಚಿನವು ಅಭಿಚಾರಗಳ ಮತ್ತು ವಶೀಕರಣಗಳ ಬಗ್ಗೆ ಪ್ರತಿಪಾದಿಸುತ್ತವೆ. ಇದಕ್ಕೆ ಸಮಾನವಾದ ಗ್ರಂಥ ಬೇರೆಲ್ಲೂ ಲಭಿಸಿದ್ದಾಗಿ ಇಲ್ಲ. ಅಥರ್ವವೇದದಲ್ಲಿನ ಕೆಲವು ಮಂತ್ರಗಳು ಮಹಾವ್ಯಾಧಿಗಳನ್ನು ನಿವಾರಿಸಬಲ್ಲವು; ಕ್ರೂರ ಮೃಗಗಳಿಂದಲೂ ಪಿಶಾಚಗಳಿಂದಲೂ ರಕ್ಷಣೆ ನೀಡುವಂತಹವು; ಮತ್ತು ಶತ್ರು ಸಂಹಾರ ಶಕ್ತಿಯುಳ್ಳವೆಂದು ನಂಬಲಾಗಿದೆ. ಆದರೆ ಶುಭ ಪ್ರಾಪ್ತಿಗೂ ಐಶ್ವರ್ಯ ವರ್ಧನೆಗೂ ಇತರ ಅನೇಕ ಮಂಗಳ ಕಾರ್ಯಗಳಿಗೂ ಸಹಾಯಕವಾದ ಮಂತ್ರಗಳೂ ಇದರಲ್ಲಿವೆ.

ಅಥರ್ವನ್ ಎಂದರೆ ಅಗ್ನಿಪೂಜಕ ಎಂದರ್ಥ. ಇರಾನಿಗಳ ಪುರಾತನ ಅವೆಸ್ತನ್ ಭಾಷೆಯಲ್ಲಿ ಅಥರ್ವನ್ ಎಂದರೆ 'ಅಗ್ನಿ ಪುರೋಹಿತ' ಎಂದೇ ಅರ್ಥ. ಪಾಶ್ಚಾತ್ಯ ವಿದ್ವಾಂಸರಾದ ಬ್ಲೂಂ ಫೀಲ್ಡ್, ವಿಂಟರ್ ನಿಟ್ಜ್, ವ್ಹಿಟ್‌ನಿ, ಇದನ್ನು ಒಪ್ಪಿದ್ದಾರೆ. ಅಥರ್ವವೇದದ 33ನೇ ಸೂಕ್ತದಲ್ಲಿ ಮಾನವ ಶರೀರ ಶಾಸ್ತ್ರ-ಅನಾಟಮಿ ಹೀಗೆ ಹೇಳಿದೆ. The Atharva Veda, The Veda of Psychic Powers deals with Super Normal Faculties, senses and powers. There is mention of both low as well as the high use of the powers with WITCH CRAFT, SORCERY AND BLACK MAGIC (Philosophies and Religions of India - Yogi Rama charaka p-240)

ಮಾನವ ಶರೀರದೊಳಗಿನ ರೋಗಗಳನ್ನು ರೋಗಕಾರಣವಾಗಿ ನಂಬಲ್ಪಡುವ ಪಿಶಾಚಗಳನ್ನು ನಾಶ ಮಾಡಬಲ್ಲ ಮಂತ್ರಗಳು ಅಥರ್ವದ ಮೊದಲನೇ ಭಾಗ. ಅಲ್ಲಿನ ಒಂದು ಮಂತ್ರ ಹೀಗೆ ಹೇಳುತ್ತದೆ. ತಕ್ಮನ್ ಎಂದರೆ

ಜ್ವರ. "ಎಲೈ ತಕ್ಮನ್. ಎಲ್ಲರನ್ನೂ ನೀನು ಹಳದಿಯಾಗಿ ಮಾಡುತ್ತೀ. ಅಗ್ನಿಯಂತೆ ಸುಡುತ್ತೀ. ನೀನು ಬಲಹೀನನಾಗು. ನೆಲಕ್ಕೆ ಇಳಿದು ಇಂಗಿ ಹೋಗು. ಮಾಯವಾಗು..."

ಸ್ತ್ರೀಪುರುಷರೊಳಗಣ ಪರಸ್ಪರ ಬಂಧ, ಪರಸ್ಪರ ವಶೀಕರಣ ಸಾಧಿಸುವ ಮಂತ್ರಗಳ ಮತ್ತೊಂದು ವಿಭಾಗ; ಉಳಿದುದು ಶುದ್ಧ ಅಭಿಚಾರ ವಿನಾಶಕಾರಕ, ಪರಪೀಡನ, ಮಾರಣ, ಮೋಹನ ಸ್ತಂಭನ ಇತ್ಯಾದಿ ಪ್ರಯೋಗಗಳಿಗೆ ಬೇಕಾದ ಮಂತ್ರಗಳ ವಿಭಾಗ. ಜಗತ್ತಿನಲ್ಲಿ ಈಗ ಪ್ರಚಾರದಲ್ಲಿರುವ ಎಲ್ಲಾ ಮಂತ್ರಗಳಿಗೆ ಮೂರು ಘಟಕಗಳು ಇರುವುದಾಗಿ ಈ ಬಗ್ಗೆ ಸಂಶೋಧನೆ ನಡೆಸಿದ ಮಾಲಿನೋವ್ಸ್ಕಿ ಹೇಳಿದ್ದಾನೆ.

ಅಥರ್ವವೇದ ಸಂಹಿತೆಯಲ್ಲಿ ಅಭಿಚಾರ ಪದ್ಧತಿಗಿರುವ ಮಂತ್ರಗಳು ಮತ್ತು ಇವುಗಳನ್ನು ಅನುಷ್ಠಾನಗೊಳಿಸುವ ಕುರಿತಾದ ನಿಬಂಧನೆಗಳು ಕೌಶಿಕಾಸೂತ್ರ ಮತ್ತು ಅಥರ್ವ ಪರಿಶಿಷ್ಟದಲ್ಲಿನ ವಿವರಗಳಲ್ಲಿರುವುದು. ಬ್ರಹ್ಮ, ಪ್ರಜಾಪತಿ, ಅಥರ್ವ ಇತ್ಯಾದಿ ಮಹಾಮುನಿಗಳು ಅಥರ್ವವೇದವನ್ನು ಅಭಿವ್ಯಕ್ತಿಸಿದ್ದಾಗಿ ಪ್ರತೀತಿ. ಪ್ರತಿಯೊಂದು ಅಭಿಚಾರ ಕರ್ಮಕ್ಕೂ ಪ್ರತ್ಯೇಕವಾದ ಇಷ್ಟದೇವತೆಗಳು ಹೇಳಲ್ಪಟ್ಟಿವೆ. ಶಾಂತಿ ಕರ್ಮದ ಇಷ್ಟ ದೇವತೆ ಸರಸ್ವತಿ. ವಶೀಕರಣ ಕರ್ಮದ ಇಷ್ಟದೇವತೆ ರತಿ. ಸ್ತಂಭನ ಕರ್ಮದ ಇಷ್ಟದೇವತೆ ಲಕ್ಷ್ಮಿ; ವಿದ್ವೇಷಣ ಕರ್ಮದ ಇಷ್ಟ ದೇವತೆ ಜ್ಯೇಷ್ಠಾ; ಉಚ್ಚಾಟನ ಕರ್ಮದ ಇಷ್ಟ ದೇವತೆ ದುರ್ಗೆ; ಮಾರಣ ಕರ್ಮದ ಇಷ್ಟದೇವತೆ ಭದ್ರಕಾಳಿ

ಶಾಂತಿ ಕರ್ಮದ ಸಾಧನೆಯನ್ನು ಪ್ರಥಮ ಪ್ರಹರದಲ್ಲಿ; ವಶೀಕರಣ ಕಾರ್ಯವನ್ನು ಎರಡನೇ ಪ್ರಹರದಲ್ಲಿ; ಸ್ತಂಭನ ಕಾರ್ಯವನ್ನು ನಾಲ್ಕನೇ ಪ್ರಹರದಲ್ಲಿ; ವಿದ್ವೇಷಣ ಉಚ್ಚಾಟನ ಕರ್ಮಗಳನ್ನು ಮೂರನೇ ಪ್ರಹರದಲ್ಲಿ; ಮಾರಣ ಕರ್ಮವನ್ನು ನಾಲ್ಕನೇ ಪ್ರಹರದಲ್ಲಿ ನೆರವೇರಿಸುತ್ತಾನೆ. ಹಾಗೇ ಹೇಮಂತ ಋತುವಿನಲ್ಲಿ ವಶೀಕರಣ, ಶಿಶಿರ ಋತುವಿನಲ್ಲಿ ಸ್ತಂಭನ; ಗ್ರೀಷ್ಮ ಋತುವಿನಲ್ಲಿ ವಿದ್ವೇಷಣ; ವರ್ಷಋತುವಿನಲ್ಲಿ ಉಚ್ಚಾಟನ; ಶರದೃತುವಿನಲ್ಲಿ ಮಾರಣ ಕರ್ಮವನ್ನು ನೆರವೇರಿಸುತ್ತಾರೆ.

ಅಭಿಚಾರ ಸಾಧಕರು ಈ ಕರ್ಮಗಳಿಗಾಗಿ ಬೇರೆ ಬೇರೆ ಆಸನಗಳನ್ನು ಹಾಕುತ್ತಾರೆ. ಶಾಂತಿ ಕರ್ಮಕ್ಕಾಗಿ ಸ್ವಸ್ತಿಕಾಸನ; ವಶೀಕರಣಕ್ಕಾಗಿ ಭದ್ರಾಸನ; ಸ್ತಂಭಕ್ಕಾಗಿ ವಿಕಟಾಸನ; ವಿದ್ವೇಷಣಕ್ಕಾಗಿ ಕುಕ್ಕುಟಾಸನ; ಉಚ್ಚಾಟನಕ್ಕಾಗಿ ಅರ್ಧ ಸ್ವಸ್ತಿಕಾಸನ; ಶುಭಕರ್ಮಕ್ಕಾಗಿ ಪದ್ಮಾಸನವನ್ನು ಹಾಕುತ್ತಾರಲ್ಲದೆ ಬೇರೆ ಬೇರೆ ದಿಕ್ಕುಗಳು, ವಿವಿಧ ಮಾಲೆಗಳು, ಬಣ್ಣಗಳ ವಸ್ತುಗಳನ್ನು ಹೇಳಿದೆ. ತಿಥಿ, ನಕ್ಷತ್ರ, ವಾರಗಳ ಮಹತ್ವವನ್ನು ತಿಳಿಸಿದೆ. ಮಂತ್ರಗಳಲ್ಲಿ ಹೇಳುವ ಉದ್ದೇಶವು ಫಲಿಸಬೇಕಾದರೆ ಏಕಾಗ್ರಚಿತ್ತದಿಂದ ವಾಚಿಕ, ಉಪಾಂಶು ಹಾಗೂ ಮಾನಸಿಕ ಈ ಮೂರು ವಿಧವಾಗಿ ಮಾಡಲು ಸೂಚಿಸಿದೆ.

ಪ್ರತಿಮೆಗಳು, ಯಂತ್ರ (ತಗಡು) ತಾಯ್ತಿಸ್, ರಕ್ಷಾ ಕವಚಗಳು ಇತ್ಯಾದಿಗಳನ್ನು ಅಭಿಚಾರದಲ್ಲಿ ಧಾರಾಳವಾಗಿ ಬಳಸಲಾಗುತ್ತದೆ. ಪ್ರತಿಮೆಗಳನ್ನು ಜಡಿದೂ ಕಡಿದೂ ಶತ್ರು ಸಂಹಾರವೆಸಗುವದು. ಪ್ರತಿಮೆಯಲ್ಲಿ ರೋಗಗಳನ್ನು ಆವಾಹನೆ ಮಾಡಿ ಮಣ್ಣಿನಲ್ಲಿ ಹೂಳಿಡುವುದು ಈಗಲೂ ಪ್ರಚಾರದಲ್ಲಿರುವ ವಿಧಾನಗಳು. ತಲೆಗೆ ಕಲಶಾಭಿಷೇಕ ಮಾಡಿ ಪಾಪವನ್ನು ತೊಳೆದು ಬಿಡುವ ಸಂಪ್ರದಾಯ ಸಾಮಾನ್ಯವಾಗಿ ಎಲ್ಲೆಡೆಗಳಲ್ಲೂ ಇತ್ತು. ಗೋಮೂತ್ರದಿಂದ ಮಗುವನ್ನು ದುರ್ದೇವತೆಗಳಿಂದ ಕಾಪಾಡುವುದು. ಅರಿಸಿನಮುಂಡಿಗೆ ರೋಗವನ್ನು ಹಳದಿ ಬಣ್ಣದ ಹಕ್ಕಿಗೆ ಆವಾಹಿಸಿ ಬಿಡುವದು. ಪ್ರಿಯರ ಕಾಲ ಹೆಜ್ಜೆಯನ್ನು ಗುರುತಿಸಿ ಅವರನ್ನು ವಶೀಕರಿಸುವುದು ಇತ್ಯದಿ ಪ್ರಯೋಗಗಳು ಅಥರ್ವವೇದದಲ್ಲಿ ಮಾತ್ರವೇ ಹೇಳಲ್ಪಟ್ಟಿರುವ ಅಭಿಚಾರಗಳು.

ಗಂಧರ್ವ ಸ್ತ್ರೀಯರು ಮರ್ತ್ಯರನ್ನು ಮರುಳುಗೊಳಿಸದಂತೆ ತಡೆಹಿಡಿಯಲು ಆರ್ಯರು

'ಅಜಶೃಂಗೀ' ಎಂಬ ಔಷಧ ಪತ್ತೆಹಚ್ಚಿ ಮಂತ್ರ ಹಾಕುತ್ತಿದ್ದರು. ''ಗುಗ್ಗುಳ, ಪೀಲಾ, ನಲದೀ, ಔಷಗಂಧಿ, ಪ್ರಮದಿನೀ ಎಲ್ಲಾ ಅಪ್ಸರೆಯರು ನದಿಗೆ ಹಾಯಿರಿ. ನಮ್ಮ ವೀರ್ಯವತ್ತಾದ ಮಂತ್ರದಿಂದ ನಿಮ್ಮನ್ನು ಓಡಿಸುತ್ತಿದ್ದೇವೆ. ಗಂಧರ್ವರೇ ನಮ್ಮ ಬಳಿ ಸುಳಿಯಬೇಡಿ.''

**ಮತಾತೀತ:**

ಶಂಕರಾಚಾರ್ಯರ 'ಸೌಂದರ್ಯ ಲಹರಿ' ಮಂತ್ರ ಯಂತ್ರ ವಶೀಕರಣ ಕುರಿತು ದಟ್ಟವಾದ ವಿವರಗಳನ್ನು ನೀಡುತ್ತದೆ. ಎರಡು ಭಾಗಗಳ ಪೂರ್ವಾರ್ಧಕ್ಕೆ 'ಆನಂದಲಹರಿ' ಎಂದೂ ಉತ್ತರಾರ್ಧಕ್ಕೆ 'ಸೌಂದರ್ಯಲಹರಿ' ಎಂದೂ ಹೆಸರು. ಪೂರ್ವಾರ್ಧದಲ್ಲಿ 1ರಿಂದ 41ನೇ ಶ್ಲೋಕದವರೆಗೆ ಶ್ರೀಚಕ್ರ, ಶ್ರೀವಿದ್ಯೆ, ಮೂಲಾಧಾರಾಧಿ ಚಕ್ರ ಇತ್ಯಾದಿ ತಾಂತ್ರಿಕ ವಿಷಯ ಹೇಳಿದೆ.

ಅಭಿಚಾರದ ಮೋಹ ಸಾಹಿತ್ಯದಲ್ಲೂ ಅಭಿವ್ಯಕ್ತವಾಗಿದೆ. ಶೇಕ್ಸಪಿಯರನ ಎಲ್ಲ ನಾಟಕಗಳಲ್ಲಿ ಮಾಟಗಾತಿಯರು, ಭೂತಗಳು ಬರುತ್ತವೆ. ಗ್ರೀಕ್ ಮತ್ತು ಟ್ರಾಯ್ ನಡುವೆ ನಡೆದ ಹತ್ತು ವರ್ಷಗಳ ಸಮರ ವಿವರಿಸುವ ಹೋಮರನ (ಕಾಲ ಕ್ರಿ.ಪೂ. 850) ಈಲಿಯಡ್-ಒಡೆಸ್ಸಿಗಳಲ್ಲಿ ಬರುವ ಅಖಿಲೆಸ್, ಹೆಕ್ಟಾರ್, ಥೆಲಿಮಾಕಸ್, ಪ್ರಿಯಾಂ ಎಲ್ಲರೂ ಗುಡುಗಿನ ಮಳೆಯ ಗಾಳಿಯ ಬೆಂಕಿಯ ಧೂಳಿನ ದೇವತೆಗಳ ಮಕ್ಕಳುಗಳೇ. ಗ್ರೀಕ ದುರಂತ ನಾಟಕಗಳ ಕರ್ತೃ ಸಾಫೋಕ್ಲಿಸನ (ಕಾಲ ಕ್ರಿ.ಪೂ. 496) ಈಡಿಪಸ್‌ನಲ್ಲಿ ಬರುವ ಡೆಲ್ಫಿಯ ದೇವವಾಣಿ, ಅಂತಿಗೊನೆಯಲ್ಲಿ ಬರುವ ಅಂಧ ಭವಿಷ್ಯಕಾರ ಟೈರೀನಿಯಸ್ ಪ್ರಾಚೀನ ರೋಮನಲ್ಲಿದ್ದ ಅಭಿಚಾರ ಭವಿಷ್ಯ ಕರ್ಮಕ್ಕೆ ಉದಾಹರಣೆಗಳು.

ಕ್ರೈಸ್ತ ಮತದಲ್ಲೂ ಈ ಅಭಿಚಾರದ ಯಂತ್ರ ಮಂತ್ರಗಳಿಗೆ ಸ್ಥಾನವಿದೆ. 'ಸ್ಕ್ಯಾಪುಲರ್'ಗಳನ್ನು ಕೊರಳಲ್ಲಿ ಧರಿಸುವದರಿಂದ ಪಾಪದಿಂದ ಮುಕ್ತರಾಗಿರುತ್ತಾರೆಂದೂ ಅವರಿಗೆ ನರಕ ಸಿಗದೆಂದು ದುಷ್ಟ ಶಕ್ತಿ ದೂರಾಗುವದೆಂದು ತಿಳಿಯುತ್ತಾರೆ. ಕಾನ್ವೆಂಟ ಕಾನ್ಮೆಂಟನಲ್ಲಿ ಈ ಪದ್ಧತಿ ಇದೆ.

ಇಸ್ಲಾಂ ಧರ್ಮವು ಇದಕ್ಕೆ ಹೊರತಾಗಿಲ್ಲ. ಹಲವು ದರ್ಗಾಗಳಲ್ಲಿ ತಾಯಿತಗಳನ್ನು ನೀಡಲಾಗುತ್ತದೆಯಲ್ಲದೆ ಮುಸ್ಲಿಂ ಮಹಿಳೆಯರು ಪುರುಷರು 'ತಾವೀಜ್'ಗಳನ್ನು ಅನಾದಿಕಾಲದಿಂದ ಧರಿಸುತ್ತಾ ಬಂದಿದ್ದಾರೆ.

ಅಭಿಚಾರ ಪದ್ಧತಿ ಹಲವಾರು ಸಾರೆ ನಿಷ್ಫಲವಾಗಿದ್ದರೂ, ನಿರರ್ಥಕವೆನಿಸಿದ್ದರೂ ಅನೇಕ ಶತಮಾನಗಳಿಂದಲೂ ಈ ವಿಧಾನಗಳು ನೆಲೆನಿಂತಿರುವುದನ್ನು ಮರೆಯುವಂತಿಲ್ಲ. ಆದಿಮಾನವನ ಅಭಿಚಾರ ಪ್ರಯೋಗಗಳಿಂದಲೇ ಸಂಸ್ಕೃತಿ ಪ್ರಾರಂಭವಾದುದೆಂದು ನಂಬುವವರೂ ಇದ್ದಾರೆ.

ಮಾನವ ಸಂಸ್ಕೃತಿಯ ಇತಿಹಾಸದ ಅತಿ ಪುರಾತನ ಸತ್ಯ ಅಭಿಚಾರ ಮಂತ್ರಗಳೆಂದು 'ಮ್ಯೂಜಿಕ್ ಅಂಡ್ ಮ್ಯೂಜಿಕ್' ಎಂಬ ಗ್ರಂಥದಲ್ಲಿ ಕೊಂಬೇರಿಯೋ ಪ್ರಸ್ತಾಪಿಸಿದ್ದನ್ನು ನೆನೆಯಬಹುದು. ಪ್ರಕೃತಿಯ ಅದ್ಭುತ ಶಕ್ತಿಗಳನ್ನು ಸ್ವಾಧೀನಪಡಿಸಿ ಮನುಷ್ಯರ ಜೀವನಕ್ಕೆ ಉಪಕಾರವಾಗುವಂತೆಸಗುವುದು ಅಭಿಚಾರಗಳ ಗುರಿಯಾದರೆ ಮತಗಳು ಪ್ರಾಚೀನ ಕಾಲದಲ್ಲಿ ನಿಸರ್ಗವನ್ನೇ ಸಂತೋಷ ಪಡಿಸಲೆತ್ನಿಸಿದ್ದವು. ಈ ಬಗೆಯ ಪ್ರಾಕೃತ ಆಚಾರಾನುಷ್ಠಾನಗಳಿಂದ ಮತ್ತೆ ಶಾಸ್ತ್ರಗಳ ಆರಂಭವಾದುದೆಂದು ಹಲವು ಪಾಶ್ಚಾತ್ಯ ಸಂಶೋಧಕರೂ ಅಭಿಪ್ರಾಯ ಪಟ್ಟಿರುವರು.

''ಮಂತ್ರವಾದಗಳನ್ನು ಶಾಸ್ತ್ರಗಳು ಮುನ್ನುಡಿಯೆಂದು ಹೇಳಬಹುದು. ವೈಜ್ಞಾನಿಕ ಸಿದ್ಧಾಂತಗಳು ಮತ್ತೆ ತಿದ್ದುಪಡಿಗೊಳಗಾಗುವಂತೆ ಮಂತ್ರವಾದಗಳ ತತ್ವಗಳೂ ವ್ಯತ್ಯಾಸಕ್ಕೊಳಗಾಗುತ್ತಿದ್ದವು'' ಎಂದು ಎ.ಬಿ.ಕೀತ್ ಹೇಳಿದ್ದಾನೆ. ಇದು ಸಂಶಯಾಸ್ಪದವಾದ ಒಂದು ಸಿದ್ಧಾಂತವಾದರೂ ವೈದ್ಯ ಶಾಸ್ತ್ರದ ಬಗ್ಗೆ ಸ್ವಲ್ಪ ಸರಿಯಾಗಿದ್ದಂತೆ ಕಾಣುತ್ತದೆ. ವೈದ್ಯಶಾಸ್ತ್ರದ ಮೂಲವು ಪ್ರಾಚೀನ ಕಾಲದ ವಿಶ್ವವ್ಯಾಪಕವಾಗಿದ್ದು ಔಷಧಗಳೂ ಮಂತ್ರವಾದಗಳೇ ಆಗಿದ್ದವು! ●

ಎಂಜಿನ್ ಚಾಲಿತ ಸಾರ್ವಜನಿಕವಾಹನ ಎಂದರ್ಥ) ಫ್ರೆಂಚರೂ ರಶಿಯನ್ನರೂ ಬಸ್ಸಿಗೆ ಕೂಡ ಆಟೋ ಬಸ್ (autobus) ಎಂದಾರು; ಕಾರಿಗೆ ಆಟೋಮೋಬೈಲ್ automobil) ಎಂದಾರು. ಪೋರ್ಚುಗೀಸರಿಗೆ carro (= ಕಾರ್) ಎಂದರೆ ಎಲ್ಲ ತರದ ಗಾಡಿ ಆದೀತು; automouel ಎಂದರೆ ಅಲ್ಲಿ ಮೋಟರ್ ಕಾರ್. ಬೈಸಿಕಲ್ ಅವರಿಗೆ ಸೈಕಲ್ ಅಲ್ಲ bicicieta. ಬಸ್ ಅವರಿಗೆ omnibus ಅಥವಾ auto carro. ಇಂಗ್ಲೀಷಿನಲ್ಲೇ bicycle ಗೆ bike (ಬೈಕ್) ಎಂಬ ಸಂಕ್ಷಿಪ್ತ ರೂಪವಿದೆ. ಅದು ಸಾದಾ ಸೈಕಲ್ಲೂ ಆಗಬಹುದು, ಮೋಟಾರ್ ಸೈಕಲ್ಲೂ ಆಗಬಹುದು. ನಮ್ಮಲ್ಲಿ ಕೂಡ ಇದು ಸಲ್ಲುತ್ತದಾದರೂ ಈಗೀಗ ಬೈಕು ಎಂದರೆ ಮೋಟಾರ್ ಸೈಕಲ್ಲಿಗೇ ಹೆಚ್ಚಾಗಿ ಅನ್ವಯಿಸುತ್ತದೆ.

''ಮೋಟಾರ್ (motor) ಶಬ್ದ ಸಾಮಾನ್ಯರಿಗೆ ಪರಿಚಿತವಿರುವ ಮಟ್ಟಿಗೆ ಕಾರು ಬಸ್ಸು ಮುಂತಾದ ವಾಹನ, ಅದೂ ಯಂತ್ರ ಚಾಲಿತ ಸಚಕ್ರ ವಾಹನವನ್ನು ನಿರ್ದೇಶಿಸುತ್ತದೆ. ವಾಸ್ತವವಾಗಿ ಮೋಟಾರಿನ ವ್ಯಾಪ್ತಿ ಇದಕ್ಕೂ ಹೆಚ್ಚೆಂಬುದು ಯಂತ್ರಗಳ ವಿಷಯ ಸ್ವಲ್ಪ ಹೆಚ್ಚು ತಿಳಿವಳಿಕೆಯುಳ್ಳವರಿಗೆ ಗೊತ್ತು. ಲ್ಯಾಟಿನ್ನಿನ motor ಪದಕ್ಕೆ ಮೂಲತಃ ಚಾಲಕ (ಶಕ್ತಿ) ಎಂಬರ್ಥ. ಹೀಗೆ ಯಂತ್ರಗಳನ್ನು ಚಲಿಸುವಂತೆ ಮಾಡುವ ಪ್ರೇರಕ ಯಂತ್ರ motor. ''ಮೋಟಾರ್ ಕಾರ್'' ಎಂಬುದರ ಸಂಕ್ಷೇಪವೇ ಮೋಟಾರ್.

ಈಗ ನಾವು ''ವಿಮಾನ''ವೆಂಬ ಬಹು ಪುರಾತನ ಹೆಸರಿನಿಂದ ಕರೆಯುವ ಆಕಾಶಯಾನಕ್ಕೆ ಇಂಗ್ಲೀಷಿನಲ್ಲಿ ''ಏರೋಪ್ಲೇನ್'' (aero plane)ಎಂಬ ಹೆಸರುಂಟೆಂದು ಎಲ್ಲರಿಗೂ - ಇಂಗ್ಲೀಷ್ ಬಾರದವರಿಗೂ ಗೊತ್ತು. ಅದೂ ಪೂರ್ವ ಪದವನ್ನು ಉದುರಿಸಿಕೊಂಡು ಬರೇ ''ಪ್ಲೇನ್'' ಆಗಿ ಉಳಿದಿದೆ. ಏರೋಪ್ಲೇನಿನ aero ಎಂಬ ಪೂರ್ವಪದಕ್ಕೆ ಗಾಳಿಯೆಂದು (ಗ್ರೀಕಿನಲ್ಲಿ) ಅರ್ಥ Plane ಶಬ್ದದ ಮೂಲ ಲ್ಯಾಟಿನ್ - planurn - ಚಪ್ಪಟೆ. ಗಾಳಿಯಲ್ಲಿ ಹಾರುವುದಕ್ಕೆ ಚಪ್ಪಟೆತನ ಅನುಕೂಲ ತಾನೆ? ಹೀಗಾಗಿ ನಮ್ಮವರು ಇದನ್ನು ಮೊದಲು ''ವಾಯು ವಿಮಾನ'' ಎಂದು ಕರೆದದ್ದು ಯುಕ್ತವಾಗಿಯೇ ಇದೆ. ಉರ್ದುವಿನವರು ಅದನ್ನು ''ಹವಾಯೀ ಜಹಾಜ್'' (ಗಾಳಿ - ಹಡಗು) ಎಂದು ಕರೆದದ್ದು ಸ್ವಾರಸ್ಯವಾಗಿದ್ದಂತೆ, ಭಾಷೆಗಳು ಗೊತ್ತಿದ್ದದನ್ನಾಧರಿಸಿ ಗೊತ್ತಿಲ್ಲದ್ದಕ್ಕೆ ನಾಮಕರಣ ಮಾಡುವ ಇನ್ನೊಂದು ಒಲವಿಗೆ ಉದಾಹರಣೆಯಾಗಿದೆ. ಇದಕ್ಕೆ ಪ್ರೇರಕವಾದದ್ದು ಬಹುಶಃ ವಿಮಾನಕ್ಕಿರುವ ಇನ್ನೊಂದು ಇಂಗ್ಲೀಷ್ ಪದವಾದ ''ಏರ್‌ಕ್ರಾಫ್ಟ್'' (air craft) ಎಂಬುದು. craft ಶಕ್ತಿ, ಹಡಗು; air - ಗಾಳಿ.

ಈ ಆಧುನಿಕ ವಾಹನಕ್ಕೂ ಬೇರೆ ಬೇರೆ ಯುರೋಪಿಯನ್ ಭಾಷೆಗಳಲ್ಲಿ ಇತರ ಹೆಸರುಗಳಿವೆ. ಫ್ರೆಂಚರು ವಿಮಾನಕ್ಕೆ avion- ಅವಿಯೋಂ ಎನ್ನುತ್ತಾರೆ. ಪೋರ್ಚುಗೀಸರೂ ರಶಿಯನ್ನರೂ ಹತ್ತಿರ ಅದೇ ಪದ ಬಳಸುತ್ತಾರೆ. ಇದಕ್ಕೆ ಲ್ಯಾಟಿನ್ ''ಅವಿಸ್'' (avis) ಮೂಲ. ಅವಿಸ್ ಎಂದರೆ ಹಕ್ಕಿ. ಹಾರುವ ಯಂತ್ರದ ಕಲ್ಪನೆ ಅನಾದಿಯಲ್ಲಿ ಹಕ್ಕಿಗಳಿಂದಲೇ ಪ್ರೇರಿತವಾದದ್ದಲ್ಲವೆ? ಇಂಡೋನೇಶಿಯಾದ ಸರಕಾರ ತನ್ನ ವಿಮಾನ ಸಾರಿಗೆ ಸಂಸ್ಥೆಯನ್ನು ''ಗರುಡ'' ಎಂದು ಕರೆಯುವುದು ಇಲ್ಲಿ ಉಲ್ಲೇಖನೀಯ. ಅದು ಈಗ ಇಸ್ಲಾಂ ಧರ್ಮವನ್ನು ಸ್ವೀಕರಿಸಿರುವ ಆ ದೇಶದ ಹಿಂದೂ ಗತಕಾಲಕ್ಕೆ ಸ್ಮಾರಕವಾಗಿದೆ.

ಇನ್ನು ''ರೈಲು'' ಗಾಡಿಯ ವಿಚಾರ. ಹಳೇ ಮೈಸೂರಲ್ಲಿ ''ರೈಲು'' ಮಾತ್ರವೆಂದೂ ಬೇರೆಡೆ ''ಟ್ರೈಯಿನ್'' ಎಂದೂ ಕನ್ನಡದಲ್ಲಿ ಸೇರಿ ಹೋದ ಈ ಪದಕ್ಕೆ ''ಉಗಿಬಂಡಿ'' ಎಂಬ ಅನ್ವರ್ಥ ನಾಮಾಂತರವೂ ಇದೆ. ರೈಲು ಎಂಬುದು ರೈಲುಗಾಡಿ ಚಲಿಸುವ ಕಂಬಿ ಅಥವಾ ಹಳಿ (rail) ಯ ಇಂಗ್ಲೀಷ್ ಹೆಸರು. ಪೂರ್ಣ ಹೆಸರು rail-way train-ಅರ್ಥ (ಕಬ್ಬಿಣದ) ಕಂಬಿಯ ಸಾಲು ಬಂಡಿ. Train ಎಂದರೆ ಎಳೆಯಲ್ಪಡುವ (ಲ್ಯಾಟಿನ್ trahere = ಎಳೆ) ಸಾಲು (ಬಂಡಿ). ಟ್ರೇಯಿನು ಬಂಡಿಯೇ ಆಗಿರಬೇಕಿಲ್ಲ. ರಾಜ ರಾಣಿಯರ ಮೇಲುಡುಪ ಉದ್ದ ಸೆರಗು ಅವರ ಹಿಂದೆ ನೆಲದ ಮೇಲೆ ಎಳೆಯಲ್ಪಡುವುದೂ ಟ್ರೈಯಿನೇ. ರೈಲೆಂಬ ಪದ ಮೂಲತಃ regulu ಎಂಬ ಲ್ಯಾಟಿನ್ ಶಬ್ದದಿಂದ ಫ್ರೆಂಚ್ ಇತ್ಯಾದಿ ಭಾಷೆಗಳ ಮೂಲಕ ಇಂಗ್ಲೀಷಿಗೆ ಬಂದದ್ದು. regulu ಎಂದರೆ ನೆಟ್ಟನ್ನ ಕೋಲು - ಮುಂದೆ ಕಬ್ಬಿಣದ ಕಂಬಿ. ಹೀಗೆ ಕಂಬಿಯೇ ಒಂದೆಡೆ ವಾಹನವನ್ನು ಪ್ರತಿನಿಧಿಸಿದರೆ ಇನ್ನೊಂದೆಡೆ ಎಳೆಯಲ್ಪಡುವ ಸಾಲೇ ವಾಹನವೆನಿಸಿತು. ಭಾಷೆಗಳಲ್ಲಿ ಪದಗಳು ಅಂಶಗಳನ್ನು ಉದುರಿಸುತ್ತ ತಲೆಯನ್ನೋ ಬಾಲವನ್ನೋ ಮಾತ್ರ ಉಳಿಸಿಕೊಳ್ಳುವ ಪ್ರವೃತ್ತಿಗೆ ಈ ಎಲ್ಲ ವಾಹನಗಳು ದೃಷ್ಟಾಂತಗಳಾಗಿವೆ. ●

**ಪಾವೆಂ.**

# ಸೈನ್ಯಾಧಿಕಾರಿಯ ಸೇವಕ

[ಮೊಪಾಸಾನ ದಿ ಆರ್ಡರ್ಲಿ ಕಥೆಯ ರೂಪಾಂತರ]

● ಡಾ. ಪಿ.ವಿ. ರಾಮಚಂದ್ರ

ಸಮಾಧಿ ಸ್ಥಳವು ಸೈನಿಕರು ಮತ್ತು ಸೈನ್ಯಾಧಿಕಾರಿಗಳಿಂದ ತುಂಬಿಹೋಗಿತ್ತು. ಅವರುಗಳು ತೊಟ್ಟಿದ್ದ ಟೊಪ್ಪಿಗಳು, ಧರಿಸಿದ್ದ ಕೆಂಪು ಪಟ್ಟೆಯುಳ್ಳ ಪ್ಯಾಂಟುಗಳು, ಭುಜ ಪಟ್ಟಿಗಳು, ಅವುಗಳಿಗೆ ಹಾಕಿದ್ದ ಬಣ್ಣ ಬಣ್ಣದ ದಾರಗಳ ಗಂಟುಗಳು, ಮೆರುಗು ಕೊಟ್ಟಿದ್ದ ಚಿನ್ನದ ಗುಂಡಿಗಳು ಕಣ್ಣು ಕುಕ್ಕುತ್ತಿದ್ದವು. ಅಲ್ಲಿದ್ದ ಕ್ರಾಸುಗಳು ತಮ್ಮ ಬಾಹುಗಳನ್ನು ತೆರೆದು ದುಃಖವನ್ನು ತೋಡಿಕೊಳ್ಳುವಂತೆ ಕಾಣುತ್ತಿದ್ದವು. ಸಮಾಧಿಗಳ ಬಳಿ ಅಮೃತ ಶಿಲೆಯ ಕ್ರಾಸುಗಳಿದ್ದವು. ಕಬ್ಬಿಣದ ಕ್ರಾಸುಗಳಿದ್ದವು. ಮರದ ಕ್ರಾಸುಗಳೂ ಇದ್ದವು. ಇವೆಲ್ಲವೂ ಹಿಂದೆ ಮೃತರಾದವರ ಬಗ್ಗೆ ಹೇಳುವಂತೆ ನಿಂತಿದ್ದವು.

ಕರ್ನಲ್ ಲಿಮೋಸಿನ್ನನ ಪತ್ನಿಯನ್ನು ಈಗ ತಾನೆ ಹೂಳಲಾಗಿತ್ತು. ಆಕೆ ಸತ್ತು ಎರಡು ದಿನಗಳಾಗಿದ್ದವು. ನದಿಯಲ್ಲಿ ಸ್ನಾನ ಮಾಡಲು ಹೋದವಳು ನೀರಿನಲ್ಲಿ ಮುಳುಗಿ ಅಸು ನೀಗಿದ್ದಳು. ಪತಿಯನ್ನು ದುಃಖಸಾಗರದಲ್ಲಿ ಮುಳುಗಿಸಿದ್ದಳು. ಅವಳನ್ನು ಇಂದು ಸಮಾಧಿಗೊಳಿಸಲಾಗಿತ್ತು. ಸಮಾಧಿಯ ಧಾರ್ಮಿಕ ಕ್ರಿಯೆಗಳನ್ನು ಮುಗಿಸಿ ಪಾದ್ರಿ ಅಲ್ಲಿಂದ ಹಿಂತಿರುಗಿದ್ದರು. ಕರ್ನಲ್ ತನ್ನ ಇಬ್ಬರು ಸಹೋದ್ಯೋಗಿಗಳ ಆಸರೆ ಪಡೆದು ಗುಳಿಯ ಬಳಿಯೇ ನಿಂತಿದ್ದ. ಓಕ್ ಮರದಿಂದ ಮಾಡಿದ್ದ ಶವಪೆಟ್ಟಿಗೆಯ ಮೇಲ್ಭಾಗ ಸ್ವಲ್ಪ ಕಾಣುತ್ತಿತ್ತು. ಅದರಲ್ಲೇ ಅವನ ಪ್ರೀತಿಯ ಪತ್ನಿಯ ಪಾರ್ಥಿವ ಶರೀರ ಅಡಗಿತ್ತು. ಕರ್ನಲ್ ಎತ್ತರದ ನಿಲುವಿನ ಆಳು. ತೆಳುದೇಹದ ಆತನು ಮುದುಕನಂತೆ ಕಾಣುತ್ತಿದ್ದ. ಮೀಸೆಯ ಕೂದಲುಗಳು ಬೆಳ್ಳಗಾಗಿದ್ದವು. ಮೂರು ವರ್ಷಗಳ ಹಿಂದಷ್ಟೇ ಮೃತಳನ್ನು ಮದುವೆಯಾಗಿದ್ದ. ಅವಳು ಅವನ ಸಹೋದ್ಯೋಗಿ ಕರ್ನಲ್ ಸಾರ್ತಿಯ ಮಗಳಾಗಿದ್ದಳು. ಗೆಳೆಯನ ಮರಣದಿಂದ ಅನಾಥಳಾಗಿದ್ದವಳನ್ನು ಪತ್ನಿಯನ್ನು ವರಿಸಿ ಸನಾಥಳನ್ನಾಗಿ ಮಾಡಿದ್ದನು.

ಅವನ ಅಕ್ಕಪಕ್ಕದಲ್ಲಿ ಆಸರೆಯಾಗಿ ನಿಂತಿದ್ದ ಕ್ಯಾಪ್ಟನ್ ಮತ್ತು ಲೆಫ್ಟಿನೆಂಟ್ ತಮ್ಮ ಹಿರಿಯ ಅಧಿಕಾರಿಯನ್ನು ಅಲ್ಲಿಂದ ಕರೆದೊಯ್ಯಲು ಪ್ರಯತ್ನಿಸಿದರು. ಆದರೆ ಆತ ಅನುಮತಿ ನೀಡದೆ, ಅವಿರತ ಅಶ್ರುಗಳನ್ನು ಅತಿ ಪ್ರಯಾಸದಿಂದ ಅಂಕಿತದಲ್ಲಿಟ್ಟು, ಇನ್ನೂ ಕೆಲವು ಕ್ಷಣಗಳು ಅಲ್ಲೇ ಇರುವ ಆಸೆಯನ್ನು ವ್ಯಕ್ತಗೊಳಿಸಿದ. ಆತಳ ಗುಳಿಯಲ್ಲಿ ಅವನ ಸರ್ವಸ್ವವೂ ಬಿದ್ದಿರುವಂತೆ ಅವನ ಅನಿಸಿಕೆಯಾಗಿತ್ತು. ಅವನ ಮನ, ಮಡದಿ ಎಲ್ಲವೂ ಮುಳುಗಿರುವಂತೆ ತಿಳಿದಿದ್ದ.

ಕೊನೆಗೆ ಜನರಲ್ ಅವನ ಬಳಿ ಬಂದು ಬಾಹು ಹಿಡಿದು ಅಲ್ಲಿಂದ ಕರೆದೊಯ್ದರು

"ಬಾರಯ್ಯಾ ಕರ್ನಲ್, ಇನ್ನು ಸಾಕು ಮಾಡು" ಎಂದು ಹೇಳಿದರು.

ಕರ್ನಲ್ ತನ್ನ ಹಿರಿಯ ಅಧಿಕಾರಿಯ ಮಾತಿಗೆ ಮನ್ನಣೆ ಇತ್ತು, ತನ್ನ ಮನೆಗೆ ಹಿಂತಿರುಗಿದ. ತನ್ನ ಅಧ್ಯಯನ ಕಕ್ಷೆಯ ಬಾಗಿಲು ತೆರೆದು ಒಳಹೊಕ್ಕಾಗ, ಅಲ್ಲಿ ಮೇಜಿನ ಮೇಲೆ ಪತ್ರವೊಂದು ಕಂಡಿತು. ಪತ್ರವನ್ನು ತೆಗೆದುಕೊಂಡವನು ತನ್ನ ಪತ್ನಿಯ ಕೈಬರಹವನ್ನು ಕಂಡು ಬವಳಿ ಬೀಳುವವನಿದ್ದ. ಲಕೋಟೆಯ ಮೇಲೆ ಅಂದಿನ ಅಂಚೆ ಮುದ್ರೆ ಬಿದ್ದಿತ್ತು. ಅವನು ಲಕೋಟೆಯನ್ನು ಹರಿದು ಒಳಗಿದ್ದ ಪತ್ರವನ್ನು ತೆಗೆದು ಓದಲಾರಂಭಿಸಿದ.

ಪತ್ರದ ಒಕ್ಕಣೆ 'ಅಪ್ಪಾ' ಎಂದಿತ್ತು.

"ಅಪ್ಪಾ ಎಂದು ನಿಮ್ಮನ್ನು ಕರೆಯಬಹುದೆಂದು ನೀವು ಬಹಳ ಹಿಂದೆಯೇ ನನಗೆ ಅನುಮತಿ ಕೊಟ್ಟಿದ್ದೀರಿ. ಅಂತೆಯೇ ನಾನು ನಿಮ್ಮನ್ನು ಸಂಬೋಧಿಸುತ್ತಿದ್ದೇನೆ. ನಿಮಗೆ ಈ ಪತ್ರ ಸಿಗುವ ವೇಳೆಗೆ ನಾನು ಮೃತಳಾಗಿ ಮಣ್ಣಿನ ಕೆಳಗಿರುತ್ತೇನೆ. ಆದುದರಿಂದ ನೀವು ನನ್ನನ್ನು ಕ್ಷಮಿಸುತ್ತೀರೆಂದು ನಂಬಿದ್ದೇನೆ. ನಾನು ನಿಮ್ಮಲ್ಲಿ ಕರುಣೆಯನ್ನು ಉದ್ದೀಪಿಸಲು ಇಷ್ಟಪಡುತ್ತಿಲ್ಲ, ನನ್ನ ಪಾಪವನ್ನು ತೊಳೆದುಹಾಕಿ ಎಂದೂ ಕೇಳುವುದಿಲ್ಲ. ನಾನು ಇನ್ನೊಂದು ಘಂಟೆಯಲ್ಲಿ ಸಾಯಲಿರುವ ಸ್ತ್ರೀ, ಸಾಯುವ ಸಮಯದಲ್ಲಿ ಸಂಪೂರ್ಣ ಸತ್ಯವನ್ನು ಸಾರಬೇಕೆಂದಿರುವೆನು.

"ನೀವು ನನ್ನ ತಂದೆ ಸತ್ತಮೇಲೆ ದೊಡ್ಡ ಮನಸ್ಸು ಮಾಡಿ ನನ್ನನ್ನು ಮದುವೆಯಾದಿರಿ. ನಾನು ಕೃತಜ್ಞತೆಯಿಂದ ನನ್ನನ್ನು ನಿಮಗೆ ಸಮರ್ಪಿಸಿಕೊಂಡೆ, ನಿಮ್ಮನ್ನು ಸ್ವಂತ ತಂದೆಯಂತೆ ಪ್ರೀತಿಸಿದೆ. ಒಂದು ದಿನ ನಾನು ನಿಮ್ಮ ಬಳಿ ಏಕಾಂತದಲ್ಲಿದ್ದಾಗ ನೀವು ನನ್ನನ್ನು ಮುದ್ದಿಸಿದಿರಿ. ಆಗ ನನ್ನ ಬಾಯಿಯಿಂದ 'ಅಪ್ಪಾ' ಎಂಬ ಶಬ್ದ ಬಂದಿತು. ಅದು ಮನದ ಅಂತರಾಳದ ಕರೆಯಾಗಿತ್ತು. ನೀವು ನನಗೆ ತಂದೆಯಂತಿದ್ದೀರಿ, ತಂದೆ, ಕೇವಲ ತಂದೆ. ಆಗ ನೀವು ನಕ್ಕು ನನಗೆ ಹೇಳಿದಿರಿ- 'ಪರವಾಗಿಲ್ಲ ಮಗು, ನನ್ನನ್ನು ಹಾಗೆಯೇ ಕರೆ, ನನಗೆ ನಿನ್ನ ಕರೆ ಸಂತೋಷಕೊಡುತ್ತದೆ.

"ನಾವು ನಗರಕ್ಕೆ ಬಂದೆವು. ಕ್ಷಮಿಸಿ ಅಪ್ಪಾ, ನಾನು ಪ್ರೇಮದ ಸುಳಿಯಲ್ಲಿ ಸಿಲುಕಿಕೊಂಡೆ. ನಾನು ಸುಮಾರು ಎರಡು ವರ್ಷಗಳವರೆಗೆ ನನ್ನ ಆಸೆಗಳನ್ನು ಅದುಮಿಟ್ಟುಕೊಂಡಿದ್ದೆ- ಅನಂತರ ತಡೆದುಕೊಳ್ಳಲು ಅಶಕ್ತಳಾಗಿ ನಾನು ಜಾರಿದೆ, ಜಾರೆಯಾದೆ.

"ಅವನಾರೆಂದು ಯೋಚಿಸುತ್ತಿರುವಿರಾ? ಅವನು ಯಾರೆಂಬುದನ್ನು ನೀವು ಊಹಿಸಲಾರಿರಿ. ಸದಾ ನನ್ನ ಸುತ್ತಮುತ್ತ ನಿಮ್ಮ ಹನ್ನೆರಡು ಅಧಿಕಾರಿಗಳು ಇರುತ್ತಿದ್ದರು. ನೀವು ಅವರನ್ನು ನನ್ನ ದ್ವಾದಶ ರಾಶಿಗಳೆಂದು ಹೇಳುತ್ತಿದ್ದೀರಿ. ನನ್ನ ಪ್ರಿಯಕರನು ಯಾರೆಂಬುದನ್ನು ತಿಳಿಯಲು ಪ್ರಯತ್ನಿಸಬೇಡಿ. ಅವನ ಸ್ಥಾನದಲ್ಲಿ ಯಾರೇ ಇದ್ದರೂ, ಅದೇ ರೀತಿ ನಡೆದುಕೊಳ್ಳುತ್ತಿದ್ದರು. ನೀವು ಅವನನ್ನು ದ್ವೇಷಿಸಬೇಡಿ. ಅವನು ನಿಜವಾಗಿಯೂ ನನ್ನನ್ನು ಪ್ರೀತಿಸಿದ.

"ಒಂದು ದಿನ ನಾವು ಬೆಕಾಸೆಯೆಂಬ ಸಣ್ಣ ದ್ವೀಪದಲ್ಲಿ ಸೇರಬೇಕಾಗಿತ್ತು. ಆ ಜಾಗ ನಿಮಗೆ ಗೊತ್ತಲ್ಲ, ಗಿರಣಿಯ ಬಳಿ ಇರುವ ಸ್ಥಳ. ನಾನು ಈಜಿಕೊಂಡು ಅಲ್ಲಿಗೆ ಹೋಗುತ್ತಿದ್ದೆ. ಆತ ನನಗಾಗಿ ಕಾಯುತ್ತಿರುತ್ತಿದ್ದ. ನಾನು ಅಲ್ಲಿಂದ ಹಿಂತಿರುಗಿದ ಮೇಲೆ ಆತ ಕತ್ತಲಾಗುವವರೆಗೂ ಅಲ್ಲೇ ಉಳಿದಿದ್ದು ಅನಂತರ ಯಾರ ಕಣ್ಣಿಗೂ ಕಾಣದಂತೆ ಅಲ್ಲಿಂದ ಹಿಂತಿರುಗುತ್ತಿದ್ದ. ಆ ದಿನವೂ ಈ ಅಭಿಸಾರಿಕೆ ಅಲ್ಲಿಗೆ ಹೋದಳು. ಅವನನ್ನು ಭೇಟಿಯಾದೆ. ಅಷ್ಟರಲ್ಲೇ ಪೊದೆಗಳ ಮರೆಯಿಂದ ಯಾರೋ ಇಣುಕಿ ನೋಡಿದರು. ಅವನು ನಿಮ್ಮ ಸೇವಕ ಫಿಲಿಪ್ ಆಗಿದ್ದ.

ನಾನು ಭಯಭೀತಳಾದೆ. ನಮ್ಮ ಕೊನೆಗಾಲ ಬಂದಂತೆ ಕಂಡಿತು. ನನ್ನ ಪ್ರಿಯಕರ ಧೈರ್ಯ ತುಂಬಿ, "ಹೆದರಬೇಡ, ಈಜಿಕೊಂಡು ಹಿಂತಿರುಗು. ನಾನು ಈತನೊಡನೆ ಇಲ್ಲೇ ಇರುತ್ತೇನೆ" ಎಂದು ಹೇಳಿದ. ನಾನು ಬೆದರಿ ಬೆಂಡಾಗಿ ಬಂದೆ. ಮನೆಯಲ್ಲಿ ಏನೋ ಅನಾಹುತ ನಡೆಯಲಿದೆಯೆಂಬ ಆತಂಕ ಕಾಡುತ್ತಿತ್ತು.

ಒಂದು ಘಂಟೆಯ ಅನಂತರ ಹೊರಗಿನ ಜಗಲಿಯ ಬಳಿ ಫಿಲಿಪ್ ನನ್ನನ್ನು ಮೆಲುದನಿಯಲ್ಲಿ ಕರೆದು ಹೇಳಿದ,- 'ಅಮ್ಮಾವರೆ, ನಾನು ನಿಮ್ಮ ಸೇವಕ. ಏನಾದರೂ ಪತ್ರಗಳಿದ್ದರೆ ಕೊಡಿ' ಆಗ ನನಗೆ ನನ್ನ ಪ್ರಿಯಕರನು ಹಣ ಕೊಟ್ಟು ತನ್ನ ವಶದಲ್ಲಿ ಇಟ್ಟುಕೊಂಡಿರುವನೆಂಬುದು ತಿಳಿದುಹೋಯಿತು. ನಾನು ಅವನಿಗೆ ಪತ್ರ ಕೊಟ್ಟೆನು. ಅವನು ಅದಕ್ಕೆ ಉತ್ತರವನ್ನು ತಂದ. ಅವನು ನಮ್ಮ ಪತ್ರವಾಹಕನಾದ. ಈ ರೀತಿ ಸುಮಾರು ಎರಡು ತಿಂಗಳುಗಳು ಕಳೆದವು. ನಿಮಗೆ ಫಿಲಿಪ್ಪನ ಮೇಲೆ ನಂಬಿಕೆಯಿರುವಂತೆಯೇ ನನಗೂ, ನನ್ನ ಪ್ರಿಯಕರನಿಗೂ ಅವನ ಮೇಲೆ ನಂಬಿಕೆಯಿತ್ತು.

"ಅಪ್ಪಾ, ಮುಂದೇನಾಯಿತೆಂದು ಕೇಳಿ. ಒಂದು ದಿನ ನಾನು ಆ ದ್ವೀಪವನ್ನು ತಲುಪಿದೆ. ನನ್ನ ಪ್ರಿಯನು ಇರಲಿಲ್ಲ. ಅವನ ಬದಲು ನಿಮ್ಮ ಸೇವಕನಿದ್ದ. ಅವನು ನನಗಾಗಿ ಕಾಯುತ್ತಿದ್ದ. ಅವನ ಆಸೆಯನ್ನು ಪೂರೈಸದಿದ್ದರೆ ನಮ್ಮ ಬಗ್ಗೆ ಎಲ್ಲವನ್ನೂ ನಿಮಗೆ ತಿಳಿಸುವುದಾಗಿಯೂ, ನನ್ನ ಪ್ರೇಮಪತ್ರಗಳನ್ನು (ಕೆಲವನ್ನು ಕದ್ದು ತೆಗೆದಿಟ್ಟು

# ಫ್ರೆಂಚ್ ಕಥೆಗಾರ

ಪ್ರಸಿದ್ಧ ಕಥೆಗಾರ ಗಾಯ್ ದ ಮೊಪಾಸಾನು ಇಂದಿಗೆ ೧೩೦ ವರ್ಷಗಳ ಹಿಂದೆ, ಆಗಸ್ಟ್ ೫ ರಂದು, ೧೮೫೦ ರಲ್ಲಿ ಹುಟ್ಟಿದನು. ಇವನ ಪೂರ್ಣ ಹೆಸರು ಹೆನ್ರಿ ರೆನಿ ಆಲ್ಬರ್ಟ್ ಗಾಯ್ ದ ಮೊಪಾಸಾ. ಹನ್ನೊಂದನೆಯ ವಯಸ್ಸಿನಲ್ಲಿ ತಂದೆ-ತಾಯಿ ಬೇರೆಯಾದದ್ದು ಇವನ ಜೀವನದ ದುಃಖದ ಘಟನೆ. ತಂದೆ ಗುಸ್ತಾವ್ ಮಗನಿಗೆ ಆರ್ಥಿಕ ಸಹಾಯ ಒದಗಿಸುತ್ತಿದ್ದ. ಮೊಪಾಸಾ ತಾಯಿಯ ಪಕ್ಷ ವಹಿಸಿದ. ಕಾನೂನಿನ ವಿದ್ಯಾರ್ಥಿಯಾಗಿದ್ದಾಗ ಫ್ರಾನ್ಸ್ ಮತ್ತು ಪರ್ಷಿಯಾ ನಡುವೆ ಯುದ್ಧ ಪ್ರಾರಂಭವಾಗಲು ಸೈನ್ಯ ಸೇರಿದ. ತಂದೆಯ ಶಿಫಾರಸಿನಿಂದಾಗಿ ಬಡ್ತಿಗಳನ್ನು ಪಡೆದ. ಅನಂತರ ಸೈನ್ಯದಿಂದ ಹೊರಬಂದು ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿದ. ತಾಯಿಯ ಮಿತ್ರ ಹಾಗೂ ಪ್ರಸಿದ್ಧ ಸಾಹಿತಿ ಫ್ಲೋಬೇರ್ ಬಳಿ ಸಾಹಿತ್ಯದ ವಿದ್ಯಾರ್ಥಿಯಾಗಿ ಸೇರಿದ. ಗುರುವಿನ ಮನೆಯಲ್ಲಿ ಅನೇಕ ಪ್ರಸಿದ್ಧ ಸಾಹಿತಿಗಳ ಪರಿಚಯವಾಯಿತು. ಎಮಿಲಿಜೋಲಾ, ತುರ್ಗನೇವ್, ಹೆನ್ರಿ ಜೇಮ್ಸ್ ಮುಂತಾದವರ ಸಾಹಿತ್ಯ ಚರ್ಚೆಗಳನ್ನು ಕೇಳುವ ಅವಕಾಶ ಗುರುವಿನ ಮನೆಯಲ್ಲಿ ಸಿಗುತ್ತಿತ್ತು. ೧೮೮೦ ರಲ್ಲಿ ಪ್ರಥಮ ಕಾವ್ಯ ಸಂಕಲನ ಪ್ರಕಟವಾಯಿತು. ಎಮಿಲಿ ಜೋಲಾ ೧೮೮೦ ರಲ್ಲಿ ಒಂದು ಕಥಾಸಂಕಲನವನ್ನು ಪ್ರಕಟಿಸಿದ. ಅದರಲ್ಲಿ ಅನೇಕರ ಕಥೆಗಳಿದ್ದವು. ಗಾಯ್‌ನ ಪ್ರಥಮ ಕಥೆ

ಕೊಂಡಿದ್ದ) ನಿಮಗೆ ಕೊಡುವುದಾಗಿಯೂ ತಿಳಿಸಿದ. ನನ್ನ ಭಯಕ್ಕೆ ಎಣೆಯೇ ಇರಲಿಲ್ಲ. ಅಪ್ಪಾ, ನಿಮಗೆ ಮೋಸ ಮಾಡಿದ ಭಯ - ನನ್ನನ್ನು ಕಾಪಾಡಿದ ನಿಮಗೆ ವಂಚನೆ ಮಾಡಿದ ಭಯ ನನ್ನನ್ನು ವಿಮೂಢಳನ್ನಾಗಿಸಿತು. ನಾನು ಹುಚ್ಚಿಯಂತಾದೆ. ಈ ಸೇವಕನ ಮಾತಿನಂತೆ ನಡೆಯದೆ ಬೇರೆ ಮಾರ್ಗವೇ ಇರಲಿಲ್ಲ. ಸೇವಕನೊಬ್ಬನನ್ನು ಕೂಡುವುದು ಎಷ್ಟು ನಾಚಿಕೆಗೇಡಿನ ಕೆಲಸ. ನಾವು ಅಬಲೆಯರು ಬಲು ಬೇಗ ಬಲಶಾಲಿಗಳ ಬಲೆಗೆ ಬೀಳುತ್ತೇವೆ. ನಾರಿ ಒಮ್ಮೆ ಜಾರಿದರೆ, ಸದಾ ಜಾರಿಕೊಂಡೇ ಹೋಗುತ್ತಾಳೆ. ನಿಮ್ಮಿಬ್ಬರಲ್ಲಿ ಒಬ್ಬರು ಹಾಗೂ ನಾನೊಬ್ಬಳು ಬಲು ಬೇಗ ಸಾಯಬೇಕಾಗಬಹುದೆಂದು ನನಗೆ ಆ ಕ್ಷಣವೇ ತಿಳಿದುಹೋಯಿತು. ನಾನು ಆ ಕ್ರೂರಿಯ ಆಸೆಯನ್ನು ಈಡೇರಿಸಿದೆ.

"ನೋಡಿ ಅಪ್ಪಾಜಿ, ನಾನು ಸಬೂಬು ಹೇಳಿ ಮಾಡಿದ ತಪ್ಪಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಡುತ್ತಿಲ್ಲ. ನಾನು ಮೊದಲನೆಯ ಸಲ ಅವನ ತಾಳಕ್ಕೆ ತಕ್ಕಂತೆ ಕುಣಿಯುವ ಮೊದಲೇ ಯೋಚಿಸಬೇಕಾಗಿತ್ತು. ಹಾಗೆ ಮಾಡದಿದ್ದುದು ನನ್ನ ತಪ್ಪು. ನಿಮ್ಮ ಸೇವಕ ಪದೇ ಪದೇ ನನ್ನನ್ನು ಹೆದರಿಸಿ, ನನ್ನನ್ನು ಪಡೆಯಲಾರಂಭಿಸಿದ. ಅವನೂ ನನ್ನ ಪ್ರಿಯಕರನಂತೆ ನನ್ನ ಪ್ರೇಮಿಯೆಂಬುದು ನಿಜ. ಆದರೆ ಕಾರ್ಯ ಘೃಣಿತವಲ್ಲವೇ? ನನಗೆ ಎಂತಹ ಶಿಕ್ಷೆ?

"ನನ್ನ ಪಾಲಿಗೆ ಎಲ್ಲವೂ ಮುಗಿದಂತೆ. ನಾನು ಸಾಯಲೇಬೇಕು. ಜೀವಂತಳಿದ್ದಾಗ

# ಗಾಯ್ ದ ಮೊಪಾಸಾ

"ಬಾಲ್-ಆಫ್-ಫ್ಯಾಟ್" ಆ ಸಂಗ್ರಹದಲ್ಲಿತ್ತು. ಓದುಗರಿಗೆ ಮೊಪಾಸಾನ ಕಥೆ ಬಹಳ ಹಿಡಿಸಿತು. ಅವನು ಬರೆದ ಕಥೆಯನ್ನೇ ಸಂಗ್ರಹದ ಸರ್ವಶ್ರೇಷ್ಠ ಕಥೆಯೆಂದು ನಿರ್ಧರಿಸಲಾಯಿತು. ಇದರಿಂದ ಉತ್ಸಾಹಿತನಾದ ಮೊಪಾಸ ಸಣ್ಣ ಕಥೆಗಳನ್ನು ಬರೆಯಲಾರಂಭಿಸಿದ. ಇವನ ಕಥೆಗಳು ಬಹಳ ಜನಪ್ರಿಯವಾದವು. ೧೮೮೦-೧೮೯೦ ಈ ಕಥೆಗಾರನ ಉನ್ನತಿ-ಪ್ರಸಿದ್ಧಿಯ ದಶಕ. ಕೆಲವು ಕಾದಂಬರಿಗಳನ್ನು ಬರೆದ. ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸಿದ. ಇವನ ಕಥೆಗಳಲ್ಲಿ ಶೋಷಿತ ಸ್ತ್ರೀಯರನ್ನು ಕಾಣುತ್ತೇವೆ; ಪತಿಯರಿಗೆ ವಂಚನೆ ಎಸಗುವ ಪತ್ನಿಯರನ್ನು ಕಾಣುತ್ತೇವೆ. ಮಕ್ಕಳ ಬಗ್ಗೆ ಅಸಡ್ಡೆ ತೋರುವ ತಂದೆಯರನ್ನು ಕಥೆಗಳಲ್ಲಿ ವರ್ಣಿಸಿದ್ದಾನೆ.

ಅವಿವಾಹಿತನಾಗಿದ್ದ ಮೊಪಾಸಾ ಸಿಫಿಲಿಸ್ ರೋಗ ಹೊಂದಿದ್ದ. ಜೀವನದ ಅಂತಿಮ ದಿನಗಳಲ್ಲಿ ಅರೆ ಹುಚ್ಚನಾಗಿ, ಆತ್ಮಹತ್ಯೆಯ ಪ್ರಯತ್ನ ನಡೆಸಿದ. ಕತ್ತಿಯಿಂದ ಕತ್ತನ್ನು ಕೊಯ್ದುಕೊಂಡಿದ್ದ ಇವನನ್ನು ಆಸ್ಪತ್ರೆಗೆ ಸೇರಿಸಲಾಯಿತು. ಅಲ್ಲಿಯೇ, ೧೮೯೩ನೇ ಇಸವಿ ಜುಲೈ ೬ ರಂದು ಮೊಪಾಸಾ ಮೃತನಾದ. ಈತನ ಕಥೆಗಳು ವಿಶ್ವದ ಎಲ್ಲಾ ಭಾಷೆಗಳಲ್ಲೂ ಅನುವಾದಗೊಂಡಿವೆ; ಅನುವಾದಗೊಳ್ಳುತ್ತಿವೆ.

★

ತಪ್ಪನ್ನು ಒಪ್ಪಿಕೊಳ್ಳುವ ಧೈರ್ಯ ನನಗುಂಟಾಗಲಿಲ್ಲ. ನಾನಿನ್ನು ಪರಿಶುದ್ಧಳಾಗಿರುವುದು ಸಾಧ್ಯವಿಲ್ಲ. ನಾನು ಎಲ್ಲರನ್ನೂ ಕಲುಷಿತಗೊಳಿಸುತ್ತಿರುವೆನೆಂಬ ಭಾವನೆ ಮನಸಲ್ಲಿ ಬೇರೂರಿದೆ. ನಾನೀಗ ನದಿಯಲ್ಲಿ ಸ್ನಾನ ಮಾಡಲು ಹೋಗುತ್ತಿದ್ದೇನೆ. ನಾನು ಹಿಂತಿರುಗಿ ಬರುವುದಿಲ್ಲ. ನಿಮಗೆ ಬರೆದ ಈ ಪತ್ರ ಮೊದಲು ನನ್ನ ಪ್ರಿಯಕರನಿಗೆ ಹೋಗುವುದು. ನಾನು ಸತ್ತ ಅನಂತರ ಅವನಿಗೆ ನನ್ನ ಪತ್ರ ಸಿಗುವುದು. ಯಾರಿಗೂ ಏನೂ ಗೊತ್ತಾಗದಂತೆ ಆತನು ನನ್ನ ಕೊನೆಯ ಕೋರಿಕೆಯಂತೆ ನಿಮಗೆ ಈ ಪತ್ರವನ್ನು ಕಳುಹಿಸುತ್ತಾನೆ. ನೀವು ನನ್ನ ಸಮಾಧಿ ಸ್ಥಳದಿಂದ ಮನೆಗೆ ಬಂದಾಗ ಈ ಪತ್ರವು ಸಿಗುವುದು.

"ನಮಸ್ಕಾರ ಅಪ್ಪಾ ನಾನು ಹೆಚ್ಚು ಹೇಳಲು ಇಷ್ಟ ಪಡುವುದಿಲ್ಲ. ನೀವು ಸರಿ ತೋರಿದಂತೆ ಮಾಡಿ. ನನ್ನನ್ನು ಕ್ಷಮಿಸಿ, ಕೊನೆಯ ವಂದನೆಗಳು"

ಕರ್ನಲ್ ಬೆವತಿದ್ದ ಹಣೆಯನ್ನು ಒರಸಿಕೊಂಡನು. ಯುದ್ಧ ಕ್ಷೇತ್ರದಲ್ಲಿ ತೋರುತ್ತಿದ್ದ ತಾಳ್ಮೆ ಅವನಲ್ಲಿ ಎದ್ದುಕಾಣುತ್ತಿತ್ತು. ಕರೆಗಂಟೆಯನ್ನು ಬಾರಿಸಿದ; ಸೇವಕನೊಬ್ಬ ಬಂದ. ಅವನಿಗೆ ಫಿಲಿಪ್ಪನನ್ನು ತನ್ನ ಬಳಿಗೆ ಕಳುಹಿಸಬೇಕೆಂದು ಆದೇಶ ನೀಡಿದ. ಅನಂತರ ತನ್ನ ಮೇಜಿನ ಡ್ರಾಯರ್ ಎಳೆದರು. ಕೆಲವೇ ಕ್ಷಣಗಳಲ್ಲಿ ಕೆಂಪು ಮೀಸೆಯ, ಕಪಟಿಯಂತೆ ಕಂಡುಬರುತ್ತಿದ್ದ ದೊಡ್ಡ ದೇಹದ ಸೈನಿಕ ಫಿಲಿಪ್ ನಿಂತಿದ್ದ. ಕರ್ನಲ್ ಆತನನ್ನು ನೇರ ನೋಟದಿಂದ ನೋಡಿದ. - "ನೀನು ನನ್ನ ಹೆಂಡತಿಯ ಪ್ರಿಯಕರನ ಹೆಸರನ್ನು ಈಗ ತಿಳಿಸುತ್ತೀಯೆ" ಎಂದ.

"ಆದರೆ, ಕರ್ನಲ್...." ಫಿಲಿಪ್ ಏನೋ ಹೇಳುವವನಿದ್ದ.

ಅರೆ ತೆರೆದ ಡ್ರಾಯರಿನಿಂದ ತಮ್ಮ ರಿವಾಲ್ವರನ್ನು ಹೊರಕ್ಕೆ ತೆಗೆದು ಕರ್ನಲ್ ಹೇಳಿದರು. "ಸರಿ, ಬೇಗ ಬೊಗಳು. ನಾನು ಒಣ ಬೆದರಿಕೆ ಒಡ್ಡುವುದಿಲ್ಲವೆಂದು ನಿನಗೆ ಚೆನ್ನಾಗಿ ತಿಳಿದಿದೆಯಲ್ಲ."

"ಅವನು ಕರ್ನಲ್, - ಅವನು ಕ್ಯಾಪ್ಟನ್ ಆಲ್ಬರ್ಟ್"

ಹೆಸರು ಹೇಳಿ ಮುಗಿಸುವುದರೊಳಗೆ ಕರ್ನಲ್ ಕೈಯಲ್ಲಿದ್ದ ರಿವಾಲ್ವರ್‌ನಿಂದ ಹಾರಿದ ಗುಂಡು ಹಣೆಯ ಮೂಲಕ ಹಾದು ಹೋಗಿ, ಆತ ದೊಪ್ಪನೆ ಧರೆಗೆ ಬಿದ್ದ.

*

★ ಮೋಜಿನ ಸಂಗತಿಗಳನ್ನು ಕಂಡಾಗ ಅದರೊಳಗಿನ ನಿಗೂಢ ಸತ್ಯಕ್ಕಾಗಿ ಹುಡುಕಿ.

- ಬರ್ನಾರ್ಡ್‌ಶಾ

★ ಹಣವಿಲ್ಲದಿದ್ದರೆ ಯಾವ ರೋಗಗಳು ಇರುವುದಿಲ್ಲವೋ ಅಂಥ ರೋಗಗಳನ್ನು ನಿರ್ವಹಿಸಲು ಬೇಕಾದಷ್ಟು ಹಣ ಸಂಪಾದಿಸುವುದೇ ಯಶಸ್ಸು.

- ಮೈಕೆಲ್ ಮಾರ್ಗ್

★ ನಮ್ಮ ಮುಂದಿರುವ ಕತ್ತಲನ್ನು ದೂಷಿಸುವುದಕ್ಕಿಂತಲೂ ಬಳಿಯಿರುವ ದೀಪವನ್ನು ಹಚ್ಚಿ ದಾರಿ ಹುಡುಕುವುದೊಳಿತು.

- ಕೆನಡಿ

ಸಂ. ಭೀಮಸೇನ ಪದಕಿ

# ಭಾರತ ಮತ್ತು ಸಾಗರ

## (ಭೂ-ರಾಜಕೀಯ ವಿವೇಚನೆ)

ಮೂಲ: *ಸರದಾರ ಕೆ.ಎಮ್.ಫಣಿಕ್ಕರ*
ಅನು: *ಎಸ್.ಬಿ.ನರಗುಂದಕರ*

ಭಾರತದ ಇತಿಹಾಸದ ಮೇಲೆ ವಿಸ್ತೃತವಾಗಿ ಪ್ರಭಾವ ಬೀರಿದ ಮಹತ್ವದ ಭೌಗೋಲಿಕ ಘಟಕಗಳೆಂದರೆ: ಹಿಮಾಲಯ ಮತ್ತು ಹಿಂದೂ ಮಹಾಸಾಗರ. ಭಾರತದ ಮೂರೂ ದಂಡೆಗಳನ್ನು ತನ್ನ ನೀರಿನಿಂದ ತೊಳೆಯುವ ಈ ಹಿಂದೂ ಮಹಾಸಾಗರವನ್ನು ಭಾರತ ಬಹಳವಾಗಿ ಅವಲಂಬಿಸಿದೆ.

ಭಾರತದ ಎಲ್ಲ ಬಂದರುಗಳು ಹಿಂದೂ ಮಹಾಸಾಗರದ ಮೇಲೆಯೇ ಇವೆ. ಅದರ ಶೇಕಡ 85 ರಷ್ಟು ವ್ಯಾಪಾರ ಜಲಮಾರ್ಗವನ್ನೇ ಅನುಸರಿಸುತ್ತದೆ. ಉದ್ಯಮಗಳಿಗೆ ಅವಶ್ಯವಾದ ಕಚ್ಚಾ ಸರಕುಗಳೆಲ್ಲ ಬರುವುದು ಸಮುದ್ರ ಮಾರ್ಗದಿಂದಲೆ. ಉಳಿದ ದೇಶಗಳೊಂದಿಗಿನ ಅದರ ವ್ಯಾಪಾರ ಸಂಪರ್ಕವಾದರೂ ಸಮುದ್ರ ಮಾರ್ಗದಿಂದಲೆ ಬೆಳೆದುಕೊಂಡು ಬಂದಿದೆ. ಭಾರತದ ಆಂತರಿಕ ವ್ಯಾಪಾರದ ಬಹುಭಾಗವಾದರೂ ಕಡಲು ದಂಡೆಗುಂಟ ಬಂದರದಿಂದ ಬಂದರಕ್ಕೆ ದೇಶಿ ನಾವೆಗಳಿಂದ ಸಾಗುತ್ತದೆ. ಅತ್ಯಂತ ಪ್ರಾಚೀನ ಕಾಲದಿಂದಲೂ ನರ್ಮದೆಯ ಕೆಳಗಿನ ದಕ್ಷಿಣ ಹಿಂದೂಸ್ತಾನದ ದ್ವೀಪಕಲ್ಪದ ಇತಿಹಾಸ ಹಿಂದೂ ಮಹಾಸಾಗರದೊಂದಿಗೆ ಸಂಬಂಧಿಸಿದೆ.

ಪ್ರಪಂಚದ ಸಾಗರಗಳಲ್ಲಿ ಆಖಾತ ಅಥವಾ ಕೊಲ್ಲಿಯ ಸ್ವರೂಪ ಇದ್ದುದು ಹಿಂದೂ ಮಹಾಸಾಗರಕ್ಕೆ ಮಾತ್ರ. ಅದರ ಮೂರು ಬದಿಗೆ ಬಹುತರವಾಗಿ ಭೂಮಿಯೇ ಇದೆ. ಅದರ ಮೇಲ್ಛಾವಣಿಯಂತೆ ಏಶಿಯಾ ಖಂಡದ ದಕ್ಷಿಣ ಭೂಭಾಗ ಹರಡಿಕೊಂಡಿದೆ. ಆಫ್ರಿಕಾಖಂಡ ಪಶ್ಚಿಮದ ಗೋಡೆಯಂತೆ ನಿಂತಿದೆ. ಮಲೇಶಿಯಾ, ಬರ್ಮಾ, ಇಂಡೋನೇಶಿಯಾ ಹಾಗು ಇತರ ದ್ವೀಪಸ್ತೋಮಗಳು ಪೂರ್ವದಲ್ಲಿ ಹರಡಿವೆ. ಈ ಪೂರ್ವ-ಪಶ್ಚಿಮಗಳ ಭೂ-ಗೋಡೆಗಳಿಗಿಂತಲೂ ಮಹತ್ವದ ಸಂಗತಿಯೆಂದರೆ ಹಿಂದುಸ್ತಾನದ ದ್ವೀಪ ಕಲ್ಪ - ದಕ್ಷಿಣ ಹಿಂದುಸ್ತಾನವಾಗಿದೆ. ಭಾರತವು ಈ ಮಹಾಸಾಗರದಲ್ಲಿ ಒಂದು ಸಾವಿರ ಮೈಲುಗಳುದ್ದ ಕನ್ಯಾಕುಮಾರಿಯವರೆಗೂ ಒಳಗೆ ಬಂದಿದೆ. ಭಾರತದ ಭೂರಚನೆಯಿಂದಾಗಿ, ಹಿಂದೂ ಮಹಾಸಾಗರದ ವೈಶಿಷ್ಟ್ಯ ಇತರ ಮಹತ್ವದ ಮಹಾಸಾಗರಗಳಾದ ಅಟ್ಲಾಂಟಿಕ್ ಮತ್ತು ಪೆಸಿಫಿಕ್‌ಗಳಿಗಿಂತ ಬೇರೆಯಾಗಿರುವುದು. ಭಾರತದ ಭೌಗೋಲಿಕ ಸ್ಥಾನ ಮತ್ತು ರಚನೆಯಿಂದಾಗಿಯೆ ಹಿಂದೂ ಮಹಾಸಾಗರದ ಸ್ವರೂಪ ವೈಶಿಷ್ಟ್ಯಪೂರ್ಣಗೊಳ್ಳುತ್ತದೆ.

ವಳಿ ಹತ್ತಿರ ಇದ್ದರೆ ಅನುಕೂಲ. ಕರಾವಳಿಯ ಸುತ್ತಲಿನ ರಕ್ಷಣಾ ಕೇಂದ್ರಗಳಂತೆ ಅವನ್ನು ಬಳಸಬಹುದು.

ಹಿಂದೂ ಮಹಾಸಾಗರದಲ್ಲಿಯ ಉಪಸಾಗರಗಳ ಮತ್ತು ಆಖಾತ ಅಥಾವ ಕೊಲ್ಲಿಗಳ ಬಗ್ಗೆಯೂ ಕೆಲವೊಂದು ಸಂಗತಿಗಳನ್ನು ವಿವರಿಸಿದರೆ ಅಪ್ರಸ್ತುತವೆನಿಸಲಿಕ್ಕಿಲ್ಲ. ಈ ಮಹಾಸಾಗರದ ವಾಯುವ್ಯದ ಮೂಲೆಗೆ (ಈಗ ಅತ್ಯಂತ ಪ್ರಸಿದ್ಧಿಯನ್ನು ಪಡೆದ) ಪರ್ಶಿಯನ್ ಆಖಾತ ಅಥವಾ ಕೊಲ್ಲಿ ಇದೆ. ಜಾಮ್ಹುರ್ಝು ಬಂದರ ಇದರ ಪ್ರವೇಶದ್ವಾರದ ರಕ್ಷಕನಂತೆ ಇದೆ. ಯುಫ್ರೈಟಸ್ - ತೈಗ್ರಿಸ್ ನದಿಗಳ ಕೊಳ್ಳ ಹಾಗು ಮೆಸೊಪೊಟೇಮಿಯಾದ ಐತಿಹಾಸಿಕ ಪ್ರದೇಶಗಳು ಈ ಆಖಾತ ಅಥವಾ ಕೊಲ್ಲಿಗೆ ಹೊಂದಿಕೊಂಡ ಭೂಭಾಗಗಳಾಗಿವೆ. ಸಾಗರಯಾನದ ಇತಿಹಾಸದ ತುಂಬೆಲ್ಲ ಈ ಪರ್ಶಿಯನ್ ಆಖಾತ ಬಹಳ ಮಹತ್ವದ ಪಾತ್ರವನ್ನು ವಹಿಸಿದೆ. (ಇದರ ಹಿನ್ನಾಡಿನಲ್ಲಿ ಕಲ್ಲೆಣ್ಣೆಯ ಬಾವಿಗಳ ಶೋಧವಾದ ನಂತರವಂತೂ ಈ ಪರ್ಶಿಯನ್ ಕೊಲ್ಲಿ ಜಗತ್ತಿನ ಶಕ್ತಿಬಣಗಳ ಕಣವಾಗಿದೆ; ಜಾಗತಿಕ ರಾಜಕಾರಣದ ಕೇಂದ್ರ ಬಿಂದುವಾಗಿದೆ). ಭವಿಷ್ಯದಲ್ಲಿ ಈ ಆಖಾತದ ಮಹತ್ವ ಇನ್ನೂ ಇಮ್ಮಡಿಗೊಳ್ಳಲಿದೆ.

ಪ್ರಪಂಚದ ಶಕ್ತಿಶಾಲಿ ಸಮುದ್ರಗಳಲ್ಲಿ ಅರಬಿ ಸಮುದ್ರವೂ ಒಂದು. ಇದು ಭಾರತ ಮತ್ತು ಸೌದಿ ಅರೇಬಿಯಾದ ಭೂಶಿರಗಳನ್ನು ಬೇರ್ಪಡಿಸುತ್ತದೆ. ಅದರ ಉತ್ತರಕ್ಕೆ ಇರಾಣದ ಕರಾವಳಿ ಇದೆ. ಇಲ್ಲಿಯ ಮನ್ಸೂನ ಗಾಳಿಗಳ ಅನುಕೂಲತೆಯಿಂದಾಗಿ ಕಳೆದ 3000 ವರ್ಷಗಳಿಂದಲೂ ಈ ಸಮುದ್ರ ವ್ಯಾಪಾರ - ವಾಣಿಗೆಯ ಪ್ರಚಂಡ ರಾಜಮಾರ್ಗವಾಗಿದೆ. (ಈಗಂತೂ ದಿನದಿನವೂ ಪರ್ಶಿಯನ್ ಕೊಲ್ಲಿಯಿಂದ ಕಲ್ಲೆಣ್ಣೆಯನ್ನು ತುಂಬಿಕೊಂಡು ಹೊರಡುವ ಸರಕು ಸಾಗಾಣಿಕೆಯ ಹಡಗುಗಳಿಂದಲೂ (ಟ್ಯಾಂಕರಗಳಿಂದಲೂ) ಅವುಗಳನ್ನು ರಕ್ಷಿಸುತ್ತ ಹೊರಟ ಯುದ್ಧ ನೌಕೆಗಳಿಂದಲೂ ಈ ಅರಬ್ಬಿ ಸಮುದ್ರ



ನಾನು ರಾಜಕಾರಣಿಯನ್ನು ಮದುವೆ ಆಗಬಾರದಿತ್ತು ಕಣೇ ! ಏನು ಬೇಕೆಂದು ಕೇಳಿದ್ರೂ ಮನವಿ ಬರೆದು ಕೊಡು ಪರಿಶೀಲಿಸ್ತೇನೆ ಅಂತಾರೆ......!

ನಿಬಿಡವಾಗಿರುತ್ತದೆ) ಭಾರತೀಯರು, ಫೊಲಿನೇಶಿಯನ್ನರು, ಅರಬ್ಬರು - ಸಾಗರಪ್ರಿಯರಾದ ಎಲ್ಲ ದೇಶದವರು ಅರಬ್ಬೀ ಸಮುದ್ರದ ಮಾರ್ಗವನ್ನೇ ಅನುಸರಿಸಿದರು.

ಏಡನ್ನದ ಆಖಾತವೂ ಆಯಕಟ್ಟಿನ ಸ್ಥಾನವೇ ಆಗಿದೆ. ಇದರ ಒಂದು ಬದಿಗೆ ಆಫ್ರಿಕಾ ಖಂಡದ ತುದಿ; ಇನ್ನೊಂದು ಬದಿಗೆ ದಕ್ಷಿಣ ಅರೇಬಿಯಾದ ತುದಿಗಳು ಇರುವವು. ಈ ಆಖಾತಗಳಿಗೆ ಪ್ರವೇಶ ಬಯಸುವವರನ್ನು ಸೋಕೋತ್ರಾ ದ್ವೀಪದಿಂದ ತಡೆಗಟ್ಟಬಹುದು. ಏಡನ್ ಈ ಆಖಾತದ ಮೇಲಿನ ಸುಪ್ರಖ್ಯಾತವಾದ ಬಂದರವಾಗಿದೆ. ಪ್ರಾಚೀನ ಕಾಲದಲ್ಲಿ ಅರಬ ನಾವಿಕರು ಇಲ್ಲಿ ತಮ್ಮ ಠಾಣ್ಯಗಳನ್ನು ಹೊಂದಿದ್ದರು. ಈ ಬಂದರು ಅರೇಬಿಯಾದ ಕರಾವಳಿಯ ಮೇಲಿದೆ; ಎಲ್ಲ ದೃಷ್ಟಿಗಳಿಂದಲೂ ಭದ್ರವಾದ ರಕ್ಷಣಾ-ಕವಚವನ್ನುಳ್ಳದ್ದು. ಇತಿಹಾಸದುದ್ದಕ್ಕೂ ಅರಬರು ಇದನ್ನು ತಮ್ಮ ವಶದಲ್ಲಿಯೆ ಇರಿಸಕೊಂಡಿದ್ದರು. ಬ್ರಿಟಿಶರು ಅದನ್ನು ತಪ್ಪಿಸಿದಲ್ಲಿ ತಮ್ಮ ವರ್ಚಸ್ಸನ್ನು ಸ್ಥಾಪಿಸಿ ಸುವೇಜ ಪೂರ್ವದ ಸಂಚಾರವನ್ನು ನಿಯಂತ್ರಿಸುವುದಕ್ಕೆ ಶಕ್ತರಾದರು.

ಬಂಗಾಲ ಉಪಸಾಗರವು ಭಾರತವನ್ನು ಮಲಯಾ ಹಾಗು ಬರ್ಮಾ ದೇಶಗಳಿಂದ

ಬೇರ್ಪಡಿಸುತ್ತದೆ. ಪೂರ್ವ ಕಾಲದಲ್ಲಿಯೂ ಭಾರತದ ಕರಾವಳಿಯಿಂದ ಹೊರಟ ನಾವೆಗಳು ಈ ಉಪಸಾಗರದಲ್ಲಿ ಸಂಚರಿಸುತ್ತಿದ್ದವು. (ಚೋಳ ಸಾಮ್ರಾಟರು ಈ ಉಪಸಾಗರವನ್ನು ದಾಟಿಯೆ ಇಂಡೋನೇಶಿಯಾ ಹಾಗು ಕಂಬೋಡಿಯಾದವರೆಗೆ ದಾಳಿಯನ್ನಿಟ್ಟು ತಮ್ಮ ಸಾಮ್ರಾಜ್ಯಗಳನ್ನು ವಸಾಹತುಗಳನ್ನು ಸ್ಥಾಪಿಸಿದ್ದರು.) ಇದನ್ನು ದಾಟಿ ಹೋದ ಭಾರತೀಯರು ಪೆಸಿಫಿಕ್ ಸಾಗರದಲ್ಲಿಯ ನಡುಗಡ್ಡೆಗಳಲ್ಲಿಯೂ ತಮ್ಮ ವಸಾಹತುಗಳನ್ನು ನಿರ್ಮಿಸಿದ್ದರು.

ಅರಬ್ಬೀ ಸಮುದ್ರದಲ್ಲಿ ಇರುವಂಥ ಗಾಳಿಗಳ ಪ್ರವಾಹಗಳೂ ಬಲಗಳೂ ಇನ್ನೆಲ್ಲಿಯೂ ಇಲ್ಲ. ಈ ಮನ್ಸೂನ್ ಗಾಳಿಗಳಲ್ಲಿಯ ನಿಯಮಬದ್ಧತೆಯನ್ನು ಕ್ರಿ.ಶ. 45ರಲ್ಲಿಯೇ ಹಿಪ್ಪಾಲಸ್ಸ ಎಂಬವನ್ನು ಪಾಶ್ಚಾತ್ಯರಿಗೆ ಪರಿಚಯಿಸಿ ಕೊಟ್ಟಿದ್ದನು. ಉಗಿ ಹಡಗುಗಳು ಬರುವ ಪೂರ್ವದಲ್ಲಿ ಅರಬೀ ಸಮುದ್ರ ಮತ್ತು ಬಂಗಾಲ ಉಪಸಾಗರಗಳಲ್ಲಿಯ ಸಮುದ್ರಯಾನ ಈ ಗಾಳಿಗಳನ್ನೇ ಅವಲಂಬಿಸಿತ್ತು. ಉಗಿಹಡಗುಗಳ ಆಗಮನದಿಂದ ಈ ಅವಲಂಬನೆ ಕ್ಷೀಣಗೊಂಡಿದೆ. ಅರಬ್ಬೀ ಸಮುದ್ರದ ಮೇಲಿಂದ ಬೀಸುವ ಮನ್ಸೂನ್ ಗಾಳಿಗಳು ಸಹಸ್ರಾರು ವರ್ಷಗಳಿಂದಲೂ ವ್ಯಾಪಾರಿ ನಾವೆಗಳಿಗೆ ಮಾರ್ಗದರ್ಶಕವಾಗುತ್ತ ಬಂದಿವೆ. ಈ ಗಾಳಿಗಳ ದಿಕ್ಕಿನೊಂದಿಗೆ ತೇಲಿಕೊಂಡ ಬಂದ ಈ ನಾವೆಗಳು ಭಾರತದ ಕಡಲುದಂಡೆಯನ್ನು ತಗಲುತ್ತಿದ್ದವು. ಇವೆ ಗಾಳಿಗಳು ಬಂಗಾಲ ಉಪಸಾಗರದ ಮೇಲೆ ಬೀಸುತ್ತಿದ್ದುದರಿಂದ, ಅಲ್ಲಿಯ ಸಮುದ್ರ ಪರ್ಯಟನವಾದರೂ ಅವುಗಳನ್ನೇ ಅವಲಂಬಿಸಿದ್ದವು. ವರ್ಷದಲ್ಲಿ ಸುಮಾರು ಆರು ತಿಂಗಳ ಕಾಲ, ಈ ಭಾಗದ ಸಮುದ್ರಯಾನ ಈ ಗಾಳಿಗಳನ್ನೇ ಅವಲಂಬಿಸಿರುತ್ತಿತ್ತು. ಅಂದಿನ ಹಿಂದೂ ಮಹಾಸಾಗರದಲ್ಲಿ ಸಂಚರಿಸುವ ಈ ಗಾಳಿಗಳ ವರ್ತನೆಯನ್ನು ಸಂಪೂರ್ಣವಾಗಿ ಅಭ್ಯಸಿಸಿದ್ದರು; ಆದರ ಪ್ರಯೋಜನವನ್ನು ಪಡೆಯುತ್ತಿದ್ದರು.

ಬಂಗಾಲ ಉಪಸಾಗರದಲ್ಲಿ ವರ್ತುಲ ಗಾಳಿಗಳೂ ಉದ್ಭವಿಸುತ್ತವೆ. ಅವು ನಾವೆಗಳಿಗೆ ಗಂಡಾಂತರಕಾರಿ. ಈ ಸಾಗರದ ಉಷ್ಣವಲಯದ ತೆಕೆ ಬಡಿದುಕೊಂಡಿದೆ. ಆದರ ಅಂಚು ಉತ್ತರಕ್ಕೆ ಕರ್ಕ ವೃತ್ತವನ್ನೂ ಕೂಡ ದಾಟುವುದಿಲ್ಲ. ಅದು ಕಾರಣ, ಕಡಲಿನಲ್ಲಿ ತೇಲಿಕೊಂಡು ಬರುವ ಹಿಮ ಪರ್ವತಗಳ ಅಂತರ್ಯವಿಲ್ಲ; ಶೀತ ಪ್ರದೇಶಗಳಲ್ಲಿಯ ಕಡಲುಗಳಲ್ಲಿಯ ಹಿಮಪರ್ವತಗಳು ನೌಕಾಯಾನಕ್ಕೆ ಮಾರಕವಾಗಿರುತ್ತವೆ. ಹಾಗೂ ಮಹಾಸಾಗರಕ್ಕೆ ಈ ಹೆದರಿಕೆ ಇಲ್ಲ. ಉಷ್ಣವಲಯದ ಸ್ವಭಾವವನ್ನು ಅನುಸರಿಸಿ, ಇಲ್ಲಿ ನೀರು ಹೆಪ್ಪುಗಟ್ಟುವುದಿಲ್ಲ; ದಟ್ಟ ಮಂಜು ಕವಿಯುವುದಿಲ್ಲ. ಗಲ್ಫ ಸ್ಟ್ರೀಮದಂತಹ ಪ್ರವಾಹಗಳು ಈ ಸಾಗರದಲ್ಲಿ ಇಲ್ಲದಿದ್ದರೂ, ಆದರಿಂದ ನೌಕಾಯಾನಕ್ಕೆ ಬಾಧೆ ಬಂದಿಲ್ಲ.

ನೌಕಾಯಾನದ ಪ್ರಪ್ರಥಮ ಚಟುವಟಿಕೆಗಳು ಪ್ರಾರಂಭವಾದದ್ದು ಹಿಂದು ಮಹಾಸಾಗರದಲ್ಲಿಯೆ. ಇದಕ್ಕೆ ಮನ್ಸೂನ ಗಾಳಿಗಳು ಎಷ್ಟು ಕಾರಣೀಭೂತವೊ ಅಷ್ಟೇ ಅತ್ಯಂತ ಪ್ರಾಚೀನ ನಾಗರಿಕತೆ ಪೌರ್ವಾತ್ಯ ದೇಶಗಳಲ್ಲಿಯೆ ಪ್ರಾರಂಭವಾದವು ಎಂಬ ಸಂಗತಿಯೂ ಕಾರಣವಾಗಿದೆ. ನೌಕಾಯಾನದ ಹಾಗು ಕಡಲು ಸಾಮಿಪ್ಯದಿಂದ ಬೆಳೆದ ಪ್ರಾಚೀನ ನಾಗರಿಕತೆಗಳೆಲ್ಲ ಈ ಸಾಗರದ ಕರಾವಳಿಯಲ್ಲಿಯೇ ಮೊದಲು ಕಾಣಿಸಿಕೊಂಡವು. ಪಾಶ್ಚಾತ್ಯರ ಅಭಿಪ್ರಾಯದ ಮೇರೆಗೆ ನೌಕಾಯಾನ ಏಶಿಯನ್ ಸಮುದ್ರದಲ್ಲಿ ಪ್ರಾರಂಭವಾಗಿತ್ತು; ಆದರೆ ಏಶಿಯಾದ ಇತಿಹಾಸದ ಮಹತ್ವದ ಘಟ್ಟಗಳ ಕಲ್ಪನೆ ಕೂಡ ಎಷ್ಟೋ ಪಾಶ್ಚಾತ್ಯ ವಿದ್ವಾಂಸರಿಗೆ ಇರಲಿಲ್ಲ ಎಂಬುದನ್ನು ಹೇಳುವ ಅವಶ್ಯಕತೆ ಇಲ್ಲ.

''ಅತ್ಯಂತ ಪ್ರಾಚೀನ ನೌಕಾಯಾನವಿರತ ಜನಾಂಗಗಳು ಏಶಿಯನ್ ಸಮುದ್ರದ ಸುತ್ತಮುತ್ತಲೂ ವಾಸಿಸುತ್ತಿದ್ದವು. ಇದು ಗ್ರೀಕರ ಪ್ರಮುಖ ಕೇಂದ್ರ. ಪೊಲಿನೇಶಿಯನ್ ನಾವಿಕರು ನೌಕಾಯಾನದ ಜ್ಞಾನ ಸಂಪಾದನೆ ಮಾಡಿದ್ದು ಇಲ್ಲಿಂದಲೆ'' ಎಂದು ಭೂ-ರಾಜಕಾರಣ (Geo politics) ನೀತಿಜ್ಞ ಮ್ಯಾಕಿಂಡರ ಬರೆದಿದ್ದಾರೆ.



ಬಹುಶಃ, ಯುರೋಪದಲ್ಲಿ ಮಾತ್ರ ನೌಕಾಯಾನ ಹೀಗೆ ಪ್ರಾರಂಭವಾಗಿದ್ದಿರಬಹುದು. ಇಡೀ ಜಾಗತಿಕ ಇತಿಹಾಸದ ದೃಷ್ಟಿಯಿಂದ ನೋಡಿದಾಗ ಅವರ ಈ ಹೇಳಿಕೆಯಲ್ಲಿ ಹುರುಳು ತೋರುವುದಿಲ್ಲ. ಸಮುದ್ರಯಾನದ ಚಟುವಟಿಕೆ ಏಜಿಯನ್ ಸಮುದ್ರದ ಸಂಕುಚಿತ ಪ್ರದೇಶದಲ್ಲಿ ಕಾಣಿಸಿಕೊಳ್ಳುವ ಬಹಳ ಪೂರ್ವದಲ್ಲಿಯೇ ದಕ್ಷಿಣ ಭಾರತದ ಕರಾವಳಿಯ ನಿವಾಸಿಗಳಿಗೆ ವಿಸ್ತಾರವಾದ ಸಾಗರಗಳ ಸಂಚಾರ ಸರ್ವಸಾಮಾನ್ಯ ಸಂಗತಿ ಎನಿಸಿತ್ತು.

ವಿಂಧ್ಯಾದ್ರಿ ಮತ್ತು ದಖ್ಖನದ ಪೀಠ ಪ್ರದೇಶ ದಕ್ಷಿಣ ಹಿಂದುಸ್ತಾನ ಮತ್ತು ಆರ್ಯಾವರ್ತ ಎಂದು ಕರೆಸಿಕೊಳ್ಳುತ್ತಿದ್ದ ಉತ್ತರ ಭಾರತಗಳ ನಡುವೆ ಬೇಧವನ್ನುಂಟು ಮಾಡಿವೆ. ಈ ಎರಡೂ ಪ್ರದೇಶದವರು ಸಮುದ್ರವನ್ನು ನೋಡುವ ದೃಷ್ಟಿಬೇಧದಿಂದ ಅವರಲ್ಲಿ ನೋಟದಲ್ಲಿಯೂ ವಿಷಮತೆಯನ್ನು ಅಥವಾ ವೈವಿಧ್ಯವನ್ನು ತಂದಿತು ಎಂದು ಹೇಳಬಹುದು. ಉತ್ತರ ಭಾರತದವರ ಸಂಬಂಧ ಮಧ್ಯ ಏಶಿಯಾದೊಂದಿಗೆ ದಟ್ಟವಾದುದು; ಅದರ ಸಂಸ್ಕಾರವೂ ಅವರ ಬದುಕಿನ ಮೇಲೆ ಆಗಿದೆ. ಅವರಿಗೆ ಸಮುದ್ರ ಅಷ್ಟು ಅರ್ಥಪೂರ್ಣವೆನಿಸಲಿಲ್ಲ. ಕಾಳಿದಾಸನ ರಘುವಂಶದ ಆದರ್ಶ ದೊರೆಗಳು ಕೂಡ ಆ-ಸಮುದ್ರ ಕ್ಷಿತೀಶರೇ ಆಗಿದ್ದರು. ಅವರ ಸಾಮ್ರಾಜ್ಯಗಳು ಕಡಲಿನ ದಂಡೆಗಳವರೆಗೆ ಮಾತ್ರ ಹಬ್ಬಿರುತ್ತಿದ್ದವು; ಸಮುದ್ರದಾಚಿನ ನಾಡುಗಳನ್ನು ಆಳಬೇಕು ಎಂಬುದಂತೂ ಇರಲಿ. ಆದರೆ ಸಮುದ್ರವನ್ನಾದರೂ ಆಳಬೇಕು ಎಂಬ ಭಾವನೆ ಉತ್ತರ ಭಾರತದ ಇರುತ್ತಿದ್ದಿಲ್ಲ. ತದ್ವಿರುದ್ಧವಾಗಿ, ದಕ್ಷಿಣ ಕಳಿಂಗರು, ಚೋಳರು ಮತ್ತು ಪಾಂಡ್ಯರಲ್ಲಿ ಈ ಭಾವನೆಗಳು, ಇಂತಹ ಆಕಾಂಕ್ಷೆಗಳು ಸ್ವಾಭಾವಿಕವಾಗಿಯೆ ಪ್ರಚುರಗೊಂಡವು. ಭಾರತವನ್ನು ಪ್ರವೇಶಿಸಿದ ಆರ್ಯರಿಗೆ ಸಮುದ್ರದೊಂದಿಗಾಗಲಿ ಸಮುದ್ರ ಯಾನ

ದೊಂದಿಗಾಗಲಿ ಪರಿಚಯವೆ ಇದ್ದಿರಲಿಲ್ಲ ಎಂದು ಇದರ ಅರ್ಥವಲ್ಲ. ಆದರೆ ಜನಾಂಗ ಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುವದರಿಂದ ನಡೆಯುವ ರಾಜಕೀಯ ಸ್ಥಿತ್ಯಂತರಗಳು ಭೂಖಂಡಗಳಲ್ಲಿ ಮಾತ್ರ ಜರುಗುತ್ತವೆ. ಎಂದು ಅವರು ಯೋಚಿಸಿದ್ದರು. ಆದರೆ ದಕ್ಷಿಣ ಭಾರತದಲ್ಲಿಯ ಜನಾಂಗಗಳ ಚಲನವಲನಗಳೂ ಸಾಂಸ್ಕೃತಿಕ ಮುನ್ನಡೆಗಳು ಸಮುದ್ರದ ನಿಕಟ ಸಾನಿಧ್ಯದಲ್ಲಿ ಜರುಗಿದವು. ರಾಯಚೂರಿನ ಹತ್ತಿರ ಮಸ್ಕಿಯಲ್ಲಿ ಇನ್ನಿತರ ಎಡೆಗಳಲ್ಲಿ ಇತಿಹಾಸ ಪೂರ್ವ ಕಾಲದ ಕೆಲ ಅವಶೇಷಗಳು ದೊರೆತಿವೆ. ದಕ್ಷಿಣ ಭಾರತದ ಜನಾಂಗಗಳ ನೌಕಾಯಾನದ ಸಂಸ್ಕೃತಿಯ ಮೇಲೆ ಅವು ಬೆಳಕನ್ನು ಚೆಲ್ಲುತ್ತವೆ. ಪಶ್ಚಿಮದ ದೇಶಗಳು, ಅರೇಬಿಯನ್ ಕರಾವಳಿಗಳು ಮತ್ತು ಭೂಮಧ್ಯ ಸಮುದ್ರದವರೆಗೂ ದಕ್ಷಿಣ ಭಾರತದ ನಾವಿಕರು ನೌಕಾ ಸಂಬಂಧಗಳನ್ನು ಬೆಳೆಸಿಕೊಂಡಿದ್ದರು. ದಕ್ಷಿಣದಲ್ಲಿ ಅಸ್ಟ್ರಿಕ್ ಭಾಷೆಗಳ ಪ್ರಭಾವ ಇನ್ನೂವರೆಗೂ ಇದ್ದುದಕ್ಕೂ ಹಾಗೂ ದ್ರಾವಿಡ ಜನಾಂಗಗಳಲ್ಲಿ ಪ್ರಚಲಿತವಿದ್ದ ರಕ್ತ ಸಂಬಂಧ- ನೆಂಟಸ್ತಿಕೆಯ ಪದ್ಧತಿಗಳಿಗೂ ಮತ್ತು ಪೆಸಿಫಿಕದಲ್ಲಿ ಪೊಲಿನೇಶಿಯನ್ನರ ಪದ್ಧತಿಗಳಿಗೂ ಬಹಳ ಸಾಮ್ಯವಿದೆ. ಪೆಸಿಫಿಕದಿಂದಲೂ ಜನಾಂಗಗಳು ಭಾರತಕ್ಕೆ ವಲಸೆ ಬಂದಿರಬಹುದು. ಎಂಬುದು ಇದರಿಂದ ಸಿದ್ಧವಾಗುತ್ತದೆ. ಅಸ್ಟ್ರಿಕ್ ಜನಾಂಗಗಳ ಭಾಷಾ ಪದ್ಧತಿ ನಿಕೋಬಾರ್ ದ್ವೀಪದಲ್ಲಿಯೂ ಪ್ರಚಲಿತವಿರುವವು. ಈ ಭಾಷಾ ಪದ್ಧತಿ ಆಫ್ರಿಕೆಯ ಹತ್ತಿರದ ಮಡಗಾಸ್ಕರದವರೆಗೂ ತನ್ನ ಜಾಲವನ್ನು ಹರಡಿತ್ತು;

ತಾನು ತೆಳವನ್ನೇ ಊರಿದೆ. ಆರ್ಯ ಮತ್ತು ದ್ರವಿಡಿ ಜನಾಂಗಗಳಲ್ಲಿಯ ನೆಂಟಸ್ತಿಕೆಗಳನ್ನು ಕೂಲಂಕಷವಾಗಿ ಸಂಶೋಧಿಸಿದ ನಂತರ ಶ್ರೀಮತಿ ಇರಾವತಿ ಕರ್ವೆಯವರು ಒಂದು ಗ್ರಂಥ ಬರೆದಿದ್ದಾರೆ. ಪೊಲಿನೇಶಿಯನ್ ಜನಾಂಗಗಳ ನೆಂಟಸ್ತಿಕೆಗಳ ಪದ್ಧತಿಗಳಿಗೂ ಹಾಗು ಭಾರತದಲ್ಲಿ ದ್ರಾವಿಡರಷ್ಟೇ ಅಲ್ಲದೆ ಮರಾಠಾ ಜನಾಂಗಗಳ ನೆಂಟಸ್ತಿಕೆಗಳ ಪದ್ಧತಿಗೂ ಬಹಳಷ್ಟು ಸಾಮ್ಯಗಳಿವೆಯೆಂದು ಶ್ರೀಮತಿ ಇರಾವತಿ ಕರ್ವೆಯವರು ನಿರ್ಣಯಿಸಿದ್ದಾರೆ. ದಕ್ಷಿಣ ಭಾರತದವರ ಸಾಂಸ್ಕೃತಿಕ ಮೂಲ ಪೆಸಿಫಿಕದಲ್ಲದೆಂದು ಶ್ರೀಮತಿ ಕರ್ವೆ ಅವರ ಅಭಿಪ್ರಾಯವಾಗಿದೆ. ಪೆಸಿಫಿಕದವರು ಭಾರತಕ್ಕೆ ವಲಸೆ ಬಂದ ನಂತರ ಕ್ರಮೇಣವಾಗಿ ಉತ್ತರಕ್ಕೂ ಹಬ್ಬಿದರು. ಅವರ ದಖ್ಖನದ ಪೀಠ ಪ್ರದೇಶದಲ್ಲಿ ವಸಾಹತುಗೊಳ್ಳುತ್ತಿದ್ದ ಸಮಯದಲ್ಲಿಯೆ ಆರ್ಯರು ಪಂಜಾಬದಲ್ಲಿ ನೆಲೆಸತೊಡಗಿದ್ದರು ಹಾಗೂ ಗಂಗಾನದಿ ಕೊಳ್ಳದಲ್ಲಿ ಅವರು ಮುನ್ನಡೆದಿದ್ದರು. ಕಾಲಾಂತರದಲ್ಲಿ ಈ ಜನಾಂಗಗಳು ಗುಜರಾತದಲ್ಲಿ ಸಂಧಿಸಿದವು. ಈ ಎರಡೂ ಜನಾಂಗಗಳ ಚಲನವಲನಗಳು ಸಮಾನಾಂತರವಾಗಿಯೇ ಸಾಗಿದ್ದವು. ಪೊಲಿನೇಶಿಯನ್ನರ ಸಾಮಾಜಿಕ ಸಂಸ್ಕೃತಿಯ ಕೆಲ ಗುರುತುಗಳನ್ನು ಶ್ರೀಮತಿ ಕರ್ವೆ ಅವರು ಗುಜರಾತದಲ್ಲಿಯೂ ಕಂಡಿದ್ದಾರೆ. ಆದರೆ ಹಿಂದೂ ಧರ್ಮ ಮತ್ತು ಸಂಸ್ಕೃತ ಭಾಷೆಗಳು ನಾಗರಿಕತೆಯ ಶ್ರೇಷ್ಠ ಶ್ರೇಣಿಯಲ್ಲಿದ್ದುದರಿಂದ, ಈ ಎಲ್ಲ ಜನಾಂಗಗಳ ಮೇಲೂ ಆರ್ಯ ಪ್ರಭಾವವೆ ಸ್ಫುಟವಾಗಿ ಒಡಮೂಡಿತು. ●

*ಸ್ತ್ರೀಯೊಂದು ವಿಪತ್ತು; ಆದರೆ ಪ್ರತಿ ಮನೆಯಲ್ಲೂ ಈ ಕೇಡು ಅನಿವಾರ್ಯ.*

(ಪರ್ಶಿಯಾದ ಗಾದೆ)

# ಕೆಮೆರಾ ಕಣ್ಣಲ್ಲಿ ಕಾವ್ಯ ಹಾಡಿದ

# ಯುಜಿನ್ ಅಟ್‌ಗೇಟ್

ಮುರಳೀಧರ ಖಜಾನೆ

ಇವನದು ಒಂದು ಸುಂದರ ಅಲೌಕಿಕ ಜಗತ್ತು. ಇವನು ಫ್ರಾನ್ಸ್‌ನ ಮ್ಯೂಸಿಯಂಗಳು ಹಾಗೂ ಗ್ರಂಥಾಲಯಗಳಿಗಾಗಿ ಚಿತ್ರ ತೆಗೆಯುತ್ತಿದ್ದ. ಫ್ರೆಂಚ್ ಬದುಕಿನ ಜೀವಾಳವನ್ನು ಚಿತ್ರಿಸುವುದೇ ತನ್ನ ಪರಮ ಧ್ಯೇಯವೆಂದು ಭಾವಿಸಿದ ಈ ಛಾಯಾಗ್ರಾಹಕನ ಬಗ್ಗೆ ಯಾರಿಗೂ ತಿಳಿದಿರಲಿಲ್ಲ. ಇವನ ಲೆನ್ಸ್ ಕಣ್ಣಿನ ವಿಸ್ತಾರಕ್ಕೆ ಕೊನೆಯೆಂಬುದೇ ಇರಲಿಲ್ಲ. ಯಾರೂ ಪ್ರೀತಿಸದ, ಯಾರೂ ಗೌರವಿಸದ ಈತ ೧೯೨೭ ರಲ್ಲಿ ಸತ್ತಾಗ ಯಾರೂ ದುಃಖಿಸದ ಈ ಛಾಯಾಗ್ರಾಹಕ ಜನರ ಗಮನ ಸೆಳೆದದ್ದು ತಾನು ಮರಣಿಸಿದ ೬೦ ವರ್ಷಗಳ ನಂತರವೇ. ಈ ಛಾಯಾಗ್ರಾಹಕ ಯಾರು ಗೊತ್ತೆ? ಫ್ರೆಂಚ್ ಬದುಕಿನ ಶ್ರೀಮಂತಿಕೆಯನ್ನು ತನ್ನ ಕ್ಯಾಮರಾ ಕಣ್ಣಿನಲ್ಲಿ ಎಳೆಎಳೆಯಾಗಿ ಬಿಡಿಸಿದ ಯೂಗಿನ್ ಆಟ್‌ಗೆಟ್. ಛಾಯಾಗ್ರಹಣದಲ್ಲಿ ಆಸಕ್ತಿ ಹೊಂದಿದ ಕೆಲವರನ್ನು ಬಿಟ್ಟರೆ ಈತನ ಪರಿಚಯವಿರುವವರು ವಿರಳ.

ಫ್ರಾನ್ಸಿನ ಗತವೈಭವಗಳನ್ನು ಚಿತ್ರಿಸುವಲ್ಲಿ ತನ್ನ ಮಾಧ್ಯಮದ ಆಳ ಅಗಲಗಳನ್ನು ಕಂಡುಕೊಂಡ ಆಟ್‌ಗೆಟ್‌ಗೆ ವಿಸ್ತಾರದ ಪರಿವೇ ಇರಲಿಲ್ಲ. ಮಾಧ್ಯಮದ ಮೇಲೆ ಇವನ ಪರಿಣತಿ ಅಷ್ಟಿತ್ತು. ಹಳೆಯ ಚರ್ಚುಗಳು, ಮುರಿದ ನೇಗಿಲುಗಳು, ಗತದ ಕಥೆಯನ್ನು ಹೇಳುವ ಯಾವುದೇ ವಸ್ತುವನ್ನು ನೋಡಬೇಕಾದರೂ ನಾವು ಆಟ್‌ಗೆಟ್‌ನ ಛಾಯಾಗ್ರಹಣ ನೋಡಬೇಕು. ಅವುಗಳ ಆಕಾರ, ವಿನ್ಯಾಸಗಳಲ್ಲಿ ಆಟ್‌ಗೆಟ್ ಹೊಸ ಹೊಸ ಆಯಾಮಗಳನ್ನು ಪರಿಚಯಿಸಿದ್ದಾನೆ. ಪ್ರತಿಯೊಂದು ವಸ್ತುಗಳೂ ಆಟ್‌ಗೆಟ್‌ನ ಕಣ್ಣಿಗೆ ಸೃಜನಶೀಲ ವಸ್ತುವಾಗಿ ತೋರುತ್ತಿದ್ದವು ಅಥವಾ ಅವನ ಕ್ಯಾಮರಾ ಕಣ್ಣಿನಲ್ಲಿ ಅದು ಹಾಗೆ ಅರಳುತ್ತಿತ್ತು. ಜಡವಾದ ಅವುಗಳಲ್ಲಿ ಚೇತನ ತುಂಬುವ ಶಕ್ತಿ ಆಟ್‌ಗೆಟ್‌ನ ಕ್ಯಾಮರಕ್ಕಿತ್ತು.

ಪ್ರತಿಭೆ ಒಂದು ಆರನೆಯ ಇಂದ್ರಿಯದಂತೆ ಅದಕ್ಕೆ ಮೂರನೇ ಕಣ್ಣೂ ಇರುತ್ತದೆ. ಆಟ್‌ಗೆಟ್‌ಗೆ ಅಂತಹ ಒಂದು ಪ್ರತಿಭಾಶಕ್ತಿ ಇತ್ತು. ಈತನ ಕೈಯ್ಯಲ್ಲಿ ವಸ್ತುಗಳು ಚಲನಶಕ್ತಿ ಪಡೆಯುತ್ತಿದ್ದವು. ಇವನ ನೆರಳು ಬೆಳಕಿನ ಪ್ರಾವೀಣ್ಯ ಕೂಡ. ಅದ್ಭುತ ಎನ್ನುವ ಮಟ್ಟದ್ದು. ಆಟ್‌ಗೆಟ್‌ನ ಒಳಗಣ್ಣಿನ ಆಯಾಮದಲ್ಲಿ ಫ್ರಾನ್ಸ್‌ನ ಗತ ಇತಿಹಾಸ, ಕಳೆದು ಹೋದ ನಾಗರಿಕತೆ, ನೆಲ, ಜಲ, ವಾಸ್ತುಶಿಲ್ಪಗಳನ್ನೊಳಗೊಂಡಂತೆ ಎಲ್ಲವೂ ಹಾದು ಹೋಗಿವೆ.

ಆಟ್‌ಗೆಟ್ ತನ್ನ ಜೀವಿತಾವಧಿಯಲ್ಲಿ ತೆಗೆದ ಸಾವಿರಾರು ಚಿತ್ರಗಳನ್ನು ಇಂದು ಪ್ಯಾರಿಸ್‌ನ ಗ್ರಂಥಾಲಯಗಳು, ಮ್ಯೂಸಿ

ಯಂಗಳು ದಾಖಲೆಗಳಾಗಿ ಸಂಗ್ರಹಿಸಿಟ್ಟು ಕೊಂಡಿವೆ.

ಎಲ್ಲರಿಂದಲೂ ತೀವ್ರ ಅಲಕ್ಷ್ಯಕ್ಕೆ ಗುರಿಯಾಗಿದ್ದ ಆಟ್‌ಗೆಟ್‌ನ ಕೃತಿಗಳು ಉಳಿದಿರುವುದು ಒಂದು ವಿಸ್ಮಯ. ಇದಕ್ಕೆ ಕಾರಣ ಅಮೆರಿಕದ ಖ್ಯಾತ ಛಾಯಾಗ್ರಾಹಕ ಬೆರಿನ್ಸ್ ಅಬೋಟ್.

ಆಟ್‌ಗೆಟ್ ಬದುಕಿನ ಸಂಧ್ಯಾಕಾಲದಲ್ಲಿ ಬೆರಿನ್ಸ್ ಅಬೋಟ್ ಅವರ ಪ್ರೌಢಿಮೆಯನ್ನು ಗುರುತಿಸಿದ. ಗೆಳೆತನ ಮಾಡಿಕೊಂಡ. ಹಾಗಾಗಿ ಆಟ್‌ಗೆಟ್ ೧೯೨೭ ರಲ್ಲಿ ನಿಧನವಾದಾಗ ಅವನ ಸ್ಟುಡಿಯೋ ಹಾಗೂ ಛಾಯಾಚಿತ್ರಗಳನ್ನು ಖರೀದಿಸಲು ಸಾಧ್ಯವಾಯಿತು. ಇಲ್ಲದಿದ್ದಲ್ಲಿ ಅವೆಲ್ಲಾ ಎಂದೋ ನಾಶವಾಗುತ್ತಿತ್ತು.

೧೯೬೮ ರಲ್ಲಿ ನ್ಯೂಯಾರ್ಕ್‌ನ ಮಾಡರ್ನ್ ಆರ್ಟ್ ಮ್ಯೂಸಿಯಂ ಆಟ್‌ಗೆಟ್ ೫೦೦೦ ಪ್ರಿಂಟ್ಸ್ ಹಾಗೂ ೧೦೦೦ ಪ್ಲೇಟ್‌ಗಳನ್ನು ಖರೀದಿಸಿತು. ೧೯೮೧ ರಲ್ಲಿ ಪ್ರಾರಂಭವಾದ ಆಟ್‌ಗೆಟ್‌ನ ಚಿತ್ರಗಳ ಪ್ರದರ್ಶನ ನಾಲ್ಕು ಹಂತಗಳಲ್ಲಿ ೧೯೮೫ರವರೆಗೂ ನಡೆಯಿತು. ಈಚಿನ ದಿನಗಳಲ್ಲಿ ಒಬ್ಬ ಛಾಯಾಗ್ರಾಹಕನ ಕೃತಿಗಳ ಪ್ರದರ್ಶನ ಈ ರೀತಿ ನಡೆದದ್ದು ಇದೇ ಮೊದಲು. ಪ್ರದರ್ಶನಕ್ಕೆ ಸಿದ್ಧಪಡಿಸಲು ಈ ಮ್ಯೂಸಿಯಂಗೆ ೧೩ ವರ್ಷಗಳೇ ಬೇಕಾದವು. ಆದರೆ ಇಂತಹ ಸೃಜನಶೀಲ ಛಾಯಾಗ್ರಾಹಕನ ಬದುಕು ಮಾತ್ರ ದುರಂತ ಕಥೆ.

ಆಟ್‌ಗೆಟ್ ೧೮೫೭ ರಲ್ಲಿ ಲಿಬ್ರೊರ್ನ್‌ನಲ್ಲಿ ಜನಿಸಿದ ಸ್ವಲ್ಪ ಕಾಲದಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು ಅನಾಥನಾದ. ಇವನ ಚಿಕ್ಕಪ್ಪನಿಗೆ ಆಟ್‌ಗೆಟ್ ಚರ್ಚಿನಲ್ಲಿ ಪ್ರೀಸ್ಟ್ ಆಗಲೆಂಬ ಇಚ್ಛೆ. ಹಾಗಾಗಿ ಪ್ರೀಸ್ಟ್‌ಗಳಿಗೆ ತರಬೇತು ನೀಡುವ ಶಾಲೆಗೆ ಆಟ್‌ಗೆಟ್‌ನನ್ನು ಸೇರಿಸಿದ. ಆದರೆ ಅಲ್ಲಿಂದ ಹೊರಬಂದ ಆಟ್‌ಗೆಟ್ ನಟನಾದ. ಅಲ್ಲಿ ಯಾವುದೇ ಮಾನಸಿಕ ಸಂತೋಷ ಸಿಕ್ಕದಿದ್ದರೂ ೧೬ ವರ್ಷಗಳ ಕಾಲ ಟೂರಿಂಗ್ ನಾಟಕ ಕಂಪನಿಯಲ್ಲಿ ಸುತ್ತಾಡಿದ. ಆ ನಂತರ ಆಟ್‌ಗೆಟ್‌ನನ್ನು ಒಂದು ರೀತಿಯ ನಿರಾಶೆ ಆವರಿಸಿತು.

೧೮೯೭ ರಲ್ಲಿ ಪ್ಯಾರಿಸ್‌ಗೆ ಬಂದ ಆಟ್‌ಗೆಟ್ ಬದುಕಿಗೆ ಹೊಸ ಅರ್ಥಗಳನ್ನು ಕಂಡುಕೊಳ್ಳಲು ಯತ್ನಿಸಿದ. ಅದೂ ಒಬ್ಬ ಚಿತ್ರಕಾರನಾಗಿ. ಅಲ್ಲಿಯೂ ವಿಧಿ ಅವನನ್ನು ಅಣಕಿಸಿತು. ಆದರೆ ಆಟ್‌ಗೆಟ್‌ಗೆ ಫ್ರಾನ್ಸ್ ಬಗ್ಗೆ ಅದೇನೋ ಒಂದು ಬಗೆಯ ಅಗಾಧ ಸೆಳೆತ. ಅದು ಅವನನ್ನು ಎಡೆಬಿಡದೆ ಕಾಡುತ್ತಿತ್ತು. ಇಡೀ ಫ್ರಾನ್ಸ್‌ನ್ನು ಒಬ್ಬ ಸಾಕ್ಷಿಯಾಗಿ, ಅವ್ಯೆಯಕ್ತಿಕವಾಗಿ ನೋಡಬೇಕೆಂಬ ಆಸೆ ಆಟ್‌ಗೆಟ್‌ನನ್ನು ಕಾಡುತ್ತಲೇ ಇತ್ತು. ಹಾಗಾಗಿ ಆಟ್‌ಗೆಟ್ ಫ್ರಾನ್ಸ್‌ನ ಬದುಕನ್ನು ಅವ್ಯೆಯಕ್ತಿಕ ಸಾಕ್ಷಿಯಾಗಿ ದಾಖಲಿಸಲು ಛಾಯಾಗ್ರಾಹಕನಾದ. ನಂತರ ಛಾಯಾಗ್ರಹಣದಲ್ಲಿಯೇ ಬದುಕು ಸವೆಸಲು ನಿಶ್ಚಯಿಸಿದ.

ಆಟ್‌ಗೆಟ್ ಬದುಕಿದ್ದು ಮಾಂಟ್‌ಪಾರ್ನೆಸ್‌ನ ಮುಖ್ಯರಸ್ತೆಯಲ್ಲಿನ ಕಟ್ಟಡದ ನಾಲ್ಕನೆಯ ಅಂತಸ್ತಿನಲ್ಲಿ. ಆತ ಜೀವಿಸುತ್ತಿದ್ದ ಕೊಠಡಿಯ ಬಾಗಿಲಿಗೆ 'ಕಲಾವಿದರಿಗಾಗಿ ದಾಖಲೆಗಳು' ಎಂಬ ಪುಟ್ಟ ಫಲಕವಿತ್ತು. ಬದುಕಿರುವವರೆಗೂ ಆಟ್‌ಗೆಟ್ ಎಂದೂ ತನ್ನ ಕೃತಿಗಳ ಪ್ರದರ್ಶನ ನಡೆಸಲಿಲ್ಲ. ಒಮ್ಮೊಮ್ಮೆ ಊಟದ ಖರ್ಚಿಗಾಗಿ ತನ್ನ ಚಿತ್ರಗಳನ್ನು ಮಾರುವ ಸ್ಥಿತಿಗೂ ಆಟ್‌ಗೆಟ್ ಇಳಿದಿದ್ದನೆಂದರೆ ಆಟ್‌ಗೆಟ್‌ನ ಬದುಕು ಹೇಗೆ ನೆಲ ತಪ್ಪಿರಬಹುದೆಂದು ಊಹಿಸಬಹುದು. ಆದರೆ ನಟನಾಗಿ, ಕಲಾವಿದ ಚಿತ್ರಕಾರನಾಗಿ ಸೋತಂತೆ ಆಟ್‌ಗೆಟ್ ಛಾಯಾಗ್ರಾಹಕನಾಗಿ ಸೋಲಲಿಲ್ಲ.

ಆಟ್‌ಗೆಟ್‌ಗೆ ಫ್ರಾನ್ಸ್‌ನ ಗತ ಬದುಕಿನ

ಬಗ್ಗೆ ಅಪಾರ ಆಸಕ್ತಿ. ಹಾಗಾಗಿ ಈ ಗತದ ದಾಖಲೀಕರಣದ ಬಗ್ಗೆ ಆತ ಚಿಂತಿಸುತ್ತಿದ್ದ. ತನ್ನ ಪುಟ್ಟ ಹಳ್ಳಿಯ ನಗುವ ಹಳೆಯ ಚರ್ಚುಗಳು, ಹಳೆಯ ಮನೆಗಳು, ವಯೋವೃದ್ಧರು, ಹಳೆಯ ದೋಣಿಗಳು, ಮರದ ಬಿಳಲುಗಳು ಮುಂತಾದವುಗಳನ್ನು ಚಿತ್ರಿಸುವಲ್ಲಿ ಆಟ್‌ಗೆಟ್ ನಿರತನಾಗಿರುತ್ತಿದ್ದ. ಭೂತದೊಂದಿಗೆ ಬೆರೆತ ಭವಿಷ್ಯದ ಭಾವ ಆಟ್‌ಗೆಟ್‌ನ ಚಿತ್ರಗಳಲ್ಲಿ ಕಾಣುವಂತೆ ಬೇರೆಲ್ಲಿಯೂ ಕಾಣಸಿಗಲಾರದು. ವಾಕರ್ ಇವಾನ್ಸ್ ಎನ್ನುವಂತೆ ಆಟ್‌ಗೆಟ್ ಒಬ್ಬ ವ್ಯಕ್ತಿಯಲ್ಲ. ಆತ ಈ ಮಾಧ್ಯಮದ ಪ್ರತಿರೂಪ, ಒಂದು ಪರಂಪರೆ. ಇವನ ಕೃತಿಗಳು ವಿಲಿಯಂ ಬ್ಲೇಕ್‌ನ ಕೃತಿಗಳಂತೆ ಸುಂದರ ರಾಗಗಳನ್ನು ನುಡಿಸಬಲ್ಲವು. ಇವನ ಛಾಯಾಚಿತ್ರಗಳು ಇತರ ಛಾಯಾಗ್ರಾಹಕರ ಕೃತಿಗಳಂತೆ ಛಾಯಾಗ್ರಹಣದ ಪಾಠ ಹೇಳುವುದಿಲ್ಲ. ಛಾಯಾಗ್ರಹಕನ ಬದುಕಿನ ಬಗ್ಗೆಯೇ ಹೇಳುತ್ತವೆ.

*

# ಬೆಳಗಿನ ಉಪಹಾರ

ಇತ್ತೀಚಿನ ಒಂದು ಸಮೀಕ್ಷೆಯಂತೆ ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿರುವವರ ಮಾನಸಿಕ ಮತ್ತು ದೈಹಿಕ ಅಶಕ್ತತೆ, ಉಪಹಾರ ಸೇವನೆ ಮಾಡಿದವರಿಗಿಂತ ಹೆಚ್ಚಿನ ಪ್ರಮಾಣದಲ್ಲಿರುವುದಾಗಿ ತಿಳಿದುಬಂದಿದೆ. ಬೆಳಿಗ್ಗೆ ಉಪಾಹಾರ ಸೇವಿಸದ ವ್ಯಕ್ತಿಯ ರಕ್ತದಲ್ಲಿಯ ಸಕ್ಕರೆಯ ಅಂಶವು ಕಡಿಮೆಯಾಗಿ ನಿತ್ರಾಣ, ದೌರ್ಬಲ್ಯ ಮತ್ತು ರೇಗಾಟಗಳು ಕಾಣಿಸಿಕೊಳ್ಳುವುದುಂಟು. ಅತಿ ಪ್ರಮಾಣದಲ್ಲಿ ಇನ್ಸುಲಿನ್ ಸೇವಿಸಿದ ಸಿಹಿಮೂತ್ರ ರೋಗಿಗೂ ಇದೇ ರೀತಿ ಆಗುವುದಿದೆ.

ಅನೇಕರು ಅನೇಕ ಕಾರಣಗಳಿಂದ ಬೆಳಗಿನ ಉಪಾಹಾರವನ್ನು ಬಿಡುವುದುಂಟು. ಆದರೆ ಬೆಳಿಗ್ಗೆ ಏನನ್ನೂ ತಿನ್ನದೆ ದಿನವನ್ನಾರಂಭಿಸುವುದು ಯಾವ ರೀತಿಯಲ್ಲಿಯೂ ಒಳ್ಳೆಯದಲ್ಲ. ಹಸಿವಿನಿಂದ ನಿತ್ರಾಣರಾಗುವುದು ಎಲ್ಲರಿಗೂ ತಿಳಿದ ವಿಷಯ. ಬೆಳಿಗ್ಗೆ ಏನೂ ತಿನ್ನದ ಕಾರ್ಮಿಕರಂತೂ ಕೆಲಸವನ್ನು ಸರಿಯಾಗಿ ಮಾಡಲಾರರು. ಹಾಗೆಯೇ ಶಾಲೆಗೆ ಹೋಗುವ ಮಕ್ಕಳೂ ಕೂಡಾ.

ಹಸಿವು ಹೆಚ್ಚಿದಂತೆಲ್ಲಾ ಮನುಷ್ಯನಿಗೆ ಕೆಲಸದಲ್ಲಿ ಆಸಕ್ತಿ ಕಡಿಮೆಯಾಗುವುದಲ್ಲದೆ ಕೈಕಾಲುಗಳಲ್ಲಿ ತ್ರಾಣವಿಲ್ಲದೇ ಹಿಡಿತ ತಪ್ಪಿ ಅಪಘಾತಗಳು ಸಂಭವಿಸುವ ಸಾಧ್ಯತೆಯೂ ಉಂಟು. ಆಬಾಲವೃದ್ಧರೆಲ್ಲರಿಗೂ ಇದು ಅನ್ವಯ. ಊಟದ ಮಧ್ಯೆ ತಿಂಡಿ ತಿನ್ನುವ ಅಭ್ಯಾಸವೂ ಬೆಳಗಿನ ಉಪಾಹಾರ ತಿನ್ನದೇ ಇರುವುದಕ್ಕೆ ಕಾರಣವಾಗಿರಬಹುದು. ಆದರೆ ನಾವು ಊಟದ ಮಧ್ಯೆ ತಿನ್ನುವ ವಸ್ತುಗಳಲ್ಲಿ ಹೆಚ್ಚಿನವು ಸಿಹಿ ಪದಾರ್ಥಗಳು. ಕೇಕ್, ಬಿಸ್ಕಟ್, ಜಾಮ್, ಚಾಕೋಲೇಟ್ ಮುಂತಾದವುಗಳು ರಕ್ತದಲ್ಲಿಯ ಸಕ್ಕರೆಯ ಅಂಶವನ್ನು ಹೆಚ್ಚಿಸಿ ಹಸಿವನ್ನು ಮರೆಸಿಬಿಡುತ್ತವೆ. ಆದರೆ ಇದು ಕೇವಲ ತಾತ್ಕಾಲಿಕ.

ಕೆಲವರಿಗಂತೂ ಬೆಳಿಗ್ಗೆ ಏನನ್ನಾದರೂ ತಿನ್ನಬೇಕೆಂದರೆ ಜೀವ ಹೋದಂತಾಗುತ್ತದೆ. ಇದಕ್ಕೆ ಏನು ಕಾರಣ ? ಅಭ್ಯಾಸಬಲ ಒಂದು ಕಾರಣವಾದರೆ ರಾತ್ರಿಯಲ್ಲಿ ಮಲಗುವ ಮುನ್ನ ಅತಿಯಾಗಿ ತಿನ್ನುವುದು ಇನ್ನೊಂದು ಕಾರಣವಿರಬಹುದು. ನಾವು ಬೆಳಿಗ್ಗೆ ತಿಂಡಿ ತಿನ್ನಲು ತಯಾರಿಲ್ಲ. ಆದರೆ ದೇಹಕ್ಕೆ ಬೇಕು. ಒಂದು ವೇಳೆ ನಾವು ರಾತ್ರಿಯಲ್ಲಿ ಮಿತಿ ಮೀರಿ ತಿಂದು ಬೆಳಿಗ್ಗೆ ಉಪಹಾರಕ್ಕೆ ಕುಳಿತರೆ ಹೊಟ್ಟೆಯಲ್ಲಿ ಜಾಗವಿರದು.

• ರಾಮನ್

(ಮೆಡಿಕಲ್ ಡೈಜೆಸ್ಟ್‌ನಿಂದ ಸಂಗ್ರಹ)

# ರೆಟಿನಾಯಿಡ್

## ಹಾಗೂ

# ಕ್ಯಾಲಿಕ್ಯಾಲ್

## ಎರಡು ಹೊಸ ಅನ್ನಾಂಗಗಳು

*ಬಿ.ಆರ್. ಶ್ರೀನಿವಾಸ್*

ಪೌಷ್ಟಿಕ ಆಹಾರ ದೇಹದ ಆರೋಗ್ಯ ಕಾಪಾಡಲು ಅತ್ಯವಶ್ಯಕವಾದ ಅನ್ನಾಂಗಗಳನ್ನು ಸಮತೋಲನ ಪ್ರಮಾಣದಲ್ಲಿ ಹೊಂದಿರಬೇಕು. ನಾವು ಸೇವಿಸುವ ಆಹಾರದಲ್ಲಿ ಅನ್ನಾಂಗಗಳ ಪ್ರಮಾಣ ನಿಗದಿತ ಮಟ್ಟಕ್ಕಿಂತ ಕಡಿಮೆ ಇದ್ದರೆ, ಅನೇಕ ರೋಗ-ರುಜಿನಗಳು ತಲೆದೋರುತ್ತವೆ. ಈಗ ನಾವು 'ಎ' ಮತ್ತು 'ಡಿ' ಅನ್ನಾಂಗಗಳ ಪಾತ್ರವನ್ನು ಪರಿಶೀಲಿಸೋಣ.

ಈಗ ಲಭ್ಯವಿರುವ ಆಧಾರದ ಮೇಲೆ 'ಎ' ಅನ್ನಾಂಗ ಕಣ್ಣಿನ ದೃಷ್ಟಿಕೋನವನ್ನು ಹೆಚ್ಚಿಸುತ್ತದೆ ಹಾಗೂ ಕಣ್ಣಿನ ಹಲವು ರೋಗಗಳು ಬರದಂತೆ ತಡೆಗಟ್ಟುತ್ತದೆ ಎಂದು ತಿಳಿದು ಬಂದಿದೆ. ವಿಶೇಷವಾಗಿ ಇರುಳುಗುರುಡುತನ ಬರದಂತೆ ತಡೆಗಟ್ಟುತ್ತದೆ ಎಂಬುದು ಸರ್ವ ವಿದಿತ.

ಇತ್ತೀಚೆಗೆ ನಡೆಸಿದ ಸಂಶೋಧನೆಯು 'ಎ' ಅನ್ನಾಂಗದ ನವೀನ ಪಾತ್ರವನ್ನು ಹೊರಚೆಲ್ಲಿದೆ. ಭಯಾನಕವಾದ ಅರ್ಬುದ ರೋಗ (Cancer) ನಿವಾರಣೆಯಲ್ಲಿ 'ಎ' ಅನ್ನಾಂಗ ವಿಶಿಷ್ಟವಾದ ಪಾತ್ರ ವಹಿಸುತ್ತದೆಂದು ತಿಳಿದು ಬಂದಿದೆ.

'ಎ' ಅನ್ನಾಂಗವು ಹಲವು ವಿನ್ಯಾಸಗಳನ್ನು (structure) ಹೊಂದಿರುತ್ತದೆ. ಅದರಲ್ಲಿ ರೆಟಿನಾಯಿಡ್ (Retenoid) ವಿನ್ಯಾಸ ಒಂದು. 'ಎ' ಅನ್ನಾಂಗ ಮತ್ತು ರೆಟಿನಾಯಿಡ್ ಕಣಗಳಲ್ಲಿ ವಿಶೇಷವಾದ ವಿನ್ಯಾಸ ಬದಲಾವಣೆ ಕಂಡುಬರುವುದಿಲ್ಲ. ಈ ಎರಡು ಕಣಗಳ ವಿನ್ಯಾಸದಲ್ಲಿ ಸೂಕ್ಷ್ಮ ವ್ಯತ್ಯಾಸವಿದೆ. ಪ್ರಯೋಗಾಲಯದಲ್ಲಿ 'ಎ' ಅನ್ನಾಂಗವನ್ನು ಸುಲಭ ರೀತಿಯಲ್ಲಿ ರೆಟಿನಾಯಿಡ್ ಆಗಿ ಪರಿವರ್ತಿಸಬಹುದು.

ರಾಸಾಯನಿಕ ವಸ್ತುಗಳ ಸೇವನೆಯಿಂದ ಅರ್ಬುದ ರೋಗ ಬರುತ್ತದೆ. ಹಲವು ಸಂದರ್ಭದಲ್ಲಿ ರಾಸಾಯನಿಕ ವಸ್ತುಗಳು ಜೀವಕೋಶವನ್ನು ಪದೇ ಪದೇ ಸ್ಪರ್ಶಿಸುವುದರಿಂದಲೂ ಅರ್ಬುದ ರೋಗ ಉಂಟಾಗುತ್ತದೆ. ಹೀಗೆ ರೋಗದಿಂದ ನರಳುವ ಬಹುತೇಕ ಮಂದಿ ಕಾರ್ಮಿಕರಿರಬಹುದು: ಇಲ್ಲವೆ ಪ್ರಯೋಗಾಲಯದಲ್ಲಿ ರಾಸಾಯನಿಕ ವಸ್ತುಗಳ ಸಂಘಟನೆಯಲ್ಲಿ (Synthesis) ನಿರತರಾದ ವಿಜ್ಞಾನಿಗಳಿರಬಹುದು.

ಅರ್ಬುದ ರೋಗ ದೇಹದಲ್ಲಿ ಎರಡು ಹಂತವಾಗಿ ಪ್ರವಹಿಸುತ್ತದೆ. ಮೊದಲನೆಯ ಹಂತ; ಜೀವಕಣಕ್ಕೆ ಅರ್ಬುದ ರೋಗ ತಗಲುವುದು; ಎರಡನೆಯ ಹಂತ ರೋಗಾಣುಗಳು ಸಾಮಾನ್ಯ ಜೀವಕಣಗಳನ್ನು ರೋಗಾಣುಗಳಾಗುವಂತೆ ಪ್ರಚೋದಿಸುವುದು. ರೆಟಿನಾಯಿಡ್ ಈ ಎರಡೂ ಹಂತದ ರೋಗ ನಿವಾರಣೆಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಜೀವಕಣಗಳಿಗೆ ರೋಗ ತಾಗದಂತೆ ಮೊದಲ

ನೆಯ ಹಂತದಲ್ಲಿ ಕಾಣಿಸುತ್ತದೆ. ಎರಡನೆಯ ಹಾಗೂ ಬಹಳ ತೀಕ್ಷ್ಣವಾದ ಹಂತ; ರೋಗ ಹರಡದಂತೆ ತಡೆಗಟ್ಟುತ್ತದೆ. 'ಎ' ಅನ್ನಾಂಗ ಈ ಎರಡೂ ಹಂತಗಳಲ್ಲಿ ನಿಯಂತ್ರಣ ಶಕ್ತಿಯನ್ನು ಹೊಂದಿರುತ್ತದೆ. ಆದರೆ ಅದು ವಿಶಿಷ್ಟವಾಗಿ ನೆರವಾಗಲು ನಾವು ಆಹಾರದಲ್ಲಿ 'ಎ' ಅನ್ನಾಂಗವನ್ನು ನಿಗದಿತ ಪ್ರಮಾಣಕ್ಕಿಂತ ಅಧಿಕವಾಗಿ ಸೇವಿಸಬೇಕು. ಹೆಚ್ಚು ಪ್ರಮಾಣದಲ್ಲಿ 'ಎ' ಅನ್ನಾಂಗವನ್ನು ಸೇವಿಸುವುದರಿಂದ ವ್ಯಕ್ತಿಗೆ ಹಲವು ರೋಗಗಳು ತಲೆದೋರುತ್ತವೆ. ಆದರೆ ರೆಟಿನಾಯಿಡ್ ಸೇವನೆ ಈ ನ್ಯೂನತೆಯನ್ನು ಹೋಗಲಾಡಿಸುತ್ತದೆ. ಹೆಕ್ಟರ್ ಎಂಬ ಅಮೇರಿಕದ ವಿಜ್ಞಾನಿ ಈ ವಿಷಯವನ್ನು ನಿರಂತರ ಸಂಶೋಧನೆಯ ಫಲದಿಂದ ಹೊರಗೆಡಹಿದ್ದಾರೆ. ಇವರು ವಿಸ್‌ಕಾನ್ಸಿನ್ ವಿಶ್ವವಿದ್ಯಾನಿಲಯದಲ್ಲಿ ಎರಡು ದಶಕಗಳಿಂದ ಜೀವ ರಸಾಯನಶಾಸ್ತ್ರ (Biochemistry) ವಿಭಾಗದಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ.

ರೆಟಿನಾಯಿಡ್ ಈಗಾಗಲೇ ಅನೇಕ ರೋಗಿಗಳ ಮೇಲೆ ಪ್ರಯೋಗಿಸಲ್ಪಟ್ಟಿದೆ. ಒಂದು ಹರ್ಷದಾಯಕ ಸಂಗತಿ ಎಂದರೆ ಶೇಕಡಾ 70 ಭಾಗ ರೋಗಿಗಳು ಅರ್ಬುದ ರೋಗದಿಂದ

## ಅದೃಷ್ಟ ಲಿಖಿತ

ಆಗತಾನೇ ಹುಟ್ಟಿದ ಮಕ್ಕಳ ಅದೃಷ್ಟವನ್ನು ಬರೆದ ಭಗವಂತ ಸ್ವರ್ಗಕ್ಕೆ ಹೋಗುತ್ತಿದ್ದಾಗ ಮೌಲವಿಯೊಬ್ಬ ಅದನ್ನು ನೋಡಿಬಿಟ್ಟ. ಭಗವಂತನ ಕಾಲು ಹಿಡಿದು ಅಳತೊಡಗಿದ. ಭಗವಂತ ಮೊದಲು ಅವನನ್ನು ಬೈದ. ಅನಂತರ ಪುಸಲಾಯಿಸಿ ಹಿಂದೆ ಕಳಿಸಲು ನೋಡಿದ. ಆದರೂ ಆ ಮೌಲವಿ ಬಿಡಲಿಲ್ಲ. ಆಗ ಭಗವಂತ ನಿರುಪಾಯನಾಗಿ 'ಏನು ಬೇಕು ಕೇಳು' ಎಂದ.

ಆ ಮೌಲವಿಗೆ ಏನು ಕೇಳಬೇಕೆಂದು ತಿಳಿಯಲಿಲ್ಲ. ಭಗವಂತನು ಪುನಃ ಕೇಳಿದ. ಮೌಲವಿ ಇನ್ನೊಂದು ದಿನ ಕೇಳುತ್ತೇನೆಂದ. ಭಗವಂತ ಹೊರಟುಹೋದ. ಮನೆಗೆ ಹೋದ ಮೌಲವಿ ಹೆಂಡತಿಯೊಡನೆ ಸಮಾಲೋಚನೆ ನಡೆಸಿದ. ಒಂದು ದಿನ ಭಗವಂತನನ್ನು ಕರೆದು 'ನನಗೆ ಮಗು ಹುಟ್ಟಲಿದೆ. ಅದರ ಅದೃಷ್ಟ ನಾನೆ ಬರೆಯಬೇಕು' ಎಂದ. ಭಗವಂತ 'ತಥಾಸ್ತು' ಎಂದು ಹೇಳಿ ಹೊರಟುಹೋದ.

ಮೌಲವಿಗೆ ಪುತ್ರ ಜನಿಸಿದ. ಆತ ಭಗವಂತನನ್ನು ಕರೆದು ಅವನ ಮಾತನ್ನು ನೆನಪು ಮಾಡಿದ. ಭಗವಂತ ಅವನ ತಲೆಯ ಮೇಲೆ ಕಿರೀಟವನ್ನಿಟ್ಟ. ಆದರೆ ಆದದ್ದೇನು. ಸಹಸ್ರಾರು ಶಿಶುಗಳು ಕೈಮೇಲೆ ಅದೃಷ್ಟ ಬರೆಯುವಂತೆ ಕೇಳತೊಡಗಿದವು. ಅವರ ಮಧ್ಯೆ ಮೌಲವಿ ತನ್ನ ಮಗುವನ್ನು ಹುಡುಕತೊಡಗಿದ. "ಭಗವಂತಾ, ನನ್ನ ಮಗು ಎಲ್ಲಿದೆ?" ಎಂದು ಕೇಳತೊಡಗಿದ.

"ಮೂರ್ಖ, ನನ್ನೆದುರು ನನ್ನದು ನಿನ್ನದು ಎಂಬ ಭೇದವಿಲ್ಲ. ಸಂಪೂರ್ಣ ಜಗತ್ತು ನನ್ನ ಸಂತಾನ" ಎಂದಿಷ್ಟು ಹೇಳಿ ಖಿನ್ನನಾಗಿ ಹೊರಟುಹೋದ. ಆ ದಿನ ಅದೃಷ್ಟ ಬರೆಯಲಿಕ್ಕಾಗಲೇ ಇಲ್ಲ. ಅಂದು ಜನಿಸಿದ ಮಕ್ಕಳು ಅದೃಷ್ಟ ಹೀನರಾಗಿಯೇ ಉಳಿದರು. ಆ ಸಂತತಿ ಇನ್ನೂ ಅಲ್ಲಿ ಇಲ್ಲಿ ಕಾಣಿಸುತ್ತಿವೆ.

● ಕೆ. ಶಾಂತಾಮಣಿ.
(ಸಾರಿಕಾದಿಂದ)

ಸಂಪೂರ್ಣ ಗುಣಹೊಂದಿದ್ದಾರೆ. ಮುಂದಿನ ದಶಕದಲ್ಲಿ 'ಎ' ಅನ್ನಾಂಗ ಅರ್ಬುದ ರೋಗ ನಿವಾರಣೆಯಲ್ಲಿ ಮಹತ್ತರ ಪಾತ್ರವನ್ನು ಹೊಂದಿರುತ್ತದೆ ಎಂಬುದು ಹೆಕ್ಸರ ದೃಢ ನಿಲುವು. ಇದು ಮಾನವ ಕಲ್ಯಾಣಕ್ಕೆ ಉನ್ನತ ಕೊಡುಗೆ.

ತಮ್ಮ ಮುಖದ ಕಾಂತಿ ಮತ್ತು ಚೆಲುವನ್ನು ಹೆಚ್ಚಿಸಿಕೊಳ್ಳಲು ಆಸೆ ಪಡುವುದು ಸ್ತ್ರೀ ಸಹಜ ಸಂಗತಿ. ಆದರೆ ತರುಣಿಯರ ಆಸೆಗೆ ಮಾರಕ ಎನ್ನುವಂತೆ ಮೊಡವೆಗಳು (Ance) ತಲೆದೋರುವುದು. ಅನೇಕ ತರುಣಿಯರಲ್ಲಿ (ತರುಣರು ಹೊರತಲ್ಲ) ಯೌವನ ಮೂಡಿ ಬಂದಾಗ ಮುಖದ ಮೇಲೆ ಮೊಡವೆಗಳು ಎದ್ದು ತೋರುತ್ತವೆ. ಅವು ಸಂಪೂರ್ಣ ನಿರ್ಮೂಲನವಾಗದೆ ಹಲವು ಸಂದರ್ಭದಲ್ಲಿ ಮುಖದ ಮೇಲೆ ಕಲೆಯನ್ನು ಉಂಟುಮಾಡಿ ಮುಖದ ಕಾಂತಿ ಹಾಗೂ ಸೌಂದರ್ಯ ಕುಂದುವಂತೆ ಮಾಡುತ್ತವೆ. ಈ ರೀತಿಯ ಮೊಡವೆಗಳ ಸೃಷ್ಟಿಗೆ ದೇಹದಲ್ಲಾಗುವ ರಾಸಾಯನಿಕ ಕ್ರಿಯೆ ಕಾರಣ. ದೇಹದಲ್ಲಿ ಅಧಿಕ ಪ್ರಮಾಣದಲ್ಲಿ ಉತ್ಪತ್ತಿಯಾಗುವ ಚೋದಕ ಸ್ರಾವ (Hormones) ಈ ಕಾರ್ಯದಲ್ಲಿ ತೊಡಗುತ್ತದೆ.

ಇದು ದೇಹ ರಚನೆಯನ್ನು ಹೊಂದಿಕೊಂಡು ಕೆಲವು ವ್ಯಕ್ತಿಗಳಲ್ಲಿ ತೀಕ್ಷ್ಣಗತಿಯನ್ನು ಹೊಂದಿರುತ್ತದೆ. ಮೊಡವೆಗಳು ಸೂಕ್ಷ್ಮಕ್ರಿಮಿಗಳ ಬೆಳವಣಿಗೆಗೆ ಬಹು ಉತ್ತೇಜನ ಕೊಡುತ್ತವೆ. ಇದರಿಂದ ಅನೇಕ ಚರ್ಮ ರೋಗಗಳು ತಗಲುವ ಸಂಭವವಿದೆ. ರೆಟಿನಾಯಿಡ್ ಸೇವನೆಯಿಂದ ಮೊಡವೆ ಮತ್ತು ಇನ್ನಿತರ ಚರ್ಮ ರೋಗಗಳ ನಿವಾರಣೆ ಸಾಧ್ಯ ಎಂದು ವೈಜ್ಞಾನಿಕವಾಗಿ ತಿಳಿದು ಬಂದಿದೆ. ಇದರಿಂದ ನಮಗೆ ತಿಳಿದ ಸಂಗತಿ ಎಂದರೆ 'ಎ' ಅನ್ನಾಂಗ ಎರಡು ವಿಶಿಷ್ಟ ರೀತಿಯಲ್ಲಿ ರೋಗ ನಿವಾರಣೆಯ ಮೂಲಭೂತ ಕಾರಣವಾಗಿ ದೇಹದಲ್ಲಿ ಕಾರ್ಯ ಮಾಡುತ್ತದೆ ಎಂಬುದು. ಈ ರೋಗಗಳ ನಿವಾರಣೆಯಲ್ಲಿ 'ಎ' ಅನ್ನಾಂಗದ ಪಾತ್ರ ಹಿಂದೆ

## ಪ್ರಿಯೇ !

ನಿನ್ನ
ನೆನಪಾದ
ಬೆಳದಿಂಗಳ ರಾತ್ರಿ
ಅಂಗಳದ ಹಾಲಲ್ಲದ್ದಿ
ಅರಳಿಸಿದ
ಹನಿ ಹೂಗಳು
ಹಾಳೆ ತುಂಬ
ಹೊರಳಾಡುತ್ತವೆ
ಕವಿತೆಗಳಾಗಿ

● ಚಂದ್ರಕಾಂತ ವಡ್ಡು.

ತಿಳಿದಿರಲಿಲ್ಲ. 'ಎ' ಅನ್ನಾಂಗ ಮಿಶ್ರಿತ Lotion ಗಳು ಮಾರುಕಟ್ಟೆಯಲ್ಲೆ ಸದ್ಯದಲ್ಲೆ ಬರಲಿವೆ.

'ಡಿ' ಅನ್ನಾಂಗ ಮೂಳೆ ರೋಗ ನಿವಾರಣೆಯಲ್ಲೆ ವಿಶಿಷ್ಟ ಸ್ಥಾನ ಪಡೆದಿದೆ. ಮಕ್ಕಳಲ್ಲಿ ಮೂಳೆಗಳ ಬೆಳವಣಿಗೆಗೆ 'ಡಿ' ಅನ್ನಾಂಗ ಅತ್ಯವಶ್ಯಕ. ಆದರೆ 'ಡಿ' ಅನ್ನಾಂಗ ನಾವು ಸೇವಿಸುವ ಆಹಾರದಲ್ಲಿ ನೇರವಾಗಿ ದೊರಕುವುದಿಲ್ಲ. ಎಳೆಯ ಸೂರ್ಯಕಿರಣ (Ultraviolet rays) ಚರ್ಮದ ಮೇಲೆ ಬಿದ್ದಾಗ ಚರ್ಮದಲ್ಲಿರುವ ಜೀವಕಣಗಳು, ಕೊಲೆಸ್ಟರಾಲ್ ಎಂಬ ರಕ್ತದಲ್ಲಿ ಸಂಚರಿಸುವ ವಸ್ತುವನ್ನು 'ಡಿ' ಅನ್ನಾಂಗದಂತೆ ಪರಿವರ್ತಿಸುತ್ತವೆ. 'ಡಿ' ಅನ್ನಾಂಗ ಕೆಲವು ನವೀನ ರಾಸಾಯನಿಕ ಕ್ರಿಯೆಯಲ್ಲಿ ಪಾಲುಗೊಳ್ಳುವುದು ಎಂದು ಇತ್ತೀಚಿನ ಸಂಶೋಧನೆಯಿಂದ ತಿಳಿದುಬಂದಿದೆ. ವಯಸ್ಕರಲ್ಲಿ ದೇಹಶಕ್ತಿ ಕುಂದಿ ಚರ್ಮದ ತಂತುಗಳು ತಮ್ಮ ವಿಶಿಷ್ಟ ಗುಣಗಳನ್ನು ಕ್ರಮೇಣ ಕಳೆದುಕೊಳ್ಳುತ್ತವೆ. ಇದರಿಂದ 'ಡಿ' ಅನ್ನಾಂಗದ ಕೊರತೆ ಉಂಟಾಗುವುದು. ಆಗ ಮೂಳೆಗಳ ಶಕ್ತಿ ಮತ್ತು ವಿನ್ಯಾಸ

ದಲ್ಲಿ ಅನೇಕ ಬದಲಾವಣೆಗಳು ತಲೆದೋರುತ್ತವೆ. ಈ ರೀತಿಯ ವಿನ್ಯಾಸ ಹಾಗೂ ಪ್ರಮಾಣ ನ್ಯೂನತೆಯಿಂದ ಮೂಳೆಯ ಮೂಲಭೂತ ಕಾರ್ಯದಲ್ಲಿಯೇ ಮಹತ್ತರವಾದ ಪರಿಣಾಮ ಉಂಟಾಗಬಹುದು. (ಈ ಸಂದರ್ಭದಲ್ಲಿ ಕೊಬ್ಬು ಮತ್ತು grey matter ಸಂಯೋಗದಲ್ಲಿ ಮೂಳೆ ಮಹತ್ತರವಾದುದು ಎಂದು ಸ್ಮರಿಸಬಹುದು). ಈ ರೀತಿಯ ಕುಂದು ಕೊರತೆಗಳಿಗೆ ಅನೇಕ ಸ್ತ್ರೀಯರು ಒಳಗಾಗುವರು. ಇದನ್ನು ಸುಧಾರಿಸಲು ವೈದ್ಯರು ಎಸ್ಟ್ರೋಜೆನ್ ಎಂಬ ಸಂಘಟಿತ ಹಾರ್ಮೋನ್ ಕೊಡುತ್ತಾರೆ. ಆದರೆ ಎಸ್ಟ್ರೋಜೆನ್ ಸೇವನೆಯಿಂದ ದೇಹದಲ್ಲಿ ಅನೇಕ ಬದಲಾವಣೆಗಳು ತಲೆದೋರುವುವು. ಇದು ಜೀವ ಕೋಶಗಳ ನೈಸರ್ಗಿಕ ಕಾರ್ಯಕ್ಕೆ ಅಡ್ಡಿ ತರುತ್ತದೆ. ಇದನ್ನು ತಡೆಗಟ್ಟಲು ಕ್ಯಾಲಿಕ್ಟ್ರಾಲ್ (Calcilfrol) ಎಂಬ ಸಂಘಟಿತ ವಸ್ತುವನ್ನು ಸೇವಿಸಬಹುದು. ಮೇಲೆ ಹೇಳಿದ ಮೂಳೆಯ ನ್ಯೂನತೆಯನ್ನು ಕ್ಯಾಲಿಕ್ಟ್ರಾಲ್ ಸಮರ್ಪಕವಾಗಿ ನಿವಾರಿಸುತ್ತದೆ. ಅಲ್ಲದೇ ಎಸ್ಟ್ರೋಜೆನ್ ಸೇವನೆಯು ರೂಪಿಸುವ ಬೇನೆಯನ್ನು ಉಂಟು ಮಾಡುವುದಿಲ್ಲ. ಕ್ಯಾಲಿಕ್ಟ್ರಾಲ್ ಮತ್ತು 'ಡಿ' ಅನ್ನಾಂಗದಲ್ಲಿ ವಿಶೇಷ ವಿನ್ಯಾಸ ಬದಲಾವಣೆಯಿಲ್ಲ. ಪ್ರಯೋಗಾಲಯದಲ್ಲಿ ಅತ್ಯಂತ ಸುಲಭ ರೀತಿಯಲ್ಲಿ ಕ್ಯಾಲಿಕ್ಟ್ರಾಲ್ ಕಣವನ್ನು ಸಂಘಟಿಸಬಹುದು ಹಾಗೂ ಸಂಸ್ಕರಿಸಬಹುದು. ಇದನ್ನು ಆಹಾರ ಪದಾರ್ಥದಲ್ಲಿ ಅತಿ ಸುಲಭದಿಂದ ಮತ್ತು ಮಿತ ವ್ಯಯದಲ್ಲಿ ಬೆರಸಬಹುದು. ಇದರಿಂದಾಗಿ ಆಹಾರದಲ್ಲಿ 'ಡಿ' ಅನ್ನಾಂಗದ ಕೊರತೆಯನ್ನು ಉತ್ತಮ ರೀತಿಯಲ್ಲಿ ಹೋಗಲಾಡಿಸಬಹುದು. ಹೀಗಾಗಿ 'ಡಿ' ಅನ್ನಾಂಗ ಕೊರತೆಯಿಂದ ಉಂಟಾಗುವ ರೋಗಗಳನ್ನು ನಿವಾರಿಸಬಹುದು. ಕ್ಯಾಲಿಕ್ಟ್ರಾಲ್ ಮಾನವ ಕಲ್ಯಾಣಕ್ಕೆ 20ನೇ ಶತಕದ ವಿಜ್ಞಾನಿಗಳ ಅಭೂತಪೂರ್ವ ಕೊಡುಗೆ. ಮುಂದಿನ ದಿನಗಳಲ್ಲಿ ಸಂಘಟಿತ ಹಾಗೂ ಸಂಸ್ಕರಿಸಿದ ಆಹಾರ ಪದಾರ್ಥಗಳಲ್ಲಿ ದೇಹಕ್ಕೆ ಅತ್ಯವಶ್ಯಕವಾದ ಕ್ಯಾಲಿಕ್ಟ್ರಾಲ್ ಘಟಕ, ಸುಲಭ ರೀತಿಯಲ್ಲಿ ದೊರೆಯುವುದರಲ್ಲಿ ಯಾವ ಸಂಶಯವೂ ಇಲ್ಲ. ●

## ಜನ ವಿಶ್ವಾಸ

**ಚೀ**ನಾ ದೇಶದ ಸುಪ್ರಸಿದ್ಧ ತತ್ವಜ್ಞಾನಿ - ಕನ್‌ಫ್ಯೂಶಿಯಸ್‌ರಿಗೆ ಅವರ ಓರ್ವ ಶಿಷ್ಯನು ಹೀಗೆ ಪ್ರಶ್ನೆ ಕೇಳಿದನು. ''ಗುರುವರ್ಯ, ಶಾಸನವನ್ನು ಪ್ರಭಾವಶಾಲಿಯನ್ನಾಗಿ ಮಾಡಲು ಏನೇನು ಮಾಡಬೇಕು'' ತತ್ವಜ್ಞಾನಿ ಉತ್ತರಿಸಿದರು. ''ಸಾಕಷ್ಟು ಭೋಜನ, ಅಸ್ತ್ರ-ಶಸ್ತ್ರ ಮತ್ತು ಜನತೆಯ ವಿಶ್ವಾಸ ಪಡೆಯಬೇಕು'' ಶಿಷ್ಯ ಪುನಃ ಪ್ರಶ್ನೆ ಮಾಡಿದ. ''ಒಂದು ವೇಳೆ ಇವುಗಳಲ್ಲಿ ಒಂದನ್ನು ತ್ಯಾಗ ಮಾಡಬೇಕಾದಲ್ಲಿ ಯಾವುದನ್ನು ತ್ಯಾಗ ಮಾಡಬೇಕು?''

''ಅಸ್ತ್ರ - ಶಸ್ತ್ರಗಳನ್ನು.'' ತತ್ವಜ್ಞಾನಿ ಉತ್ತರಿಸಿದರು. ''ಮತ್ತು ಉಳಿದೆರಡರಲ್ಲಿ ಒಂದನ್ನು ಬಿಡಬೇಕಾದಾಗ?'' ಆಗ ಕನ್‌ಫ್ಯೂಶಿಯಸ್ ಗಂಭೀರರಾದರು. ''ಇಂಥ ಸ್ಥಿತಿಯಲ್ಲಿ ಭೋಜನವನ್ನೇ ಬಿಟ್ಟು ಬಿಡಬೇಕು. ಅನಂತಕಾಲದಿಂದಲೂ ಮನುಷ್ಯ ಮೃತ್ಯುಗೀಡಾಗುತ್ತ ಬಂದಿದ್ದಾನೆ. ಭೋಜನದ ಅಭಾವದಿಂದ ಕೆಲವರು ಮೃತ್ಯುವಿಗೀಡಾಗುವರು.''

ಶಿಷ್ಯ ಮತ್ತೊಮ್ಮೆ ಪ್ರಶ್ನೆ ಕೇಳಿದ. ''ಒಂದು ವೇಳೆ ಜನತೆಯ ವಿಶ್ವಾಸವನ್ನು ತ್ಯಾಗ ಮಾಡಿದರೆ ಹೇಗಾಗುವುದು?'' ಆಗ ತತ್ವಜ್ಞಾನಿ ಒಂದು ಕ್ಷಣವೂ ಯೋಚಿಸದೇ ಉತ್ತರಿಸಿದರು. ''ಆಗ ಸರ್ವನಾಶವಾಗುವುದು, ಯಾವುದೇ ಶಾಸನವು ಭೋಜನ ಹಾಗೂ ಅಸ್ತ್ರ-ಶಸ್ತ್ರಗಳಿಲ್ಲದೇ ನಡೆಯಬಹುದು. ಆದರೆ - ಜನತೆಯ ವಿಶ್ವಾಸವಿಲ್ಲದೇ ಒಂದು ಕ್ಷಣವೂ ಉಳಿಯಲಾರದು.''

**ಗಂಗಾವತಿ** **ವೆಂಕಟೇಶ**

# ಮುಂಜಾಗ್ರತೆ

ಪಾಂಚಜನ್ಯ



ಮೃತ್ಯುಂಜಯ ಸೂರ್ಯವಂಶದವನು. ರವಿ ಮೂಡುವುದಕ್ಕೆ ಮುನ್ನ ಅವನು ಹಾಸಿಗೆಯಿಂದ ಏಳುತ್ತಿರಲಿಲ್ಲ. ಅದು ವಾರದ ದಿನಗಳಲ್ಲಿ. ಭಾನುವಾರ ಅವನ ದಿನಚರಿ ಬೇರೆಯೇ ಆಗುತ್ತಿತ್ತು. ಹತ್ತು ಘಂಟೆಗೆ ಎದ್ದರೆ ಅವನ ಹೆಂಡತಿಯ ಪುಣ್ಯ. ಹನ್ನೊಂದಕ್ಕೆ ತಿಂಡಿ ತಿಂದು ನಾಲ್ಕಕ್ಕೆ ಊಟ ಮಾಡುತ್ತಿದ್ದ. ಮಕ್ಕಳಿಗೆ ಊಟಕ್ಕೆ ಬಡಿಸುವಾಗ ಗಂಡನಿಗೆ ತಿಂಡಿಕೊಡಬೇಕು. ಯಾರಾದರೂ ಬಂಧುಗಳೋ, ಮಿತ್ರರೋ ವಕ್ಕರಿಸಿದರೆ ಅವರಿಗೆ ಉಪಚಾರ ಫಲಹಾರ, ಪಾನೀಯ ಪಣ್ಯಾರಗಳ ಸಮಾರಾಧನೆಯಾಗಬೇಕು. ಅನಂತರ ತನ್ನ ಊಟ. ಹಿಂದೆಯೇ ಗಂಡನಿಗೆ ಬಡಿಸಿ, ಕೆಲಸದವಳಿಗೆ ಪಾತ್ರೆಪಡಗಗಳನ್ನು ತೊಳೆಯಲು ಹಾಕುವ ವೇಳೆಗೆ ಸಂಜೆ ಕಾಫಿ ಸಮಯ. ಕಾಫಿ ಆದ ಮೇಲೆ ಏನಾದರೂ ಕರಿದದ್ದೋ ಹುರಿದದ್ದೋ ಕುರುಕಲು ತಿಂಡಿ ಮಾಡಬೇಕು. ಮುಗಿಯುವ ವೇಳೆಗೆ ರಾತ್ರಿ ಊಟಕ್ಕೆ ಮಕ್ಕಳು ತಟ್ಟೆ ಹಾಕಿ

ಕೊಂಡು ಕುಳಿತುಬಿಡುವರು. ಮತ್ತೆ ರಥ ಚಕ್ರ ಪರಿಭ್ರಮಣ.

ಆದರೆ ಅದು ಹಿಂದಿನ ಕಥೆ. ಈಗ ಮೃತ್ಯುಂಜಯ ಬೇಗ ಎದ್ದು ಬಿಡುತ್ತಾನೆ. ಏಕೆಂದರೆ ಭಾನುವಾರ ಬೆಳಗ್ಗೆ ಟಿ.ವಿ.ಯಲ್ಲಿ ರಂಗೋಲಿ ಕಾರ್ಯಕ್ರಮ ಬರುತ್ತದೆ. ಹಳೆಯ ಸಿನಿಮಾ ಹಾಡುಗಳೆಂದರೆ ಅವನ ವಯಸ್ಸಿನ ಇತರರಂತೆ ಅವನಿಗೂ ಅಪರಿಮಿತ ಗೀಳು. ಅಂದೂ ಸಹ ರಂಗೋಲಿಯ ವೇಳೆಗೆ ಟಿ.ವಿ.ಯ ಮುಂದೆ ಆಸೀನನಾದ ಮೃತ್ಯುಂಜಯ, ಜಾಹೀರಾತು ಚಿತ್ರಗಳ ಪ್ರದರ್ಶನ ಮುಗಿದನಂತರ ಉಳಿಯುವ ಕಿಂಚಿತ್ ವೇಳೆಯಲ್ಲಿ ಒಂದೆರಡು ಹಾಡುಗಳನ್ನು ಹಾಕಲು ದೂರದರ್ಶನದವರು ಪ್ರಯತ್ನಿಸುತ್ತಾರೆ. ಇವನಿಗೆ ಪ್ರಿಯವಾದ ಹಾಡೇ ಮೊದಲು ಬರಬೇಕೇ? "ಸೌ ಬರಸಕಿಜಿಂದಗೀ ಮೆ ಅಚ್ಛೆ ಹೈಂ ಸಚ್ಚೇ ಹೈಂ. ಪ್ಯಾರ್ ಕೀ ದೋ ಚಾರ್ ದಿನ್". ತಾರುಣ್ಯದ ದಿನಗಳ ಸವಿ ನೆನಪಿನಲ್ಲಿ ಮುಳುಗಿಹೋದ ಮೃತ್ಯುಂಜಯ.

ಡಿಂಗ್ ....ಡಾಂಗ್...

ಕರೆಗಂಟೆ ಶಬ್ದ ಮಾಡಿತು. ಬೇಸರದಿಂದಲೇ ಮೇಲೆದ್ದ ಮೃತ್ಯುಂಜಯ. ರಂಗೋಲಿ ನೋಡುತ್ತಿರುವಾಗ ಹೆಂಡತಿಯಾಗಲೀ ಮಗಳಾಗಲೀ ಎದ್ದು ಹೋಗುವವರಲ್ಲ. ಹಾಗೊಮ್ಮೆ ಬಲವಂತ ಮಾಡಿ ಎಬ್ಬಿಸಿದರೆ ಗೊಣಗುತ್ತ ದಿನವೆಲ್ಲ ಮುಖಗಂಟು ಹಾಕಿಕೊಂಡು ಓಡಾಡುತ್ತಿದ್ದರು.

ಬಂದಿದ್ದವನು ಅಂಚೆಯವನು. ಅಂಟಿಸಿದ ಕವರೊಂದನ್ನು ಇವನ ಕೈಗಿತ್ತು 'ಸಾರ್. ಸಹಿ ಮಾಡಿ' ಎಂದ.

"ಏನಪ್ಪ: ಇದು"

"ಟೆಲಿಗ್ರಾಂ ಸರ್. ಎಕ್ಸ್‌ಪ್ರೆಸ್."

"ಸೌಬರಸ್ ಕೀ ಜಿಂದಗೀ ಮೆ" ಜರ್ರನೆ ಇಳಿದು ಹೋಯಿತು. ಹೇಗೆ ಹೇಗೋ ವಕ್ರವಕ್ರವಾಗಿ ಸಹಿಮಾಡಿ ಮಡಿಕೆಯನ್ನು ಬಿಚ್ಚಿದ. ಅದೇ ತಾನೆ ಅಂಟಿಸಿದ್ದರಿಂದಲೋ ಗೋಂದಿನ ಪಸೆ ಹಸಿಯಾಗಿಯೇ ಇತ್ತು. "ಅಮ್ಮನಿಗೆ ಸೀರಿಯಸ್. ಆಸ್ಪತ್ರೆಗೆ ಸೇರಿಸಿದ್ದೇವೆ. ಕೂಡಲೆ ಬನ್ನಿ - ಮಾರಿ."

ಮೃತ್ಯುಂಜಯನಿಗೆ ತಲೆಬುಡ ಅರ್ಥವಾಗಲಿಲ್ಲ. ಮಾರಿಯೋ, ಹೆಮ್ಮಾರಿಯೋ. ತನಗಂತೂ ತಂದೆ ತಾಯಿ ಯಾರೂ ಇಲ್ಲ. ಹೆಂಡತಿಗೆ ತಾಯಿಯೇನೋ ಇದ್ದಾರೆ. ಆದರೆ ಆಕೆ ಎರಡು ದಿನದ ಹಿಂದೆಯಷ್ಟೇ ಮಗನ ಮನೆಗೆ ಹೋಗಿದ್ದಾರೆ. ಊರೆಂದರೆ ಬಹಳ ದೂರವೇನೂ ಇಲ್ಲ. ತಂಗಳೂರು. ನಲವತ್ತೈದು ಮೈಲಿದೂರ. ಅಲ್ಲದೆ ತುಮಕೂರೆಂದರೆ ಪ್ರೀತಿ. ನವರಾತ್ರಿಗೆ ಬಂದರೆ ಶಿವರಾತ್ರಿಗೇ ತಂಗಳೂರಿಗೆ ಹೋಗುತ್ತಿದ್ದದ್ದು. ಮತ್ತೆ ಉಗಾದಿಯ ವೇಳೆಗೆ ಹಾಜರು. ಯಾವುದಕ್ಕೂ ಸಂಕೋಚಪಟ್ಟುಕೊಳ್ಳದೆ ಎರಡು ಹೊತ್ತೂ ಭರ್ಜರಿಯಾಗಿ ಊಟವನ್ನೂ, ಬೆಳಗ್ಗೆ ಸಂಜೆ ಹೊಟ್ಟೆತುಂಬ ತಿಂಡಿಯನ್ನೂ ಕಬಳಿಸುತ್ತಿದ್ದ ಆಕೆ ಅನಾರೋಗ್ಯವೆಂದು ಡಾಕ್ಟರರ ಬಳಿ ಎಂದೂ ಹೋದವಳಲ್ಲ. ಅಂತಹವರು ಒಮ್ಮೆಗೇ ಖಾಯಿಲೆಯಿಂದ ಆಸ್ಪತ್ರೆಗೆ ಸೇರಿರುವುದು ಸಾಧ್ಯವೂ ಇಲ್ಲ.

ಗಂಭೀರ ಮುಖದೊಡನೆ ಒಳಬಂದ ಗಂಡನನ್ನು ನೋಡಿ ಅವನ ಹೆಂಡತಿ ವೇದವಲ್ಲಿಗೆ ಗಾಬರಿಯಾಯಿತು. ಮೃತ್ಯುಂಜಯ ಸಾಧು ಪ್ರಾಣಿ. ಕಛೇರಿಯಲ್ಲಿ ಜವಾನನ ಮೇಲೂ ಕೋಪಮಾಡಿಕೊಳ್ಳುತ್ತಿರಲಿಲ್ಲ. ಇನ್ನು ಹೆಂಡತಿಯ ಮೇಲೆ ಸಿಟ್ಟು ಮಾಡಿಕೊಳ್ಳುವನೇ? ಮಕ್ಕಳ ಮೇಲೆ ರೇಗುವುದಂತೂ ದೂರವೇ ಉಳಿಯಿತು. ಆದ್ದರಿಂದಲೇ ಅವನು ಯಾವಾಗಲೂ ನಗುನಗುತ್ತ ಸುಖವಾಗಿರುತ್ತಿದ್ದ. ಮುಖದ ಮೇಲೆ ಸದಾ ಹರಡಿರುತ್ತಿದ್ದ ಮಂದಹಾಸ. ಅಂತಹವನು ಸೀರಿಯಸ್ಸಾಗಿ ಮುಖ ಮಾಡಿಕೊಂಡು ಒಳಬಂದನೆಂದರೆ ಅವನ ಹೆಂಡತಿಗೆ ಏನು ಅನ್ನಿಸಿರಬೇಡ?

"ಏನ್ರೀ ಅದು?" ಎಂದಳು. ಅವನ ಪ್ರತಿಕ್ರಿಯೆಗೂ ಕಾಯದೆ ಅವನ ಕೈಯಿಂದ ಕಾಗದವನ್ನು ಕಿತ್ತುಕೊಂಡಳು. ಓದಿದವಳೇ ಮುಳು ಮುಳು ಅಳತೊಡಗಿದಳು.

ಕಕ್ಕಾಬಿಕ್ಕಿಯಾದ ಮೃತ್ಯುಂಜಯ, ''ಏನೇ, ಏನಾಯಿತೆ ವೇದ?'' ಎಂದು ಕೇಳಿದ.

''ಅಮ್ಮರೀ, ಅಮ್ಮ ನಮ್ಮಮ್ಮ'' ಮುಂದೆ ಅವಳ ಬಾಯಿಂದ ಮಾತು ಹೊರಡಲಿಲ್ಲ.

ಟೀವಿಯ ಮೇಲೆ ನೆಟ್ಟಿದ್ದ ದೃಷ್ಟಿಯನ್ನು ಕೀಳದೆ ಮಗಳು ''ಏನಮ್ಮ, ಅಜ್ಜಿಗೆ ಏನಾಯಿತು? ಹೋಗಿಬಿಟ್ಟಿತಾ?'' ಎಂದು ನಿರ್ವಿಕಾರವಾಗಿ ಕೇಳಿದಳು.

ಅಳು ನಿಲ್ಲಿಸಿದ ವೇದವಲ್ಲಿ ''ನಿಲ್ಲಿಸೇ. ಅಬದ್ಧ ನುಡಿಯಬೇಡ. ನಿಮ್ಮಜ್ಜಿಗೆ ಸೀರಿಯಸ್ಸಾಗಿದೆ. ಆಸ್ಪತ್ರೆಗೆ ಸೇರಿಸಿದ್ದಾರಂತೆ. ಮರಿ ಟೆಲಿಗ್ರಾಂ ಕೊಟ್ಟದ್ದಾನೆ'' ಎಂದು ಹೇಳಿ ಮೂಗು ಒರೆಸಿಕೊಂಡು ಮತ್ತೆ ಅಳಲು ಆರಂಭಿಸಿದಳು.

ಈಗ ಮೃತ್ಯುಂಜಯನಿಗೆ ಜ್ಞಾನೋದಯವಾಯಿತು. ಮರಿ ವೇದವಲ್ಲಿಯ ಅಣ್ಣ. ಅವನ ಪೂರ್ತಿ ಹೆಸರು ಮರಿಯಪ್ಪ. ಪೋಸ್ಟ್ ಆಫೀಸಿನವರ ಕೈಯಲ್ಲಿ ಸಿಕ್ಕಿ ಅವನ ಹೆಸರು ಮಾರಿಯಾಗಿತ್ತು.

ಒಂಬತ್ತು ಗಂಟೆ ಮಹಾಭಾರತ ನೋಡಲು ಮೃತ್ಯುಂಜಯ ತಪ್ಪಿಸಿದ್ದೇ ಇಲ್ಲ. ಕೃಷ್ಣ ಸಂಧಾನಕ್ಕೆಂದು ಹಸ್ತಿನಾವತಿಗೆ ಹೊರಟಿದ್ದ. ಸ್ವಾರಸ್ಯಕರವಾದ ಪ್ರಸಂಗ. ಆದರೆ ನೋಡುತ್ತ ಕುಳಿತರೆ ವೇದವಲ್ಲಿ ಬಿಡುವವಳೇ? ಕುರುಕ್ಷೇತ್ರವನ್ನೇ ಮಾಡಿಯಾಳು!

ಒಲ್ಲದ ಮನಸ್ಸಿನಿಂದ ಅವನು ಮೇಲೆದ್ದ. ಗಂಡಹೆಂಡತಿ ತಡಮಾಡದೆ ತಡೆರಹಿತ ಬಸ್ಸಿನಲ್ಲಿ ತಂಗಳೂರು ಸೇರಿದರು.

ಮರಿ ಕೊಟ್ಟಿದ್ದ ಟೆಲಿಗ್ರಾಮಿನಲ್ಲಿ ಉತ್ಪ್ರೇಕ್ಷೆಯೇನೂ ಇರಲಿಲ್ಲ. ತಿಂದುಂಡುಕೊಂಡು ಆರೋಗ್ಯವಾಗೇ ಇದ್ದ ಮುದುಕಿ ಹಿಂದಿನ ಸಂಜೆ ''ತಲೆ ಸುತ್ತುತ್ತೆ ಕಣೆ'' ಎಂದು ಸೊಸೆಗೆ ಹೇಳಿತಂತೆ.'' ಗಟ್ಟಿಯಾಗಿ ಬಟ್ಟೆ ಕಟ್ಟಿಕೊಳ್ಳಿ ಅತ್ತೆಮ್ಮ. ಸುತ್ತುವುದು ನಿಂತುಹೋಗುತ್ತೆ'' ಅಂದಳು ಸೊಸೆ. ರಾತ್ರಿ ಊಟಕ್ಕೆ ಮೇಲೆ ಏಳದೆ ಇದ್ದಾಗ ಮಗನಿಗೆ ಅನುಮಾನವಾಯಿತು.





ಊಟ ತಿಂಡಿಗಳಿಗೆ ಎಂದೂ ತಪ್ಪಿಸಿಕೊಳ್ಳುತ್ತಿರಲಿಲ್ಲ ಮುದುಕಿ. ಮಲಗಿಬಿಟ್ಟಿದೆ ಎಂದರೆ ಏನೋ ಕಾರಣವಿರಬಹುದು ಎಂದು ತಾನೇ ಹೋಗಿ ನೋಡುತ್ತಾನೆ. ಮುದುಕಿ ಹಾಂ ಎನ್ನಲಿಲ್ಲ ಹೂಂ ಎನ್ನಲಿಲ್ಲ. ಸಂಶಯದಿಂದ ಅಲ್ಲಾಡಿಸಿದ. ''ಅಮ್ಮ, ಅಮ್ಮಾ'' ಎಂದ. ಸೊಸೆ ''ಅತ್ತೆ, ಅತ್ತೆ'' ಎಂದು ಅತ್ತಳು. ಮುದುಕಿಯಿಂದ ಪ್ರತಿಕ್ರಿಯೆಯಿಲ್ಲ. ಮೂಗಿನ ಹತ್ತಿರ ಕೈ ಹಿಡಿದು ಪರೀಕ್ಷಿಸಿದರು. ಉಸಿರಾಟ ನಿಂತಿರಲಿಲ್ಲ. ಆಟೋ ತಂದು ಆಸ್ಪತ್ರೆಗೆ ಸೇರಿಸಿದರು. ಆಗುವುದಲ್ಲ ಮನೆಯ ಹೊರಗೇ ಆಗಲಿ ಎಂಬುದು ಮರಿಯಪ್ಪನ ಅಭಿಲಾಷೆ. ಹೊಸದಾಗಿ ಕಟ್ಟಿಸಿದ್ದ ಮನೆ ಅವರದು. ಕೆಟ್ಟ ನಕ್ಷತ್ರದಲ್ಲಿ ಮುದುಕಿ ಗೊಟಕ್ ಎಂದರೆ ಮನೆ ಬಿಡುವುದಕ್ಕೆ ಆಗುತ್ತದೆಯೇ?

ಆಸ್ಪತ್ರೆ ತಲುಪಿದ ಮೃತ್ಯುಂಜಯ ದಂಪತಿಗಳು ಮುದುಕಿಯ ಬಳಿ ಧಾವಿಸಿದರು. ಮಂಚದ ಮೇಲೆ ಹಿಡಿಯಾಗಿ ಮುದುರಿ ಮಲಗಿತ್ತು

ಮುದುಕಿ ಕೂಗಿದರೂ ಕಣ್ಣು ತೆರೆಯಲಿಲ್ಲ. ಅಲುಗಾಡಲಿಲ್ಲ. ಹೋದ ಜ್ಞಾನ ಇನ್ನೂ ಬಂದಿರಲಿಲ್ಲ. ಡ್ಯೂಟಿ ಡಾಕ್ಟರರ ಕೋಣೆಯನ್ನು ಪತ್ತೆ ಹಚ್ಚಿ ಮೃತ್ಯುಂಜಯ ಅಜ್ಜಿಯ ಬಗ್ಗೆ ವಿಚಾರಿಸಿದ. ಅವರು ಇವನನ್ನು ಅಳೆಯುವ ದೃಷ್ಟಿಯಿಂದ ನೋಡುತ್ತ ''ಪೇಷಂಟಿನ ಕಡೆಯವರು ನೀವೆ ಏನು?'' ಎಂದು ಕೇಳಿದರು.

''ಹೌದು ಸರ್'' ಎಂದ ಮೃತ್ಯುಂಜಯ.

''ಅವರು ಏನಾಗಬೇಕು ನಿಮಗೆ?''

''ಅತ್ತೆ.''

''ಅಲ್ಲರೀ. ಆಸ್ಪತ್ರೆಗೆ ಸೇರಿಸಿ ಎಂದ ಕೂಡಲೇ ನಿಮ್ಮ ಕೆಲಸ ಮುಗಿಯಿತೇನಾ? ಅವರು ಬದುಕಿದರಾ, ಸತ್ತರಾ ಎಂದು ವಿಚಾರಿಸುವವರಾದರೂ ಒಬ್ಬರೂ ಇಲ್ಲವಲ್ಲರೀ.''

ಮೃತ್ಯುಂಜಯ ನೂರರ ಮೇಲೆ ನೂರು ಪರೀಕ್ಷೆಗಳನ್ನು ಕಳೆದವನು. ಕನ್ನಡ, ಇಂಗ್ಲಿಷ, ತಮಿಳುಗಳ ಜೊತೆಗೆ ಸರಕಾರಿ ಕಛೇರಿಗಳಲ್ಲಿ, ಆಸ್ಪತ್ರೆಗಳಲ್ಲಿ, ರೈಲುನಿಲ್ದಾಣಗಳಲ್ಲಿ ಚಲಾವಣೆಯಲ್ಲಿರುವ ಭಾಷೆಯ ಅರಿವೂ ಇತ್ತು. ನೂರರ ಎರಡು ನೋಟುಗಳನ್ನು ತೆಗೆದು ಅವರಿಗೆ ಕೊಟ್ಟ. ಅವರು ಅದನ್ನು ಜೇಬಿಗೆ ಇಳಿಸುತ್ತ ''ಛೀ, ಛೀ ಇದೆಲ್ಲ ನನಗೆ ಅಭ್ಯಾಸವಿಲ್ಲ. ನೀವೇನೂ ಯೋಚಿಸಬೇಡಿ. ಆಸ್ಪತ್ರೆಯಲ್ಲಿ ಕೆಲವು ಔಷಧಗಳಿಲ್ಲ. ಹೊರಗಿನಿಂದ ತರಿಸಿಯಾದರೂ ಕೊಡಬೇಕು. ಬಿಲ್ಲನ್ನು ಕೊಟ್ಟುಬಿಡಿ ಸಾಕು ಮಂಜಪ್ಪನವರೇ'' ಎಂದರು.

''ಮಂಜಪ್ಪ ಅಲ್ಲ. ಮೃತ್ಯುಂಜಯ'' ಎಂದ ಅವನು.

''ಹಾ. ಅದೇ ಆಗಲಿ. ಅಜ್ಜಿಗೆ ತೀರಾ ಆಯಾಸವಾಗಿದೆ. ಡ್ರಿಪ್ ಕೊಡಬೇಕು. ಆಸ್ಪತ್ರೆಯಲ್ಲಿರುವುದು ಸರಕಾರಿ ಸಪ್ಲೈ. ಚೆನ್ನಾಗಿಲ್ಲ. ಹೊರಗಿನಿಂದ ಎರಡು ಬಾಟಲಿ ಡೆಕ್ಸ್ಟ್ರೋಸ್ ತರಿಸಿಕೊಡಿ. ಮೂಲೆ ಶೆಟ್ಟರ -ಅಂಗಡಿಯಿಂದಲೇ ತರಿಸಿ. ನಿಮ್ಮ ಪೇಷಂಟಿಗೆ ಎಂದರೆ ಅವರು ಸಾಚಾ ಮಾಲನ್ನು ಕೊಡುತ್ತಾರೆ. ನಿಮಗೆ ಗೊತ್ತಿಲ್ಲದಿದ್ದರೆ ಒಂದು ಇನ್ನೂರು ರೂಪಾಯಿ ಕೊಟ್ಟರೆ. ನಾನೇ ತರಿಸುತ್ತೇನೆ ಮಂಜಪ್ಪನವರೇ.''

''ಅಲ್ಲ ಸರ್. ಮೃತ್ಯುಂಜಯ'' ಎಂದ ಅವನು ಹಣ ಕೊಟ್ಟ. ''ಒಂದು ಹೊಸ ಸೂಜಿಯನ್ನು ತರಿಸಿಬಿಡಿ ಡಾಕ್ಟರೇ'' ಎಂದು ಹೇಳಿದ್ದ.

''ಜವಾಬ್ದಾರಿ ನನ್ನದು. ನೀವು ನಿಶ್ಚಿಂತೆಯಾಗಿರಿ ಮಂಜಪ್ಪ ಎಂದರು ಡಾಕ್ಟರು.

''ಮೃತ್ಯುಂಜಯ ಸಾರ್. ಪೇಷಂಟ್ ಯಾರು ಗೊತ್ತಲ್ಲ''

''ಅದೇ. ತಿಳುವಳಿಕೆಯಿಲ್ಲದ, ಐ ಮೀನ್, ಜ್ಞಾನವಿಲ್ಲದ ಆ ಅಜ್ಜಿ. ಅದರ ಭಾರವನ್ನು ನನ್ನ ಮೇಲೆ ಹೊರಿಸಿ ನೀವು ನಿಶ್ಚಿಂತೆಯಿಂದ ಹೋಗಿ'' ಎಂದರು ಅವರು.

ನೀವು ನಾಲ್ಕು ಜನರ ಮೇಲೆ ಹೊರಿಸದಿದ್ದರೆ ಸಾಕು ಎಂದು ಮನಸ್ಸಿನಲ್ಲೇ ಅಂದುಕೊಂಡ ಮೃತ್ಯುಂಜಯ ಮಾವನ ಮನೆಗೆ ಹೋದ.

ಮರಿಯಪ್ಪ ಮತ್ತು ಅವನ ಹೆಂಡತಿ ಮನೆಯಲ್ಲೇ ಇದ್ದರು. ಅಣ್ಣನನ್ನು ನೋಡಿದ ವೇದವಲ್ಲಿ ''ಅಣ್ಣಯ್ಯ, ಅಮ್ಮ, ಅಮ್ಮ,'' ಎಂದು ಅತ್ತಳು. ಅತ್ತಿಗೆಯೂ ಧ್ವನಿ ಸೇರಿಸಿದಳು. ಇವರ ಅಳುವಿನ ದನಿ ಕೇಳಿಸಿಕೊಂಡ ಅಕ್ಕಪಕ್ಕದ ಹೆಂಗಸರು ಒಮ್ಮೊಟ್ಟಾಗಿ ಬಂದು ಸೇರಿದರು. ಸರ್, ಬುಸ್ ಎಂದು ತಮ್ಮ ಕೊಡುಗೆಯನ್ನೂ ಸೇರಿಸಿದರು. ಪಕ್ಕದ ಮನೆಯ ಉದ್ದ ಮೂಗಿನ ವೆಂಕಟಲಕ್ಷ್ಮಮ್ಮ ದಪ್ಪ ಗಂಟಲಿನಲ್ಲಿ ''ಅಜ್ಜಿ ಹೋಗಿಬಿಟ್ಟರಾ? ಅಯ್ಯೋ. ದೇವತೆಯಂತಹ ಹೆಂಗಸು. ಇನ್ನು ಅಂತಹವರು ಸಿಕ್ತಾರಾ?'' ಎಂದು ಗಟ್ಟಿಯಾಗಿ ಅತ್ತಳು. ಮಿಕ್ಕವರು ಹೋ ಎಂದು ಧ್ವನಿಗೂಡಿಸಿದರು.

ಮೃತ್ಯುಂಜಯ ತಲೆ ತಲೆ ಚಚ್ಚಿಕೊಂಡ. ''ಏನೂ ಆಗಿಲ್ಲಮ್ಮ. ಆಸ್ಪತ್ರೆಯಿಂದಲೇ ಬರುತ್ತಿದ್ದೇನೆ. ಡ್ರಿಪ್ಸ್ ಕೊಟ್ಟರೆ ಸುಧಾರಿಸಿಕೊಳ್ಳುತ್ತಾರೆ'' ಅಂದ.

''ಅಯ್ಯೋ ರಾಮ. ಅಜ್ಜಿಗೆ ಏನೂ ಆಗಿಲ್ಲವಾ? ನಾವು ಆಮೇಲೆ ಬರೋಣ ಬನ್ನಿ.'' ಎಂದು ವೆಂಕಟಲಕ್ಷ್ಮಮ್ಮ ಮತ್ತು ಆಕೆಯ ತಂಡ

ನಿಶ್ಶಬ್ದವಾಗಿ ಕರಗಿತು.

ಮರಿಯಪ್ಪ ತೋರಿಕೆಗೆ ತಾಪತ್ರಯವಿರುವವನಂತೆ ನಟಿಸುತ್ತಿದ್ದರೂ ವಾಸ್ತವವಾಗಿ ಅನುಕೂಲಕ್ಕಾಗಿಯೇ ಇದ್ದ. ಆದರೆ ವಿಚಿತ್ರ ಸ್ವಭಾವದ ಮನುಷ್ಯ. ಮೃತ್ಯುಂಜಯ ಅಷ್ಟೆಲ್ಲ ವ್ಯವಸ್ಥೆ ಮಾಡಿದ್ದರೂ ಅವನಿಗೇನೂ ಸಂತೋಷವಾದಂತೆ ತೋರಲಿಲ್ಲ. ಉಪಚಾರಕ್ಕಾದರೂ ತಂಗಿಯನ್ನೂ ಭಾವ ಮೈದುನನನ್ನೂ ಒಂದು ದಿನ ಉಳಿದುಕೊಳ್ಳಿ ಎನ್ನಲಿಲ್ಲ. ವೇದವಲ್ಲಿಯೇ ತಾಯಿಯ ಉಪಚಾರಕ್ಕೆ ಮುಂದಾದಳು. ರಾತ್ರಿ ಅಮ್ಮನ ಹತ್ತಿರ ಆಸ್ಪತ್ರೆಯಲ್ಲಿ ಮಲಗಿಕೊಂಡಳು ಅವಳೇ. ಅತ್ತಿಗೆ 'ಮನೆಯಲ್ಲಿ ಕೆಲಸವಿದೆ' ಎಂದು ತಪ್ಪಿಸಿಕೊಂಡಳು. ಮರಿಯಪ್ಪ ಬೇರೆ ಯಾವುದೋ ಕೆಲಸ ಮೇಲೆ ಓಡಾಡುತ್ತ ಆಸ್ಪತ್ರೆಯತ್ತ ಮುಖವನ್ನೆ ತೋರಿಸಲಿಲ್ಲ. ಔಷಧ, ಅದು ಇದು ಎಂದು ವೇದವಲ್ಲಿಯೇ ಖರ್ಚು ಮಾಡಿದಳು.

ಮೂರು ದಿನ ಕಳೆದ ಮೇಲೆ ಮುದುಕಿಗೆ ಪ್ರಜ್ಞೆ ಮರುಕಳಿಸಿತು.

ಕುಮಕೂರಿಗೆ ಹೋಗುತ್ತೇನೆಂದ ಮುದುಕಿಗೆ ಮಗ ಅನುಮತಿ ನೀಡಲಿಲ್ಲ. ತಂಗಿಯನ್ನು ಇನ್ನೂ ಕೆಲವು ದಿನ ಉಳಿದುಕೊಳ್ಳುವಂತೆಯೂ ಅವನು ಕೇಳಲಿಲ್ಲ. ಹೀಗಾಗಿ ಒಲ್ಲದ ಮನಸ್ಸಿನಿಂದ ವೇದವಲ್ಲಿ ತುಮಕೂರಿಗೆ ಹಿಂದಿರುಗಿದಳು. ಇವಳು ಮನೆಯ ಬಳಿ ಆಟೋದಿಂದ ಇಳಿದು ಒಳಗಿನಿಂದ ದುಡ್ಡು ತಂದು ಕೊಟ್ಟಾಗ ಮೃತ್ಯುಂಜಯ ತುಟಿಯಲ್ಲಿಯೇ ನಕ್ಕ. "ಏಕೇ? ಸಾವಿರ ಕೊಟ್ಟು ಬಂದಿದ್ದೇನಲ್ಲ. ಎಲ್ಲ ಖರ್ಚಾಯಿತಾ? ನಿಮ್ಮಣ್ಣ ಟಿಕೇಟನ್ನೂ ತೆಗೆಸಿಕೊಡಲಿಲ್ಲವೇನು?" ಎಂದು ಅವಳನ್ನು ರೇಗಿಸಿದ. ಅವಳು ಉದಾಸೀನದಿಂದ "ಅವನ ಮುಂಡಾ ಮೋಚಿತು. ಕಾಸಿಗೆ ಕಾಸನ್ನು ಸೇರಿಸುವುದೊಂದು ಬಿಟ್ಟರೆ ಅವನಿಗೆ ಬೇರೆ ಏನೂ ಗೊತ್ತಿಲ್ಲ. ಅಮ್ಮನ ಖಾಯಿಲೆಯ ನೆಪ ಹೇಳಿ ಆಫೀಸಿಗೆ ರಜ ಹಾಕಿದ್ದನಂತೆ. ಅದೇನು ಕಲಸವೋ? ಆಸ್ಪತ್ರೆಯ ಬಳಿಯೂ ಬರಲಿಲ್ಲ.



"ಎಂಥ ಮಾರಿ ಕಾಲ ಬಂದು ಬಿಟ್ತು... ಮೊದಲು ನಮಗೆ ಬರೋ ದಕ್ಷಿಣೆಯಿಂದಲೇ ಜೀವನ ಸಾಗಿಸುತ್ತಿದ್ವಿ. ಈಗ ದೇವರ ಕಾಣಿಕೆ ಡಬ್ಬಾ ನಮ್ಮ ದಕ್ಷಿಣೆ ಕೂಡಿಸಿದರೂ ಜೀವನ ಸಾಗಿಸೋದು ತುಂಬಾ ಕಷ್ಟವಾಗಿದೆ"

ಮನೆಯಲ್ಲೂ ಇರುತ್ತಿರಲಿಲ್ಲ. ಯಾವಾಗಲೂ ಅಂಗಡಿ ಜೀಡಿಯಾಯಿತು. ಅವನಾಯಿತು. ಸಾಮಾನು ತರುವುದು, ಉಗ್ರಾಣಕ್ಕೆ ತುಂಬಿಸುವುದು. ಮನೆಯಲ್ಲಿರುವ ಇಬ್ಬರು ಮೂವರಿಗೆ ಅದೆಷ್ಟು ಸಾಮಾನು ಬೇಕಾಗುತ್ತೆ ತಿಂಗಳಿಗೆ? ತಾಯಿ ಎನ್ನುವ ಪ್ರೀತಿಯಾದರೂ ಬೇಡವೆ? ಅಮ್ಮ ಗಂಡು ಮಗನನ್ನು ಹೆತ್ತಿದ್ದಕ್ಕೂ ಸಾರ್ಥಕವಾಯಿತು" ಎಂದಳು.

"ನಿಮ್ಮಣ್ಣ ಲೆಕ್ಕಾಚಾರಸ್ಥ ಕಣೆ. ಮೂರು ಕಾಸು ಉಳಿಯುತ್ತೆ ಅಂದರೆ ಮೂವತ್ತು ಮೈಲಿ ಬೇಕಾದರೂ ನಡೆದಾನು. ಈ ತಿಂಗಳು ಅವನಿಗೆ ಹೆಚ್ಚಿನ ಖರ್ಚು ಬಂದಿದೆ. ತಾಯಿ. ಮನೆಯಲ್ಲಿ ಉಳಿದಿದ್ದಾಳೆ. ಜತೆಗೆ ಆಸ್ಪತ್ರೆ ಖರ್ಚು. ವೆಚ್ಚದಲ್ಲಿ ಉಳಿಸುವ ಮೂಲಕ ಸರಿದೂಗಿಸಲು ಪ್ರಯತ್ನಿಸುವುದರಲ್ಲಿ ತಪ್ಪೇನು? ಈಗ ಸುಗ್ಗಿ ಕಾಲ. ಸ್ವಲ್ಪ ಹೆಚ್ಚು ಕಾಳುಕಡಿ ಶೇಖರಿಸಿದರೆ ಮುಂದೆ ಉಳಿತಾಯವಾಗಲ್ಲವೇ?"

ಇತ್ತ ಮುದುಕಿ ಮನೆಯಲ್ಲಿ ಹೊತ್ತು ಹೋಗದೆ ಒದ್ದಾಡುತ್ತಿತ್ತು. ಸೊಸೆ ಅಡಿಗೆ ಮನೆಗೆ ಸೇರಿಸುತ್ತಿರಲಿಲ್ಲ. ಗ್ಯಾಸು ಲೀಕಾ

ದೀತು, ಹಾಗೆ ಹೀಗೆ ಎಂದು ಹೆದರಿಸುವಳು. ಬಚ್ಚಲು ಮನೆಯಲ್ಲಿ ಕೂಡ ಮುದುಕಿಗೆ ಸ್ವಾತಂತ್ರ್ಯವಿರಲಿಲ್ಲ. ಗೀಸರ್ ಕೆಟ್ಟುಹೋಗಬಹುದು ಶಾಕ್ ಹೊಡೆಯಬಹುದು ಎಂದು ಮಗನೇ ಎಚ್ಚರಿಕೆ ನೀಡುತ್ತಿದ್ದ. ಮಗಳ ಮನೆಯಲ್ಲಿ ಹೀಗಿರಲಿಲ್ಲ. ವೇದವಲ್ಲಿ ಒಳ್ಳೆಯವಳು. ತಾಯಿಗೆ ಬೇಸರವಾಗುವ ರೀತಿಯಲ್ಲಿ ಅವಳೆಂದೂ ನಡೆದುಕೊಳ್ಳುವವಳಲ್ಲ. ಮುದುಕಿಗೆ ದೇಹ ಇಲ್ಲಿ, ಜೀವ ಅಲ್ಲಿ ಎಂಬಂತಾಯಿತು.

ಮತ್ತೂ ಬೇಸರದ ಸಂಗತಿಯೆಂದರೆ ಮಗ, ಸೊಸೆ ಎಲ್ಲವನ್ನೂ ಮುದುಕಿಯಿಂದ ಗುಟ್ಟಾಗಿಡುತ್ತಿದ್ದುದು. ಯಾವ ಸಂಗತಿಯನ್ನು ಅವರು ಮನಬಿಚ್ಚಿ ಹೇಳುತ್ತಿರಲಿಲ್ಲ. ಹೊರಗೆ ಹೋಗುವಾಗ ಅದೊಂದನ್ನೆ ವರಾಂಡದಲ್ಲಿ ಬಿಟ್ಟು ಕೋಣೆಗಳಿಗೆ ಬೀಗ ಹಾಕಿಕೊಂಡು ಹೋಗುತ್ತಿದ್ದರು. ಇದರಿಂದ ಮುದುಕಿಗೆ ಬಹಳ ಅಸಮಾಧಾನವಾಗುತ್ತಿತ್ತು. "ಏನೋ, ನನ್ನ ಮೇಲೆ ನಿಮಗೆ ಅಷ್ಟು ನಂಬಿಕೆಯಿಲ್ಲವಾ? ಸಾಮಾನುಗಳನ್ನು ತೆಗೆದುಕೊಂಡು ನಾನು ಎಲ್ಲಿಗಾದರೂ ಓಡಿಹೋಗುತ್ತೇನಾ?" ಎಂದು ಮಗನನ್ನೇ ನೇರವಾಗಿ ಕೇಳಿತು. ಮಗ ಬೇಸರಪಡಿಸಿಕೊಳ್ಳಲಿಲ್ಲ. ಸಮಾಧಾನ ಚಿತ್ತದಿಂದಲೇ "ನಿನಗೆ ಗೊತ್ತಿಲ್ಲಮ್ಮ, ಇದು [illegible]. ಮೋಸ ಮಾಡುವವರು ಬಹಳ ಜನ. ನಿನಗೆ ಗೊತ್ತಾಗಲ್ಲ. ನಿನ್ನ ಪಾಡಿಗೆ ನೀನಿರು." ಎಂದು ಬಾಯಿ ಮುಚ್ಚಿಸಿದ. ಮುದುಕಿಗೆ ಅವನ ಮಾತಿನಿಂದ ತೃಪ್ತಿಯಾಗಲಿಲ್ಲ. "ಗೊತ್ತಾಗುವುದಿಲ್ಲವಂತೆ. ಗೊತ್ತಾಗುವುದಿಲ್ಲ ಏನೂ ಗೊತ್ತಾಗಿಲ್ಲದಿದ್ದರೆ ಇವನು ಹೇಗೆ ಹುಟ್ಟುತ್ತಿದ್ದ?" ಎಂದು ಬೊಚ್ಚುಬಾಯಿ ಬಿಟ್ಟುಕೊಂಡು ನಕ್ಕಮೇಲೆ ಹಲ್ಲುಸೆಟ್ಟನ್ನು ಇಟ್ಟುಕೊಂಡಿತು.

ಎಚ್ಚರಿಕೆ ತೆಗೆದುಕೊಂಡಷ್ಟೂ ಎಡವುದು ಹೆಚ್ಚು. ಮಗ ಗೋಪ್ಯತೆ ಮಾಡಿದಷ್ಟೂ ಮುದುಕಿಯ ಕುತೂಹಲ ಹೆಚ್ಚಿತು. ತಾನು ಮಗಳ ಮನೆಗೆ ಹೋದರೆ ತನ್ನ ಪಾಲಿನ ಊಟ ಉಳಿ

ಯುತ್ತೆ ಎನ್ನುತ್ತಿದ್ದವನು ದಿಢೀರನೆ ಎಲ್ಲೂ ಹೋಗಬೇಡ ಎನ್ನಲೂ ಏನು ಕಾರಣ ಎಂದು ಮುದುಕಿ ಚಿಂತಿಸಿತು. ದೀರ್ಘವಾಗಿ ಯೋಚಿಸಿದ ಮೇಲೆ ಕಾರಣ ಹೊಳೆಯಿತು. 'ಎಲಾ ತಾಯಿ ಗಂಡ' ಎಂಬ ಉದ್ಗಾರ ಅದರ ಬಾಯಿಂದ ಹೊರಬಿತ್ತು. ಪರಸ್ಥಳಕ್ಕೆ ಹೋದಾಗ ತಾನೆಲ್ಲಾದರೂ ಗೊಟಕ್ ಗಿಟಕ್ ಅಂದರೆ ಅಂತ್ಯಸಂಸ್ಕಾರಕ್ಕೆ ಖರ್ಚು ಹೆಚ್ಚು. ಅದಕ್ಕೆ ತನ್ನನ್ನು ಬೇರೆ ಊರಿಗೆ ಕಳಿಸಲು ಮಗ ಒಪ್ಪುತ್ತಿಲ್ಲ. ಎಂಬ ಆಲೋಚನೆಯಿಂದ ಒಳಗೊಳಗೇ ಬೆವೆತಿತು ಮುದುಕಿ.

ಅಷ್ಟಕ್ಕೇ ಮುಗಿಯಲಿಲ್ಲ. ಒಂದು ದಿನ ಮಧ್ಯಾಹ್ನ ಸೊಸೆ ಮಾಮೂಲಿನಂತೆ ಎಲ್ಲ ಬಾಗಿಲುಗಳಿಗೂ ಬೀಗ ಜಡಿದು ಮುದುಕಿಯೊಂದನ್ನೇ ಮನೆಯಲ್ಲಿ ಬಿಟ್ಟು ಮ್ಯಾಟ್ನಿ ಸಿನಿಮಾಕ್ಕೆ ಹೋದಳು. ಗಡಿಬಿಡಿಯಲ್ಲಿ ಉಗ್ರಾಣದ ಬೀಗ ಹಾಕಲು ಮರೆತಿದ್ದಳು. ಮುದುಕಿ ಇದನ್ನು ಗಮನಿಸಿತು. ಆದರೆ ಬಾಯಿ ಬಿಡಲಿಲ್ಲ. ತಾನು ಉಗ್ರಾಣದ ಒಳಗೆ ಹೋಗದಂತೆ ಮಗ, ಸೊಸೆ ಸಾಕಷ್ಟು ಎಚ್ಚರಿಕೆ ವಹಿಸಿದ್ದರು. ಏನು ಬಚ್ಚಿಟ್ಟಿದ್ದಾರೋ ನೋಡಬೇಕೆಂಬ ಕುತೂಹಲದಿಂದ ಮುದುಕಿ ಉಗ್ರಾಣದ ಬಾಗಿಲನ್ನು ತಳ್ಳಿಕೊಂಡು ಒಳಗೆ ಪ್ರವೇಶಿಸಿತು.

ಅಲ್ಲಿ ಕಂಡ ದೃಶ್ಯದಿಂದ ಅದು ಆ... ಎಂದು ಬಾಯಿ ತೆರೆದು ಹಾಗೆಯೇ ನಿಂತು ಬಿಟ್ಟಿತು. ಗೋಡೆಯ ಪಕ್ಕ ಸಾಲುಸಾಲಾಗಿ ಒಂದರ ಮೇಲೊಂದರಂತೆ ಪೇರಿಸಿಟ್ಟಿದ್ದ ಸೌದೆಯ ಕಂತೆಗಳು. ಅಕ್ಕಿಯ ಮೂಟೆಗಳು, ಬೇಳೆ, ಕಾಳು ಮುಂತಾದ ದವಸಧಾನ್ಯಗಳು. ತಾಮ್ರದ ಚೆಂಬು, ಕೊಡ, ಹಾದರಕ್ಷೆ ಇಂತಹ ಪಾತ್ರೆಪಡಗಗಳು.

ಅವೆಲ್ಲ ತಾಯಿಯ ಶವಸಂಸ್ಕಾರಕ್ಕಾಗಿ ಮಗ ಮುಂದಾಲೋಚನೆಯಿಂದ ಮಾಡಿಕೊಂಡಿದ್ದ ಏರ್ಪಾಟೆಂದು ತಿಳಿಯಲು ಮುದುಕಿಗೆ ತಡವಾಗಲಿಲ್ಲ. ●

# ನೀವು ಒಬ್ಬರೇ ಇದ್ದಾಗ — —ಏನು ಮಾಡುತ್ತೀರಿ ?

ಎಸ್. ರವಿಕುಮಾರ ಮಾಗಳ

ಮ್ಯಾಕ್ಸಿಂಗಾರ್ಕಿ ಸಣ್ಣ ಕತೆಗಳ ಮೂಲಕ ಹೆಸರು ಮಾಡಿದ ಮಹಾನ್ ವ್ಯಕ್ತಿ. ಪೂರ್ವಾಗ್ರಹ ಪೀಡಿತರಾಗಿ ಅವನ ಕಥೆಗಳನ್ನು ಓದಿದಾಗಲೂ, ಅವರೊಬ್ಬ ಮಹಾನ್ ಕಥೆಗಾರರಾಗಿ ನಿಲ್ಲುತ್ತಾರೆ.

ಅವರ ಲೇಖನದ ಹಾಗೂ ಟಿಪ್ಪಣೆಗಳ ಸಂಗ್ರಹಗಳನ್ನು ಬಹಳ ಜನ ಓದಿರಲಾರರು. ಅಂಥಹ ಒಂದು ಲೇಖನಗಳ ಸಂಗ್ರಹವೇ 'ಒಬ್ಬರೇ ಇದ್ದಾಗ ಮನುಷ್ಯನ ವರ್ತನೆ'.

ಇದು ನಮಗೆಲ್ಲಾ ಗೊತ್ತಿರುವುದನ್ನೇ ಹೇಳುತ್ತದೆ. ಆದರೆ ಅದನ್ನು ಬಹಳ ಜನ ಗಮನಿಸಿರುವುದಿಲ್ಲ!

ಯಾರೂ ಇಲ್ಲದಾಗ, ಮನೆಯ ಬಾಗಿಲ ಅಗಳಿ ಹಾಕಿರುವಾಗ ಯಾರೊಬ್ಬರೂ ಹಣಕಿ ನೋಡುವ ಸಂಭವವಿಲ್ಲದಾಗ... ಮನುಷ್ಯ ಹೇಗೆ ವರ್ತಿಸುತ್ತಾನೆ?

ಒಮ್ಮೆ ಟಾಲ್‌ಸ್ಟಾಯ್ ಸುತ್ತ ಯಾರೂ ಇಲ್ಲದ್ದು ಖಾತ್ರಿ ಮಾಡಿಕೊಂಡು (ಅವಿತು ಕುಳಿತಿದ್ದ ಕುತೂಹಲದವನನ್ನು ಆತ ಗಮನಿಸಿಲಿಲ್ಲ.) ಹಲ್ಲಿಯನ್ನು ಕೇಳಿದನಂತೆ 'ಆರೋಗ್ಯವೇ? ಹೇಗಿದ್ದೀಯಾ?''

ಹಲ್ಲಿ ಉತ್ತರಿಸಲಿಲ್ಲ. ಬಹಳ ಹೊತ್ತು ಉತ್ತರಕ್ಕಾಗಿ ಕಾದ ಟಾಲ್‌ಸ್ಟಾಯ್ ಹೇಳಿದನಂತೆ, ''ನನ್ನ ಬಗ್ಗೆ ಹೇಳುವುದಾದರೆ, ನಾನು ಸುಖವಾಗಿಲ್ಲ.''

ಇನ್ನೊಬ್ಬ ಪ್ರಸಿದ್ಧ ರಷ್ಯನ್ ಸಾಹಿತಿ ಆ್ಯಂಟೆನ್ ಚೆಕಾವ್ ಒಬ್ಬಂಟಿಯಾಗಿ ತನ್ನ ತೋಟದಲ್ಲಿ ಕೂತಿದ್ದಾಗ, ತನ್ನ ಹ್ಯಾಟ್‌ನಿಂದ ಸೂರ್ಯನ ಕಿರಣಗಳನ್ನು ಹಿಡಿಯಲು ಪ್ರಯತ್ನಿಸಿದನಂತೆ! ಆತ ಎಷ್ಟೇ ಪ್ರಯತ್ನಿಸಿದರೂ ಸೂರ್ಯನ ಕಿರಣ ಹ್ಯಾಟ್‌ನಲ್ಲಿ ಸಿಕ್ಕಿಕೊಳ್ಳಲಿಲ್ಲ. ಕೊನೆಗೆ ಬೆವೆತು ಸುಸ್ತಾಗಿ ಕೂತ.

ಪಾದ್ರಿಯೊಬ್ಬ ಏಕಾಂಗಿಯಾಗಿದ್ದಾಗ ತನ್ನ ಬೂಟನ್ನು ಎದುರಿಗಿಟ್ಟುಕೊಂಡು ''ಹೋಗು!

ಎಂದನಂತೆ. ಅವು ಹೋಗಲಿಲ್ಲ. ಚಪ್ಪಾಳೆ ತಟ್ಟಿದ ಪಾದ್ರಿ, ''ಹ್ಞಾ, ತಿಳೀತಾ? ನಾನು ಇಲ್ಲದೆ ನೀನು ನಡೆಯೋಕೆ ಆಗಲ್ಲ!'' ಅಂದನಂತೆ. ಅಷ್ಟರಲ್ಲಿ ಅಲ್ಲಿಗೆ ಪ್ರವೇಶಿಸಿದ ಒಬ್ಬ, ಪಾದ್ರಿಯ ವರ್ತನೆಯಿಂದ ಚಕಿತನಾಗಿ ನಿಂತು, ''ಏನು ಫಾದರ್?'' ಅಂದ. ಪಾದ್ರಿ ಬೆಚ್ಚಿ, ''ಈಗ ತುಂಬಾ ಕೆಟ್ಟ ಶೂ ಮಾಡ್ತಾರೆ ಮಾರಾಯ ಎಂದು ಬೇರೆ ವಿಷಯ ಮಾತಾಡತೊಡಗಿದ.

ಇದೆಲ್ಲಾ ನಿಮಗೆ ವಿಚಿತ್ರವಾಗಿ ಕಾಣುತ್ತದೆಯೇ? ನಮ್ಮಲ್ಲೂ ಇಂತಹ ಅನೇಕ ಉದಾಹರಣೆಗಳು ಸಿಗುತ್ತವೆ.

ಗಾಂಧಿ ಒಬ್ಬರೇ ಇದ್ದಾಗ, ತಮ್ಮ ಮೋಹಕ ನಗೆ ಅಭ್ಯಾಸ ಮಾಡುತ್ತಿದ್ದರು. ಎದುರಾಳಿಗಳಿಗೆ ಬೆರಳು ತೋರಿಸಿ ಉತ್ತರಿಸಿದಂತೆ, ಗಂಭೀರವಾದರೂ ಎಗ್ಗಿಲ್ಲದ ನಡಿಗೆ. ನತು, ನುಡಿಕಟ್ಟು, ಇವುಗಳ ತಯಾರಿ ನಡೆಸುತ್ತಿದ್ದರು.

ಇವೆಲ್ಲವುಗಳೂ ಬಹುಪಾಲು ನಿಜ. ಮನುಷ್ಯ ಒಬ್ಬನೇ ಇದ್ದಾಗ ತನ್ನ ಒಳಗಿನ ಜೀವಕ್ಕೆ, ಅನುಭವಕ್ಕ, ಕಾತರಗಳಿಗೆ ಹತ್ತಿರ ಇರುತ್ತಾನೆ. ಹೊರ ಜಗತ್ತಿನ ಸವಾಲುಗಳಿಗೆ,

ಆತ ತನ್ನ ಆಳದಿಂದ ಕಂಡುಕೊಳ್ಳುವ ಉತ್ತರ ಪರಿಹಾರ ಈ ಏಕಾಂಗಿತನದಲ್ಲಿ ಸಾಧ್ಯವಾಗುತ್ತದೆ. ಕನ್ನಡಿಯ ಎದುರು ನಿಂತು ಮಾತನಾಡುವವರು, ವಿಫಲಗೊಂಡ ಭಾಷಣವನ್ನು ಏಕಾಂತದಲ್ಲಿ ಮಾಡಿ ಸರಿ ಮಾಡಿಕೊಳ್ಳುವವರು, ತಮ್ಮ ಬಿಂಬಕ್ಕೆ ಕಣ್ಣು ಮಿಟುಕಿಸುವವರು, ಹೇಳಿದ ಸುಳ್ಳನ್ನು ಸಮರ್ಥಿಸಿಕೊಳ್ಳುವವರು ಈ ಪೈಕಿ.

ಸೇತುವೆಯ ಮೇಲೆ ಒಬ್ಬಂಟಿಯಾಗಿ ನಿಂತ ಭಾರ ಮನಸ್ಸಿನ ಹುಡುಗಿ. ಮ್ಯಾಕ್ಲಿಂಗಾರ್ಕ ಮರೆಯಲ್ಲಿದ್ದಾನೆ. ಚಂದ್ರ ಆಕಾಶದಲ್ಲಿ ಕೆಂಪಗಿದ್ದಾನೆ. ನಿತ್ಯಕ್ಕಿಂತ ಹೆಚ್ಚು ಕುಡಿದಂತೆ ಇದ್ದಾನೆ. ಸೇತುವೆ ಕೆಳಗೆ ಹರಿಯುತ್ತಿದ್ದ ನೀರಿನಲ್ಲಿ ಚಂದ್ರನ ಬಿಂಬ ನೋಡಿದ ಹುಡುಗಿ ತಲೆಯೆತ್ತಿ ಆಕಾಶದಲ್ಲಿನ ಚಂದ್ರನನ್ನು ನೋಡುತ್ತಾಳೆ. - ಮ್ಲಾನವದನದ, ಆತ್ಮಹತ್ಯೆಗೆ ತಯಾರಾದಂಥ ಹುಡುಗಿ ಇದ್ದಕ್ಕಿದ್ದಂತೆ ಅಮಲೇರಿದ ಚಂದ್ರನಿಗೆ ನಾಲಿಗೆ ಹಿರಿದು ಅಣಕಿಸುತ್ತಾಳೆ. ರೇಗಿಸಲು ಯತ್ನಿಸುತ್ತಾಳೆ.

ಒಬ್ಬಂಟಿಯಾಗಿದ್ದಾಗ ಮನುಷ್ಯರು ಹುಚ್ಚರಂತೆ ವರ್ತಿಸುತ್ತಾರೆ, ಎನ್ನುತ್ತಾರೆ ಕೆಲವರು. ಅಲ್ಲ ನಿಜಕ್ಕೂ ಒಬ್ಬಂಟಿಯಂತೆ ವರ್ತಿಸುತ್ತಾರೆ. ನಟ ಮತ್ತು ಪ್ರೇಕ್ಷಕ, ಸಾಹಿತಿ ಮತ್ತು ವಿಮರ್ಶಕ ಎಲ್ಲಾ ಆಗುವ ಮನುಷ್ಯ ಒಬ್ಬಂಟಿ ಜಗತ್ತಿನ ಪ್ರಾಣಿಯಾಗುತ್ತಾನೆ.

ನೀವೂ ಒಬ್ಬಂಟಿಯಾಗಿದ್ದಾಗ, ನಿಮ್ಮ ವರ್ತನೆ ಬೇರೆಯಿರುತ್ತದೆ. ಪರಿಶೀಲಿಸಿ ನೋಡಿರಿ. ●

---

ಪ್ರೇಮ ಮತ್ತು ಡಾ. [illegible] ಅವರ ಏಕಮಾತ್ರ ಪುತ್ರಿ ಪ್ರತಿಭಾ. ಹುಟ್ಟಿದ್ದು, ಬೆಳೆದಿದ್ದು ಲಂಡನ್ನಿನಲ್ಲಿ; ಅವಳಿಗೀಗ 15 ವರ್ಷ. ಹೀಗಾಗಿ ಅವಳಿಗೆ ಕನ್ನಡ ಅಷ್ಟು ಸರಿಯಾಗಿ ಬಾರದು. ಅದರೂ ಮಾತೃಭಾಷೆಯನ್ನೇ ಚೆನ್ನಾಗಿ ಕಲಿಯಬೇಕೆಂಬ ಆಸೆ ಆಕೆಗೆ. ಅವರೆಲ್ಲ ಇಲ್ಲಿಗೆ ಬಂದಾಗ ಅಥವಾ ನೆಂಟರು ಅವರ ಮನೆಗೆ ಹೋದಾಗ ಅವರುಗಳು ಕನ್ನಡದಲ್ಲಿ ಮಾತನಾಡುತ್ತಿರುವುದನ್ನು ಕೇಳಿ ತಾನೂ ಕಂಡುಕೊಳ್ಳುವ ಚಪಲ ತೀರಿಸಿಕೊಳ್ಳುತ್ತಿದ್ದಳು.

ನಮ್ಮ ರೀತಿಯಲ್ಲಿ ಕಿತ್ತಳೆ ಹಣ್ಣನ್ನು ತಿನ್ನಬೇಕಾದರೆ ಸಿಪ್ಪೆ ಸುಲಿಯಬೇಕು ಎಂದು ತಿಳಿದುಕೊಂಡಿದ್ದಳು. ಒಮ್ಮೆ ಬೆಂಗಳೂರಿಗೆ ಬಂದಿದ್ದಾಗ ಆಕೆಯ ಸೋದರಮಾವ ರಾಜು ತನ್ನ ಗೆಳೆಯ [illegible]ನನ್ನು ಕರೆದುಕೊಂಡು ಇವರ ಮನೆಗೆ ಬಂದಿದ್ದ. ಅಕ್ಕ ಪ್ರೀತಿಯಿಂದ ಬರಮಾಡಿಕೊಂಡು, ಅವರುಗಳಿಗೆ ತಿನ್ನಲು ಬಿಸ್ಕತ್, ಸೇಬು ಕೊಟ್ಟು ಕಾಫಿ ಮಾಡಲು ಅಡಿಗೆ ಮನೆಗೆ ಹೋದಳು. ಪ್ರತಿಭಾ ಅವರ ಹತ್ತಿರ ಅರ್ಧಂಬರ್ಧ ಕನ್ನಡದಲ್ಲಿ ಮಾತನಾಡುತ್ತಿದ್ದಳು.

ಇದ್ದಕ್ಕಿದ್ದಂತೆಯೆ ಆಕೆ "ಮಮ್ಮಿ, ಮಮ್ಮಿ" ಎಂದು ಗಾಬರಿಯಿಂದ ಕೂಗಿದ್ದಳು. ಆಕೆಯ ತಾಯಿಗೆ ಏನಾಯಿತೋ ಎನ್ನುವ ಆತಂಕ. "ಮಮ್ಮೀ, ರಾಜು ಮಾಮ ಆ ಹಣ್ಣನ್ನು ಕಚ್ಚುತ್ತಾ ಇದ್ದಾನೆ." ಎಂಬುದನ್ನು ಕೇಳಿ ಅವಳು ಎಲ್ಲೋ ರಾಜು ತನ್ನ ಸ್ನೇಹಿತನನ್ನು ಕಳ್ಳತನದಲ್ಲಿ [illegible] ಪ್ರತಿಭಾ ನೋಡಿಬಿಟ್ಟಿರಬೇಕು ಎಂದುಕೊಂಡಳು. "ಅಲ್ಲಮ್ಮಾ, ಜರ್ಮನ್ [illegible] ಇದ್ದಾನೆ." ಎಂದು [illegible] ಕಂಪ್ಲೈಂಟ್ ಪೂರ್ತಿ ಮಾಡಿದಳು ನಮ್ಮ ಕನ್ನಡ [illegible] ಕಾಫಿ ತೆಗೆದುಕೊಂಡು ಬಂದು ನೋಡಿದಾಗ ಕಂಡದ್ದು ರಾಜು ಸೇಬನ್ನು ಹಾಗೇ ಕಚ್ಚಿಕೊಂಡು ತಿನ್ನುತ್ತಾ ಇದ್ದದ್ದು. [illegible] ತೆಗೆದಿರಲಿಲ್ಲ ಎಂಬುದೇ ಪ್ರತಿಭಾಗೆ ತಪ್ಪಾಗಿ [illegible] 'ಹಣ್ಣು' ಹೋಗಿ '[illegible]' ಆಗಿತ್ತು. ಇದು ಅರಿವಾದಾಗ ಎಲ್ಲರೂ ಹೊಟ್ಟೆ ಹಿಡಿಯುವಷ್ಟು ನಕ್ಕಿದ್ದೇ ನಕ್ಕಿದ್ದು.

ಎಸ್. ಪಿ. ಶಿವನಂಜಪ್ಪ

# —ಶ್ರೇಷ್ಠ ಆಯುರ್ವೇದಾಚಾರ್ಯ—

# ಜೀವಕ

● ಡಾ. ಕರವೀರಪ್ರಭು ಕ್ಯಾಲಕೊಂಡ

---

**ಇಂದಿನ ವೈದ್ಯಲೋಕದ ಅತಿ ಸಹಜ ಸಾಧನೆಗಳು ಒಂದು ಕಾಲಕ್ಕೆ ಮಹಾನ್ ಅಚ್ಚರಿಗಳಾಗಿದ್ದವು! ಅವೆಲ್ಲವುಗಳ ಹಿಂದೆ ಆತನಿದ್ದ, ಆಯುರ್ವೇದಾಚಾರ್ಯ ಜೀವಕ.**

---

ಹೊಟ್ಟೆನೋವಿನಿಂದ ಹೊರಳಾಡುತ್ತಿದ್ದವನನ್ನು ಹಿಡಿತಂದು ಕಂಬಕ್ಕೆ ಕಟ್ಟಿಹಾಕಿ, ಹರಿತವಾದ ಆಯುಧಗಳಿಂದ ಹೊಟ್ಟೆ ಹರಿದು, ಕರಳು ಕೊಯ್ದು, ಔಷಧಿ ಹಚ್ಚಿ ಪುನಃ ಹೊಲಿಯಲಾಯಿತು. ಕೆಲವೇ ದಿನಗಳಲ್ಲಿ ರೋಗಿ ಹಸನ್ಮುಖಿಯಾದ. ಹೊಟ್ಟೆನೋವಿನಿಂದ ಮುಕ್ತನಾದ.....

ರಾಜಮಾತೆ ಕಿಬ್ಬೊಟ್ಟೆ ನೋವಿನಿಂದ ತತ್ತರಿಸುತ್ತಿದ್ದಳು. ರಾಜ ವೈದ್ಯರು ಔಷಧಿ ನೀಡಿದರೂ ಕೊಂಚವೂ ಕಡಿಮೆಯಾಗಲಿಲ್ಲ. ಕಂಡಕಂಡ ಕಲ್ಲುದೇವರಿಗೆ ಕಾಯಿ ಕರ್ಪೂರ ಸಲ್ಲಿಸಿ ಹರಕೆ ಹೊತ್ತಳು. ಮಂತ್ರಗಾರರನ್ನು ಕರೆಸಿ ಯಂತ್ರ ಕಟ್ಟಿಸಿಕೊಂಡಳು. ಹಣದ ಹೊಳೆಯನ್ನೇ ಹರಿಸಿದಳು. ಗರ್ಭಕೋಶದಲ್ಲಿ ಗಡ್ಡೆ ಬೆಳೆದಿದೆ. ಅದಕ್ಕೆ ಮದ್ದಿಲ್ಲ. ಸಾವೇ ಗತಿಯೆಂದು ವೈದ್ಯರು ಸಾರಿದ್ದರು. ಬದುಕಬೇಕೆನ್ನುವ ಭೂತ ರಾಜಮಾತೆಗೆ ಬಡಿದಿತ್ತು. ಕೊನೆಗೆ ವೈದ್ಯರೊಬ್ಬರು ಗರ್ಭಕೋಶವನ್ನು ಬಿಚ್ಚಿ, ಶಸ್ತ್ರಚಿಕಿತ್ಸೆ ಮಾಡಿ, ಗಂಟುಗಳನ್ನು ಹೊರಗೆ ತೆಗೆದರು. ಔಷಧೋಪಚಾರ ಮಾಡಿದರು. ಕೆಲದಿನಗಳ ನಂತರ ಕಿಬ್ಬೊಟ್ಟೆಯ ನೋವು ಮಂಗಮಾಯವಾಯಿತು.....

ಈ ಘಟನೆಗಳು ಇಂದಿನ ಅತ್ಯಾಧುನಿಕ ಯುಗದಲ್ಲಿ ಅಚ್ಚರಿಯ ಕಿಚ್ಚನ್ನು ಹುಟ್ಟಿಸಲಿಕ್ಕಿಲ್ಲ. ಆದರೆ ಅರಿವಳಿಕೆಯ ಅರಿವು, ಪರಿವು ಇಲ್ಲದ ಸುಮಾರು ಎರಡೂವರೆ ಸಾವಿರ ವರ್ಷಗಳ ಹಿಂದೆ ಜರುಗಿದ ಘಟನೆಗಳು ಎಂಬುದು ಅರಿವಾದಾಗ ಎಲ್ಲರ ಹುಬ್ಬುಗಳು ಹೆದೆಯೇರುವುದು ಸಹಜ! ಇವು ಭಾರತದ ಶ್ರೇಷ್ಠ ಆಯುರ್ವೇದಾಚಾರ್ಯ ಶಸ್ತ್ರಚಿಕಿತ್ಸಕ 'ಜೀವಕ' ನಡೆಸಿದ ನೂರಾರು

ಪ್ರಯೋಗಗಳಲ್ಲಿನ ವಿರಡು ನಿದರ್ಶನಗಳಷ್ಟೇ.....

**ಜನನ ಮತ್ತು ಬಾಲ್ಯ:**

ಮಹಾ ವೈದ್ಯ ಜೀವಕ ಕ್ರಿಸ್ತ ಪೂರ್ವ ಐದನೆ ಶತಮಾನದಲ್ಲಿ ಮಗಧದಲ್ಲಿ ಬಿಂಬಿಸಾರ ಆಶ್ರಿತನಾಗ ರಾಜಗೃಹದ ವಾರಾಂಗನೆಯ ಮಗನಾಗಿ ಜನಿಸಿದ. ಹೆತ್ತ ತಾಯಿಗೆ ಕುತ್ತಾಗಿ ಹುಟ್ಟಿದ ಮಗು ಬೀದಿಪಾಲಾಯಿತು. ಬೀದಿಯಲ್ಲಿ ಬಿದ್ದು, ಹಸಿವಿನಿಂದ ಹಲಬುತ್ತಿದ್ದ ಹಸುಗೂಸನ್ನು ಹೊತ್ತುಕೊಂಡು ರಾಜಭಟರು ಅರಮನೆಗೆ ಬಂದರು. ಅರಸರು ಮಲಮಲ ಮರುಗಿದರು. ಸಾಕಿ ಸಲುಹಲು ನಿರ್ಧರಿಸಿದರು. ಜೀವಕ ಎಂದು ನಾಮಕರಣ ಮಾಡಿದರು. ಹುಡುಗ ಹುಣ್ಣಿಮೆಯ ಚಂದ್ರನಂತೆ ಬೆಳೆದ. ಎಲ್ಲರ ಪ್ರೀತಿಗೆ ಪಾತ್ರನಾದ. ಇದನ್ನು ಕಂಡು ಸಹಿಸದ ಕೆಲವರು ಹೊಟ್ಟೆಕಿಚ್ಚುಪಟ್ಟರು. ಚುಚ್ಚಿ ಚುಚ್ಚಿ ಮಾತನಾಡಿದರು. ಜೀವಕ ಮೊದಮೊದಲು ನಿರ್ಲಕ್ಷಿಸಿದ. ಮೂದಲಿಕೆ ಹೆಚ್ಚಾದಾಗ ಚಿಂತೆಯ ಚಿತೆಯಲ್ಲಿ ಚಡಪಡಿಸಿದ. ಜನ್ಮರಹಸ್ಯ ತಿಳಿದಾಗ ಬೇಸರಗೊಂಡ. ತನ್ನನ್ನು ಸಾಕಿ, ಸಲುಹಿ, ಶಿಕ್ಷಣ ನೀಡಿದ ರಾಜನಿಗೆ ಹೇಳದೆ ಅರಮನೆಯಿಂದ ಹೊರಟುಹೋದ.

**ಶಿಕ್ಷಣ:**

ತಕ್ಷಶಿಲಾ ವಿಶ್ವವಿದ್ಯಾಲಯದ ಖ್ಯಾತಿ ಜೀವಕವನ್ನು ಆಕರ್ಷಿಸಿತು. ಆಯುರ್ವೇದದ ಜ್ಞಾನದಾಹ ಆತ್ಮ ದಾಪುಗಾಲು ಹಾಕಿಸಿತು. ಗುರುವರ್ಯರಲ್ಲಿ ತನ್ನ ಮನದಳಲನ್ನು ತೋಡಿಕೊಂಡ. ಅವರು ಒಪ್ಪಿದಾಗ ಸಂತಸಗೊಂಡ. ದಕ್ಷ ಆಯುರ್ವೇದ ಗುರುಗಳ ನೇತೃತ್ವದಲ್ಲಿ ಹಲು ವರ್ಷಗಳ ಕಾಲ ಅಭ್ಯಾಸ, ಅಧ್ಯಯನ ಮಾಡಿದ. ಆಯುರ್ವೇದ ವೈದ್ಯಕೀಯ ಪದ್ಧತಿಗಳನ್ನೆಲ್ಲಾ ಕರಗತ ಮಾಡಿಕೊಂಡ. ಅದ್ವಿತೀಯ ಪಾಂಡಿತ್ಯ ಗಳಿಸಿದ. ನಿರಹಂಕಾರಿ ಜೀವಕ ಪಂಡಿತರಿಂದ ಕಲಿಯಬಹುದಾದ ಎಲ್ಲ ವಿಷಯಗಳನ್ನು ತಿಳಿಯಲು ತವಕ ಪಡುತ್ತಿದ್ದ. ಅವನ ಜ್ಞಾನದಾಹ, ಶ್ರದ್ಧೆ, ಶಿಸ್ತು, ಸಂಯಮ, ವಿನಯ ಗುರುಗಳನ್ನು ಮಂತ್ರ ಮುಗ್ಧರನ್ನಾಗಿಸಿದ್ದವು. ಪರಿಣಾಮವಾಗಿ ತಮ್ಮಲ್ಲಿಯ ವಿದ್ಯೆಯನ್ನೆಲ್ಲಾ ಧಾರೆಯೆರೆದರು. ಆಯುರ್ವೇದದಲ್ಲಿ ಸಿದ್ಧಾಂತ ಹಾಗೂ ಪ್ರಯೋಗ ಶಿಕ್ಷಣಗಳೆರಡರಲ್ಲೂ ಪಾರಂಗತನಾದ. ಹೊಸ ಹೊಸ ಗಿಡಮೂಲಿಕೆಗಳ ಗುಣ ವಿಶೇಷಗಳನ್ನು ಅಭ್ಯಾಸ ಮಾಡಿ, ಆಯುರ್ವೇದ ಶಾಸ್ತ್ರದ ವಿಸ್ತೀರ್ಣ ಹೆಚ್ಚಿಸಿದ. ವಿದ್ಯಾರ್ಥಿ ಸಂಶೋಧಕನಾದ.

ಸಂಪ್ರದಾಯದಂತೆ ಕಲಿಕೆ ಮುಗಿದ ನಂತರ ಶಿಷ್ಯನ ವೈದ್ಯಕೀಯ ಜ್ಞಾನ ಪರೀಕ್ಷಿಸಲು ಗುರುಗಳು ನಿರ್ಧರಿಸಿದರು. ತಕ್ಷಶಿಲೆಯ ಸುತ್ತಮುತ್ತ ಎಲ್ಲಾದರೂ ಔಷಧಿಯ ಗುಣವಿಲ್ಲದ ಗಿಡಮೂಲಿಕೆ ಯಾವುದಾದರೂ ಇದ್ದರೆ ಹುಡುಕಿ ತರಲು ಹೇಳಿದರು. ಸಂತೋಷದಿಂದ ಶಿಷ್ಯ ಜೀವಕ ಸವಾಲನ್ನು ಸ್ವೀಕರಿಸಿದ. ಜೀವಕನ ದೃಷ್ಟಿಗೆ ನಿರುಪಯುಕ್ತ ಸಸ್ಯ ಕಂಡುಬರಲಿಲ್ಲ. ಎಲ್ಲ ಗಿಡಮೂಲಿಕೆಗಳೂ ಒಂದಲ್ಲ ಒಂದು ಔಷಧಿಯ ಗುಣ ಹೊಂದಿದ್ದವು. ಅವನ ತಿಳುವಳಿಕೆ, ಜ್ಞಾನದ ಆಳ, ಹರಹುಗಳಿಗೆ ಮೆಚ್ಚಿದ ಗುರುಗಳು ಶುಭಾಶೀರ್ವಾದ ಮಾಡಿ ಬೀಳ್ಕೊಟ್ಟರು.

**ವೈದ್ಯ ವೃತ್ತಿ:**

ಸಂಶೋಧನಾ ಪ್ರವೃತ್ತಿ ಜೀವಕನ ಮುಖ್ಯ ಗುಣವಾಗಿತ್ತು. ವೃತ್ತಿ ಪ್ರಾರಂಭೋತ್ಸವವನ್ನು ಪ್ರಯೋಗದ ಮುಖಾಂತರವೇ ಪ್ರಾರಂಭಿಸಿದ.

..... ಶ್ರೀಮಂತನ ಪತ್ನಿ ತಲೆಶೂಲೆಯಿಂದ ಬಹಳ ವರ್ಷಗಳಿಂದ ನರಳುತ್ತಿದ್ದಳು. ಅನೇಕ ವೈದ್ಯರು ಚಿಕಿತ್ಸೆ ಕೊಟ್ಟಿದ್ದರೂ ತಲೆಶೂಲೆ ಕಡಿಮೆಯಾಗಿರಲಿಲ್ಲ. ಅವಳಿಗೆ ಚಿಕಿತ್ಸೆ ಕೊಡಲು ಜೀವಕ ಮುಂದಾದಾಗ

ವೃತ್ತಿಬಾಂಧವರು ಅಪಹಾಸ್ಯ ಮಾಡಿದ್ದರು. "ಆಯುಗಾರರಿಗೆ ಆಯುಗಾರರು ಸೇರುವುದಿಲ್ಲ" ವೆಂಬಂತೆ. ಇವುಗಳಿಗೆ ಜೀವಕ ಜಪ್ಪೆನ್ನಲಿಲ್ಲ. ಶುದ್ಧ ಹಸುವಿನ ತುಪ್ಪದಲ್ಲಿ ತಯಾರಿಸಿದ ಔಷಧಿಯನ್ನು ರೋಗಿಯು ಮೂಗಿನೊಳಗೆ ಸುರುವಿದ. ಚಮತ್ಕಾರ ಆಯಿತು. ಸ್ವಲ್ಪ ಹೊತ್ತಿನಲ್ಲಿಯೇ ಆಕೆ ಬಾಯಿಂದ ನೊರೆ ಬುಸುಗುಡುತ್ತ ಹೊರಬಂತು. ನೊರೆ ನಿಂತಾಗ ಮಲಗಿಯೇ ಇದ್ದ ರೋಗಿ ಎದ್ದು ಕುಳಿತು, ನಸುನಗುತ್ತ ತಲೆನೋವು ಮಾಯವಾಯಿತೆಂದು ತನ್ನ ಸಂತೋಷ ವ್ಯಕ್ತಪಡಿಸಿದಳು. ಹೆಂಡತಿ ಗುಣಮುಖಳಾದ್ದರಿಂದ ಶ್ರೀಮಂತ ಹಿರಿಹಿರಿ ಹಿಗ್ಗಿದ. ಸುವರ್ಣ ನಾಣ್ಯಗಳನ್ನಿತ್ತು ರೋಗಿಗಳಿಗೆ ಸೇವೆ ಸಲ್ಲಿಸಲು ಅನುಕೂಲವಾಗುವಂತೆ ಕುದುರೆ ರಥ, ಪರಿಚಾರಕರನ್ನಿತ್ತು ಸನ್ಮಾನಿಸಿದ. ಅಂದಿನಿಂದ ಪ್ರಾರಂಭವಾದ ಜೀವಕನ ವೈದ್ಯ ವೃತ್ತಿ ಅಸಂಖ್ಯಾತ ಜನರ ರೋಗ ನಿವಾರಣೆ, ಪ್ರಾಣದಾನ ಮಾಡುವುದರಲ್ಲಿ ಯಶಸ್ವಿಯಾಯಿತು.

### ರಾಜ ವೈದ್ಯನ ಪಟ್ಟ:

ಕಿರಿ ವಯಸ್ಸಿನಲ್ಲಿ ಹೆಸರನ್ನು, ಹಿರಿಮೆಯನ್ನು ಗಳಿಸಿ ನಾಡಿನುದ್ದಗಲಕ್ಕೂ ಜೀವಕ ಪ್ರಸಿದ್ಧನಾದ. ಆ ವೇಳೆಗೆ ಚಕ್ರವರ್ತಿ ಬಿಂಬಸಾರರು ಅಸಾಧಾರಣ ರೋಗವೊಂದರಿಂದ ಪೀಡಿತರಾಗಿದ್ದರು. ಆ ರೋಗದಿಂದ ಮುಕ್ತಗೊಳಿಸಲು ರಾಜ ವೈದ್ಯರ ಪ್ರಯತ್ನಗಳೆಲ್ಲಾ ನಿಷ್ಫಲವಾದವು. ಜೀವಕನಿಗೆ ಕರೆಬಂತು. ವಿಷಯ ತಿಳಿದ ಜೀವಕನ ಕರುಳು ಚುರಕ್ ಎಂತು. ತನ್ನನ್ನುಸಾಕಿ ಸಲುಹಿ ಬೆಳೆಸಿದ ರಾಜರಿಗೆ ಸೇವೆ ಸಲ್ಲಿಸಿ ಋಣಮುಕ್ತನಾಗುವ ಭಾಗ್ಯ ಜೀವಕನಿಗೆ ಒದಗಿತು. ರಾಜನನ್ನು ಪರೀಕ್ಷಿಸಿದ ಜೀವಕ ಕಿರುನಗೆ ಸೂಸಿ ಸೂಕ್ತ ಔಷಧಿ ನೀಡಿದ. ಪವಾಡ ಪುರುಷನೆಂದೇ ಪ್ರಸಿದ್ಧನಾಗಿದ್ದ ಜೀವಕ ಮತ್ತೊಂದು ಪವಾಡವನ್ನೇ ಮಾಡಿದ. ಜೀವಕನು ಕೊಟ್ಟ ಔಷಧಿ 'ಚಮತ್ಕಾರಿ ಛಡಿ'ಗಳಂತೆ ಕೆಲಸ ಮಾಡಿ ಚೇತನದ ಚಿಲುಮೆ ಮೈಯಲ್ಲಿ ಹರಿದಾಡಿ, ಬಿಂಬಿಸಾರರು ಚೇತರಿಸಿಕೊಂಡರು. ರೋಗ ಕಣ್ಮರೆಯಾಯಿತು. ಜೀವಕನ ಪಾಂಡಿತ್ಯಕ್ಕೆ ಬೆರಗಾದ ಅರಸ ಅವನನ್ನು ರಾಜ ವೈದ್ಯನನ್ನಾಗಿ ನೇಮಿಸಿಕೊಳ್ಳುವುದಲ್ಲದೇ, ಭಗವಾನ್ ಬುದ್ಧನ ಖಾಸಗಿ ವೈದ್ಯನನ್ನಾಗಿಯೂ ನೇಮಿಸಿದ.

### ಅಗ್ನಿಪರೀಕ್ಷೆ:

ಜೀವಕನ ಪ್ರತಿಭೆ, ಪುರಸ್ಕಾರಗಳಿಗೆ ಹೊಟ್ಟೆಕಿಚ್ಚು ಪಟ್ಟವರು ಸಾಕಷ್ಟು. ಪ್ರಸಿದ್ಧಿಯ ತುತ್ತತುದಿಯಲ್ಲಿದ್ದಾಗ ಪರೀಕ್ಷಾ ಕಾಲ ಬಂತು. ಅವಂತಿ ರಾಜ್ಯದ ಅರಸ ದೀರ್ಘಕಾಲಿಕ ರೋಗಕ್ಕೆ ತುತ್ತಾಗಿ ತತ್ತರಿಸುತ್ತಿದ್ದ. ಅರಸರ ಆಸ್ಥಾನದ ರಾಜವೈದ್ಯರು, ಉಳಿದ ಪ್ರಸಿದ್ಧ ವೈದ್ಯರು ಪ್ರಯತ್ನ ಪಟ್ಟು ಚಿಕಿತ್ಸೆ ನೀಡಿದರೂ ಪ್ರಯೋಜನವಾಗಿರಲಿಲ್ಲ. ಸಾವು ಶತಸಿದ್ಧ ಎಂದು ಅರಸ ಕೊರಗುತ್ತಿದ್ದ. ಬಿಂಬಸಾರ ಅರಸರಿಗೆ ಸುದ್ದಿ ಬಂತು. ತಬ್ಬಿಬ್ಬಾದರು. ತಲೆ ತುರಿಸಿಕೊಂಡರು. ಕೊನೆಗೆ ಸ್ನೇಹಿತನ ರೋಗ ಗುಣಪಡಿಸಲು ಜೀವಕನನ್ನು ಕಳಿಸಿದರು. ಜೀವಕ ಎಲ್ಲ ಔಷಧಿಯನ್ನು ಆಕಳ ತುಪ್ಪದಲ್ಲಿಯೇ ತಯಾರಿಸುತ್ತಿದ್ದ. ಆದರೆ ಅವಂತಿ ರಾಜ್ಯದ ಅರಸರಿಗೆ ಆಕಳ ತುಪ್ಪವೆಂದರೆ ಆಗಿಬರುತ್ತಿರಲಿಲ್ಲ. ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತೆ ಜೀವಕ ಒದ್ದಾಡಿದ. ಅನ್ಯಮಾರ್ಗವಿಲ್ಲದೆ ತುಪ್ಪದಲ್ಲಿ ತಯಾರಿಸಿದ ಔಷಧಿಯನ್ನು ರಾಜನಿಗೆ ಕೊಟ್ಟು ತುರ್ತಾಗಿ ಕೆಲಸವಿದೆಯೆಂದು ಹೇಳಿ ಮರುಪ್ರಯಾಣ ಮಾಡಿದ. ಔಷಧಿ ಸೇವಿಸಿದ ನಂತರ ಅರಸನಿಗೆ ತುಪ್ಪ ಸೇವಿಸಿದ ವಿಷಯ ತಿಳಿದು ಸಿಡಿಮಿಡಿಗೊಂಡ. ಸಿಟ್ಟಿನಿಂದ ಗುಡುಗಿದ. "ಹೀಗೆ ಮೋಸ ಮಾಡಬಹುದಾಗಿದ್ದರೆ ನಾವೇ ರೋಗ ವಾಸಿ ಮಾಡಬಹುದಿತ್ತು" ಎಂದು

ರಾಜ ವೈದ್ಯರು ಹೊತ್ತಿದ ಬೆಂಕಿಗೆ ಸೆದೆ ಹಾಕಿದರು. ಸಿಟ್ಟಿನ ಸೀಮೋಲ್ಲಂಘನ ಮಾಡಿದ ಅರಸರು ಜೀವಕನನ್ನು ಬಂಧಿಸಿ ತರಲು ಸೇವಕರನ್ನಟ್ಟಿದರು.

ರಾಜಾಜ್ಞೆಯೆಂದರೆ ಸಾಮಾನ್ಯವೇ? ಕುದುರೆ ಏರಿದ ಸೈನಿಕರು ದಶದಿಕ್ಕುಗಳಿಗೂ ಹುಡುಕಲು ಹೊರಟರು. ಬೆಳಗಿನ ಉಪಹಾರ ಮಾಡುತ್ತ ಮರದ ಕೆಳಗೆ ಕುಳಿತ ಜೀವಕನ ಸುತ್ತುವರಿದು ನಿಂತರು. ಜೀವಕ ಹಸನ್ಮುಖಿಯಾಗಿಯೇ ಇದ್ದ. ತನ್ನಲ್ಲಿದ್ದ ಹಣ್ಣುಗಳನ್ನು ಅವರಿಗೆಲ್ಲಾ ತಿನ್ನಲು ಕೊಟ್ಟ. ರಾಜರಿಗೆ ನಾನು ಕೊಟ್ಟ ಔಷಧಿಯಿಂದ ಗುಣವಾಗದಿದ್ದಲ್ಲಿ ನನ್ನನ್ನು ಬಂಧಿಸುವುದಷ್ಟೇ ಅಲ್ಲ ಶಿಕ್ಷೆ ನೀಡಿದರೂ ಸ್ವಾಗತಿಸುತ್ತೇನೆ. ಗಲ್ಲಿಗೇರಿಸಿದರೂ ನಾನು ವಿರೋಧಿಸುವುದಿಲ್ಲ ಎಂದ. ಸೈನಿಕರು ಕ್ಷಣಹೊತ್ತು ಸುಮ್ಮನಾದರು. ಕರ್ತವ್ಯದ ಕರೆ ಕೂರೆದಾಗ ರಾಜಾಜ್ಞೆಯಂತೆ ಬಂಧಿಸಿದರು. ಅರಮನೆಗೆ ತಂದರು. ಜೀವಕನ ಔಷಧಿಯಿಂದ ಪವಾಡವಾಗಿತ್ತು. ಅರಸರು ರೋಗದಿಂದ ಚೇತರಿಸಿಕೊಂಡಿದ್ದರು. ಮುಖದಲ್ಲಿ ಲವಲವಿಕೆ ಲಾಸ್ಯವಾಡುತ್ತಿತ್ತು. ತಲೆಗೆ ಮುತ್ತಿದ್ದ ಮಂಕು ಮಾಯವಾಗಿತ್ತು. ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟದ್ದಕ್ಕಾಗಿ ಅರಸರು ಮಮ್ಮಲ ಮರುಗಿದರು. ಜೀವಕನ ಚಿಕಿತ್ಸೆಯ ಚಮತ್ಕಾರದ ಬಗ್ಗೆ ಮುಕ್ತ ಕಂಠದಿಂದ ಅರಸರು ಹೊಗಳಿದರು. ಬಂಧನದಿಂದ ಮುಕ್ತಗೊಳಿಸಿದರು. ರಾಜ ಮರ್ಯಾದೆಯೊಂದಿಗೆ ಜೀವಕನನ್ನು ಗೌರವಿಸಿದರು.

**ದಾರಿ ದೀಪ:**

ಆಟಯಿಂದ ಮುದಿಯುವರೆಗೂ ವಿಷಯದ ಅಭ್ಯಾಸವನ್ನು ಸಂಶೋಧನಾತ್ಮಕ ದೃಷ್ಟಿಯಿಂದ ಮಾಡುವುದಕ್ಕೆ ತನ್ನ ಜೀವಿತವನ್ನು ಮುಡುಪಾಗಿಟ್ಟಿದ್ದ. ನಿಸರ್ಗವು ಗುಪ್ತವಾಗಿರಿಸಿದ ಅನೇಕ ಜಟಿಲ ಸಮಸ್ಯೆಗಳನ್ನು ಬಿಡಿಸುವುದು ಆತನಿಗೆ ಅತ್ಯಂತ ಪ್ರಿಯವಾಗಿದ್ದಿತು. ರೋಗದ ಚಿಕಿತ್ಸೆಯನ್ನು ರೋಗದ ಪ್ರಾರಂಭಿಕ ಹಂತದಲ್ಲೇ ಪ್ರಾರಂಭಿಸಬೇಕೆಂದು ಜೀವಕ ಹೇಳಿದ್ದ. ಸಾವು ಸನ್ನಿಹಿತವಾದಾಗ ಯಾವ ಚಿಕಿತ್ಸೆಯೂ ಪರಿಣಾಮಕಾರಿಯಲ್ಲ ಎಂದು ವಿವರಿಸಿದ್ದ. ವೈದ್ಯ ರೋಗಿಯು ಬಳಿ ಬಂದಾಗ ಆತನ ಆಯುಷ್ಯ ಮತ್ತು ಸಾಮರ್ಥ್ಯವನ್ನು ನಿರ್ಧರಿಸಬೇಕು ಎಂದು ಜೀವಕ ಹೇಳಿದ್ದ. ಸಾವು ಸನ್ನಿಹಿತವಾದಾಗ ಯಾವ ಚಿಕಿತ್ಸೆಯೂ ಪರಿಣಾಮಕಾರಿಯಲ್ಲ ಎಂದು ವಿವರಿಸಿದ್ದ. ಆತನ ಅಂದಿನ ವಿಚಾರಗಳು ಇಂದಿಗೂ ನಿತ್ಯ ನೂತನವಾಗಿವೆ. ವೈದ್ಯ ವೃಂದಕ್ಕೆ ದಾರಿ ದೀಪವಾಗಿವೆ. *





ನವೆಂಬರ್ 1990

# ಕಸ್ತೂರಿ ಮೃಗಗಳ ಅಳಿವು– ಉಳಿವಿನ ಪ್ರಶ್ನೆ

ಕೆ. ವೆಂಕಣ್ಣಾಚಾರ್

**ಮಾ**ನವನ ಸ್ವಾರ್ಥ ಹಾಗೂ ದುರಾಶೆಗಳ ಪರಿಣಾಮವಾಗಿ ಅಳಿದುಹೋಗುತ್ತಿರುವ ಅಮೂಲ್ಯ ವನ್ಯಜೀವಿಗಳ ಗುಂಪಿಗೆ ಕಸ್ತೂರಿ ಮೃಗಗಳೂ ಸೇರುತ್ತವೆ. ಪಾಕಿಸ್ತಾನ, ನೇಪಾಳ, ಭೂತಾನ, ಟಿಬೆಟ್, ಚೀನಾ, ಬರ್ಮ, ಮಂಗೋಲಿಯಾ, ಸೈಬೀರಿಯಾ, ಕೊರಿಯಾ, ಸಖಾಲಿನ್ ದ್ವೀಪ ಮೊದಲಾದ ಏಷಿಯನ್ ರಾಷ್ಟ್ರಗಳಲ್ಲಿ ಇವು ಕಂಡುಬಂದರೂ ಭಾರತದ ಹಿಮಾಲಯ ಪರ್ವತಗಳ ವಾಯುವ್ಯದಲ್ಲಿರುವ ೨೭೦೦ ರಿಂದ ೪೭೦೦ ಮೀ. ಎತ್ತರದ ಅರಣ್ಯ ಪ್ರದೇಶಗಳು ಈ ಮೃಗಗಳಿಗೆ ಪ್ರಿಯವಾದ ನೆಲೆ ಎನ್ನಲಾಗುತ್ತದೆ.

ಉತ್ತರ ಪ್ರದೇಶ, ಹಿಮಾಚಲ ಪ್ರದೇಶ, ಜಮ್ಮು ಹಾಗೂ ಕಾಶ್ಮೀರ ರಾಜ್ಯಗಳಿಗೆ ಸೇರಿರುವ ಈ ಭಾಗಗಳಲ್ಲಿ ಅವುಗಳಿಗೆ ಇಷ್ಟವಾದ ಎಲೆಗಳು, ಹುಲ್ಲು, ಶಿಲಾವಲ್ಕ ಮೊದಲಾದವು ವಿಪುಲವಾಗಿ ದೊರಕುತ್ತಿದ್ದರಿಂದಲೂ ಅಲ್ಲಿನ ಹವಾಮಾನವು ಅವುಗಳ ಬೆಳವಣಿಗೆಗೆ ಹಿತಕಾರಿ ಆಗಿರುತ್ತಿದ್ದುದರಿಂದಲೂ ಅಲ್ಲಿ ಅವುಗಳಿಗೆ ಬಹುಕಾಲ ಹಿಂಸ್ರ ಪಶುಗಳು ಹಾಗೂ ಮಾನವರ ಪೀಡೆ ಅಷ್ಟಾಗಿ ಇರಲಿಲ್ಲವಾದ್ದರಿಂದಲೂ ಒಂದು ಕಾಲದಲ್ಲಿ ಈ ಭಾಗದಲ್ಲಿದ್ದ ಕಸ್ತೂರಿ ಮೃಗಗಳ ಸಂಖ್ಯೆಯನ್ನು ಲಕ್ಷಗಳಲ್ಲಿ ಹೇಳಲಾಗುತ್ತಿತ್ತು.

ಕ್ರಮೇಣ ಹೆಚ್ಚಿದ ಅರಣ್ಯ ನಾಶ, ಪರಿಸರ ಅಸಮತೋಲನ, ಹವಾಮಾನದ ಏರುಪೇರು, ನೀರಿನ ಅಭಾವ, ರೋಗ ರುಜಿನಗಳು ಅವುಗಳ ಸಂಖ್ಯೆಯನ್ನು ಇಳಿಸಿದವಾದರೂ ಅವುಗಳ ಸಾಮೂಹಿಕ ನಿರ್ಮೂಲನದ ಪ್ರಯತ್ನ ನಡೆದುದು ಬೇಟೆಯಿಂದಲೇ. ಅವುಗಳ ದೇಹದಲ್ಲಿ ಉತ್ಪತ್ತಿಯಾಗುವ ಕಸ್ತೂರಿಯಿಂದ ನಪುಂಸಕತ್ವವನ್ನು ನಿವಾರಿಸಬಹುದೆಂಬ ಸುದ್ದಿಯು ಹರಡಿದ್ದೇ ತಡ ಅವುಗಳ ಹತ್ಯೆ ಮೇರೆ ಮೀರಿತು. ೧೯೭೦ರ ದಶಕದಲ್ಲಿ ಜಪಾನಿಗೆ ಕಸ್ತೂರಿಯನ್ನು ರಫ್ತು ಮಾಡಲಿಕ್ಕಾಗಿ ಭಾರತದಲ್ಲಿ ಅದೆಷ್ಟು ಮೃಗಗಳನ್ನು ಕೊಲ್ಲಲಾಯಿತು ಎಂಬುದಕ್ಕೆ ಲೆಕ್ಕವಿಲ್ಲವಂತೆ. ಇದೇ ದಶಕದ ಒಂದು ವರ್ಷದಲ್ಲಿ ಭಾರತದ ಅರಣ್ಯಗಳಲ್ಲಿದ್ದ ಕಸ್ತೂರಿ ಮೃಗಗಳ ಸಂಖ್ಯೆ ಕೇವಲ ೨೦೦೦ಕ್ಕೆ ಇಳಿಯಿತಂತೆ.

ಇಂಥ ಹೃದಯ ವಿದ್ರಾವಕ ಸಂಗತಿಯನ್ನು ಕೇಳಿ ಕಳವಳಿಸಿದ ವಿಶ್ವ ಪ್ರಕೃತಿ ಹಾಗೂ ಪ್ರಾಕೃತಿಕ ಸಂಪನ್ಮೂಲ ಸಂಸ್ಥೆಯು ಈ ಘಟನೆಯನ್ನು ತೀವ್ರವಾಗಿ ಖಂಡಿಸಿ ಅದನ್ನು ಕೆಂಪು ಪುಸ್ತಕ (Red Book) ದಲ್ಲಿ ದಾಖಲಿಸಿಬಿಟ್ಟಿತು. ಆಗ ಎಚ್ಚರಗೊಂಡ

ಭಾರತದ ಆಡಳಿತವು ಕಸ್ತೂರಿ ಮೃಗಗಳ ಸಂರಕ್ಷಣೆ ಹಾಗೂ ಸಂವರ್ಧನೆಗೆ ಅನೇಕ ಕ್ರಮಗಳನ್ನು ಕೈಗೊಂಡ ಫಲವಾಗಿ ಈಗೀಗ ಅವುಗಳ ಪರಿಸ್ಥಿತಿ ಸುಧಾರಿಸುತ್ತಿದೆ ಎಂಬ ವರದಿ ಪ್ರಕಟವಾಗಿದೆ.

**ಕಸ್ತೂರಿ ಮೃಗ-ಕಸ್ತೂರಿ:**

ಜಿಂಕೆಯಂತೆ ಕಾಣುವ ಕಸ್ತೂರಿ ಮೃಗವು ಪುಕ್ಕಲು ಸ್ವಭಾವದ ಸಸ್ಯಾಹಾರಿ ಸಸ್ತನಿ ಪ್ರಾಣಿಯಾಗಿದೆ. ಮಾನವನ ದೃಷ್ಟಿಯಿಂದ ದೂರವಿರಬಯಸುವ ಕೊಂಬಿಲ್ಲದ ಈ ಮೃಗಕ್ಕೆ ಮೊಲದಂತಹ ದೊಡ್ಡ ಕಿವಿಗಳೂ, ಜಿಂಕೆಯಂತಹ ಮೋಟು ಬಾಲವೂ ಇರುತ್ತವೆ. ಅವುಗಳ ಸದೃಢವಾದ ನಾಲ್ಕು ಕಾಲುಗಳ ಕೊನೆಯಲ್ಲಿರುವ ಸೀಳು ಗೊರಸುಗಳು ಕಲ್ಲು ಗುಂಡುಗಳಿಂದ ಕೂಡಿದ ಪರ್ವತ ಪ್ರದೇಶದಲ್ಲಿ ಚಪಲತೆಯಿಂದ ಚಲಿಸಲು ಸಹಕಾರಿಯಾಗಿವೆ. ದವಡೆಯಿಂದ ಹೊರ ಚಾಚಿರುವ ಸುಮಾರು ೧೫ ರಿಂದ ೧೭ ಸೆಂ.ಮೀ. ಉದ್ದದ ಎರಡು ಕೋರೆ ಹಲ್ಲುಗಳೇ ಅವರ ಪ್ರಮುಖ ರಕ್ಷಣಾಂಗಗಳು. ಸುಮಾರು ೧೭ ಕೆ.ಜಿ. ತೂಗುವ ಈ ಮೃಗಗಳ ಚರ್ಮವು ವಸಂತ ಕಾಲದಲ್ಲಿ ಕಂದು ಬಣ್ಣದ್ದಾಗಿದ್ದರೆ ಚಳಿಗಾಲದಲ್ಲಿ ಬೂದು ಬಣ್ಣಕ್ಕೆ ತಿರುಗುತ್ತದೆ. ಈ ಮೃಗಕ್ಕೆ ವಿಶಿಷ್ಟ ಕೂಗು ಇಲ್ಲವಾದರೂ ಅದು ಭಯ ವ್ಯಾಕುಲಗಳಿಗೆ ಒಳಗಾದಾಗ ಸೀನುವುದು, ಕೆಮ್ಮುವುದು, ಮುಸುಗುರಿಯುವುದು ಮಾಡುವುದುಂಟು. ಎಲ್ಲಾ ಮೃಗಗಳಿಂದಲೂ ಕಸ್ತೂರಿ ದೊರೆಯುವುದಿಲ್ಲ. ಗಂಡು ಮೃಗದ ಉದರ ಭಾಗದಲ್ಲಿ ಕೋಳಿಮೊಟ್ಟೆ ಗಾತ್ರದ ಎರಡು ಕೋಶಿಕೆಗಳಿರುತ್ತವೆ. ಅದಕ್ಕೆ ಪ್ರಾಯ ಬಂದಾಗ, ವಸಂತ ಹಾಗೂ ಚಳಿಗಾಲಗಳಲ್ಲಿ ತಲೆದೋರುವ ಸಂತಾನೋತ್ಪತ್ತಿಯ ಹಂಗಾಮಿನಲ್ಲಿ ಈ ಕೋಶಿಕೆಗಳಲ್ಲಿ ಹೆಣ್ಣು ಮೃಗವನ್ನು ಆಕರ್ಷಿಸಲು ಮನಮೋಹಕ ಪರಿಮಳದ ದ್ರವ್ಯವೊಂದು ಉತ್ಪತ್ತಿಯಾಗುತ್ತದೆ. ಅದೇ ಕಸ್ತೂರಿ.

ಮೃಗಗಳ ದೇಹದಲ್ಲಿ ಉತ್ಪತ್ತಿಯಾಗುವ ಕಸ್ತೂರಿಯು ಕಡು ಕಂದು ಬಣ್ಣದ ಸ್ನಿಗ್ಧವಾದ ದ್ರವದ ರೂಪದಲ್ಲಿರುತ್ತದೆ. ಅದನ್ನು ಶುಷ್ಕಗೊಳಿಸಿ ಸಂಸ್ಕರಿಸಿದಾಗ ಅದು ನೀರು ಮತ್ತು ಮದ್ಯಸಾರಗಳಲ್ಲಿ ಕರಗುವ ಸುಗಂಧಯುಕ್ತ ಪುಡಿಯ ರೂಪ ತಾಳುತ್ತದೆ. ಅದರಲ್ಲಿ ಅಮೋನಿಯಾ, ಒಲೆಯಿನ್, ಆಲ್ಬುಮಿನ್, ಕೊಲೆಸ್ಟಿನ್, ಮೇದಸ್ಸು, ಮೇಣ, ಜಿಲೆಟಿನ್‌ನಂತಹ ವಸ್ತು, ಸೋಡಿಯಂ, ಪೊಟಾಸಿಯಂ, ಕ್ಯಾಲ್ಸಿಯಂ ಮತ್ತು ಅದಕ್ಕೆ ವಿಶಿಷ್ಟ ಪರಿಮಳ ನೀಡುವ ಮಸ್ಕೋನ್ ಎಂಬ ತೈಲ ವಸ್ತುಗಳು ಇರುವುದನ್ನು ರಾಸಾಯನಿಕ ವಿಶ್ಲೇಷಣೆ ತೋರಿಸಿಕೊಟ್ಟಿದೆ.

ಭಾರತ ಮತ್ತು ಇಥಿಯೋಪಿಯದ ಕೆಲವು ಬೆಕ್ಕುಗಳಿಂದ, ಅಮೆರಿಕದ ಆರ್ಕಟಿಕ್ ವಿಭಾಗದ ಕೆಲವು ಎತ್ತುಗಳಿಂದ, ಆಸ್ಟ್ರೇಲಿಯಾದ ಕೆಲವು ಬಾತುಗಳಿಂದ, ಕ್ಯಾಲಿಫೋರ್ನಿಯಾದ ಕೆಲವು ಇಲಿಗಳಿಂದ, ಮಧ್ಯ ಅಮೆರಿಕದ ಪೂಮ ಎಂಬ ಜೀವಿಯಿಂದ, ಹಲವು ಸಸ್ಯಗಳಿಂದ ಮತ್ತು ರಾಸಾಯನಿಕ ಸಂಯೋಜನೆಯಿಂದ ಕಸ್ತೂರಿಯಂಥ ವಸ್ತುವನ್ನು ಪಡೆಯಬಹುದಾದರೂ ಅದು ಅಸಲಿ ಕಸ್ತೂರಿಗೆ ಸರಿಸಾಟಿಯಾಗಲಾರದು ಎಂದು ತಿಳಿಯಲಾಗುತ್ತದೆ.

ವಿಶ್ವದ ವಾರ್ಷಿಕ ಕಸ್ತೂರಿ ವಹಿವಾಟು ಸುಮಾರು ೨೦೦ ಕೆ.ಜಿ.ಯಷ್ಟು. ಅದರಲ್ಲಿ ೧೫೦ ಕೆ.ಜಿ.ಯಷ್ಟನ್ನು ಜಪಾನೊಂದೇ ಕೊಳ್ಳುತ್ತದೆ. ಯುರೋಪಿಯನ್ ಮತ್ತು ಅಮೆರಿಕನ್ ರಾಷ್ಟ್ರಗಳ ಆಮದು ಸುಮಾರು ೨೦ ರಿಂದ ೪೦ ಕೆ.ಜಿ. ಭಾರತದಲ್ಲಿ ಅದರ ವಾರ್ಷಿಕ ಬಳಕೆ ೧೦ ರಿಂದ ೧೫ ಕೆ.ಜಿ. ಪ್ರಸ್ತುತ ಭಾರತ, ನೇಪಾಳ, ಚೀನಾಗಳಿಗೆ ವಿಶ್ವದ ಕಸ್ತೂರಿ ವ್ಯಾಪಾರದಲ್ಲಿ ಅಗ್ರಮಾನ್ಯ ಸ್ಥಾನವಿದೆ. ಈ ವಹಿವಾಟಿನ ಅಂತಾರಾ

ಷ್ಟ್ರೀಯ ಮೌಲ್ಯವು ಅಜಮಾಸು ೬ ಮಿಲಿಯನ್ ಡಾಲರುಗಳೆಂದೂ, ವಿಶ್ವ ಮಾರುಕಟ್ಟೆಯಲ್ಲಿ ೧ ಕೆ.ಜಿ. ಕಸ್ತೂರಿಯ ಬೆಲೆ ೩ ರಿಂದ ೫ ಲಕ್ಷ ರೂಪಾಯಿಗಳೆಂದೂ ವರದಿಗಳು ತಿಳಿಸುತ್ತವೆ. ಅಂದರೆ ಕಸ್ತೂರಿಯ ಬೆಲೆ ಹೆಚ್ಚು ಕಮ್ಮಿ ಬಂಗಾರದ ಬೆಲೆಯಷ್ಟು ಎನ್ನಬಹುದಷ್ಟೆ. ಬೇಡಿಕೆ ಹೆಚ್ಚಿದಂತೆ ಅದರ ಬೆಲೆಯಲ್ಲೂ ಏರಿಕೆ ಆಗುವುದುಂಟು.

ಭಾರತೀಯರಿಗೆ ಪ್ರಾಚೀನ ಕಾಲದಿಂದಲೂ ಕಸ್ತೂರಿಯ ಸೌಂದರ್ಯವರ್ಧಕ ಹಾಗೂ ಔಷಧೀಯ ಗುಣಗಳು ಪರಿಚಿತವಾಗಿದ್ದವು. ಕ್ರಿ.ಶ. ೧೧ನೇ ಶತಮಾನದಲ್ಲಿ ಟಿಬೆಟ್, ಅರೇಬಿಯಾ ಹಾಗೂ ಮಧ್ಯ ಏಶಿಯಾ ರಾಷ್ಟ್ರಗಳ ಜನರಿಗೆ ಅದರ ಪರಿಚಯವಾಯಿತು. ಈಗಂತೂ ವಿಶ್ವದಾದ್ಯಂತ ಹೃದಯ, ಶ್ವಾಸಾಂಗವ್ಯೂಹ, ಮೂತ್ರಜನಕಾಂಗ, ಜನನೇಂದ್ರಿಯ, ಚರ್ಮ ಮೊದಲಾದವುಗಳ ರೋಗಗಳನ್ನು ನಿವಾರಿಸುವ, ಮುಖ್ಯವಾಗಿ ಪುಂಸತ್ವವನ್ನು ಪುನರುಜ್ಜೀವನಗೊಳಿಸುವ ಔಷಧಗಳ ತಯಾರಿಕೆಯಲ್ಲಿ ಅದನ್ನು ಬಳಸಲಾಗುತ್ತದೆ. ಸುಮಾರು ೧೫೦ ಆಯುರ್ವೇದಿಯ, ೫೦ ಯುನಾನಿ ಹಾಗೂ ಅನೇಕ ಸಿದ್ಧಪದ್ಧತಿಯ ಔಷಧಿಗಳಲ್ಲಿ ಅದು ಪ್ರಮುಖ ಘಟಕವಾಗಿರುತ್ತದೆ ಎನ್ನಲಾಗುತ್ತದೆ. ಇವುಗಳ ಜೊತೆಗೆ ಶ್ರೇಷ್ಠ ಗುಣಮಟ್ಟದ ಸಾಬೂನು, ಅಂಗಲೇಪನ ಹಾಗೂ ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿ ಕಸ್ತೂರಿಯನ್ನು ಬಳಸಲಾಗುತ್ತದೆ. ಹೀಗಾಗಿ ಅದಕ್ಕೆ ಬೇಡಿಕೆ ಅಪಾರ.

## ಮಾರಕ ಬೇಟೆ:

ಇಂಥ ಅಮೂಲ್ಯ ವಸ್ತುವನ್ನು ಕೊಡುವ ಕಸ್ತೂರಿ ಮೃಗದ ಸಂತತಿಯ ಅಳಿವಿಗೆ ಕಳ್ಳ ಬೇಟೆ ಹೇಗೆ ಕಾರಣವಾಗುತ್ತದೆ ಎಂಬುದಕ್ಕೆ ಈ ರೀತಿ ವಿವರಣೆ ನೀಡಲಾಗುತ್ತದೆ. ಕಸ್ತೂರಿ ಮೃಗಗಳಲ್ಲಿ ಕಸ್ತೂರಿಯನ್ನು ಕೊಡುವ ಗಂಡು ಮೃಗಕ್ಕೂ, ಕೊಡದ ಹೆಣ್ಣು ಮೃಗಕ್ಕೂ ಎದ್ದುಕಾಣುವ ಯಾವ ವ್ಯತ್ಯಾಸವೂ ಇರುವುದಿಲ್ಲ. ದೂರದಿಂದ ಎರಡೂ ಒಂದೇ ಸಮನಾಗಿ ಕಾಣುತ್ತವೆ. ಕಳ್ಳಬೇಟೆಗಾರರಿಗೆ ಕಸ್ತೂರಿ ಮುಖ್ಯವೇ ವಿನಃ ಮೃಗಗಳ ಸಂರಕ್ಷಣೆಯಲ್ಲ. ಸಿಕ್ಕಿಬೀಳುವ ಭಯದಿಂದ ಅವರು ತರಾತುರಿಯಲ್ಲಿ ಬೇಟೆಯಾಡುತ್ತಾರೆ.

ಮೊದಲು ಅವರು ಗಂಡು, ಹೆಣ್ಣು, ಮಣಕ, ಮರಿ ಎಂಬ ಪರಿಗಣನೆಯಿಲ್ಲದೆ ಎಲ್ಲಾ ಮೃಗಗಳನ್ನು ದಟ್ಟ ಅಡವಿಯಿಂದ ಕುರುಚಲು ಕಾಡಿಗೆ ಅಟ್ಟಿಕೊಂಡು ಬರುತ್ತಾರೆ. ಅಲ್ಲಿ ಅವರ ಬೇಟೆ ನಾಯಿಗಳು ಅವನ್ನು ಓಡಿಸಿ ಓಡಿಸಿ ಸುಸ್ತು ಕೆಡವಿ ದಿಕ್ಕು ತೋಚದೆ ನಿಲ್ಲುವಂತೆ ಮಾಡುತ್ತವೆ. ಆಗ ಬೇಟೆಗಾರರು ಅವನ್ನು ಸಾರಾಸಗಟಾಗಿ ಗುಂಡಿಟ್ಟು ಕೊಲ್ಲುತ್ತಾರೆ. ಕೆಲವು ಕಡೆ ಆಯಕಟ್ಟಿನ ಸ್ಥಳಗಳಲ್ಲಿ ವಿಷ ಸವರಿದ ಹರಿತವಾದ ಈಟಿಗಳನ್ನು ನೆಟ್ಟು ಭಯವಿಹ್ವಲವಾದ ಮೃಗಗಳು ಅವುಗಳ ಮೇಲೆ ಹಾಯುವಂತೆ ಮಾಡಿ ಕೊಲ್ಲುವುದುಂಟು. ನೇಪಾಳ, ಭೂತಾನಗಳಲ್ಲಿ ಉರುಳಿಗೆ ಸಿಲುಕಿಸಿ ಅವನ್ನು ಕೊಲ್ಲುತ್ತಾರೆ. ಈ ಕ್ರಮದಿಂದ ಕೊಂದ ಹತ್ತು ಮೃಗಗಳಲ್ಲಿ ನಾಲ್ಕು ಮಾತ್ರ ಕಸ್ತೂರಿ ಕೊಡುವ ಗಂಡು ಮೃಗಗಳಾಗಿರುತ್ತವಂತೆ. ಇಂಥ ಹೇಯ ಬೇಟೆ ಬಹುಕಾಲ ನಡೆದ ಪರಿಣಾಮವಾಗಿ ಕಸ್ತೂರಿ ಮೃಗಗಳ ಸಂಖ್ಯೆ ಇಷ್ಟೊಂದು ಇಳಿಯಿತಂತೆ.

## ರಕ್ಷಣಾ ಕ್ರಮ:

ಕಸ್ತೂರಿ ಮೃಗಗಳನ್ನು ಅಳಿವಿನಿಂದ ಪಾರು ಮಾಡಲು ಭಾರತದ ಆಡಳಿತವು ಕಳ್ಳ ಬೇಟೆಯನ್ನು ನಿರೋಧಿಸಲು ತೀವ್ರ ಕಾನೂನು ಕ್ರಮಗಳನ್ನು ಕೈಗೊಳ್ಳುತ್ತಿದೆ. ಅದರ ಪ್ರೋತ್ಸಾಹದಿಂದ ಕೇಂದ್ರೀಯ ಆಯುರ್ವೇದ ಹಾಗೂ ಸಿದ್ಧ ವೈದ್ಯಕೀಯ ಸಂಶೋಧನಾ ಸಂಸ್ಥೆಯು ಉತ್ತರ ಪ್ರದೇಶದ ಕುಮಾವೋ ವಿಭಾಗದ ಕೊಟಮಾನ್ಯ

ಎಂಬಲ್ಲಿ ಒಂದು ಕಸ್ತೂರಿ ಮೃಗದ ಸಂವರ್ಧನಾ ಕ್ಷೇತ್ರವನ್ನು ಸ್ಥಾಪಿಸಿದೆ. ಅದೇ ರಾಜ್ಯದ ಘಡವಾಲ್ ವಿಭಾಗದ ಚಿಮೋಲಿಯಲ್ಲಿ ಮತ್ತು ಹಿಮಾಚಲ ಪ್ರದೇಶದ ಶಿಮ್ಲಾ ಬಳಿಯಲ್ಲಿ ಆಯಾ ರಾಜ್ಯದ ಅರಣ್ಯ ಇಲಾಖೆಗಳು ಒಂದೊಂದು ಕಸ್ತೂರಿ ಮೃಗ ಸಂರಕ್ಷಣಾ ಹಾಗೂ ಸಂವರ್ಧನಾ ಕ್ಷೇತ್ರಗಳನ್ನು ನಡೆಸುತ್ತಿವೆ. ಇವುಗಳಲ್ಲದೆ ಉತ್ತರ ಪ್ರದೇಶದ ಕೇದಾರನಾಥ ಮತ್ತು ಜಮ್ಮು ಕಾಶ್ಮೀರದ ದಚ್ಚಿಗ್ರಾಂಗಳ ಬಳಿ ಆವಾಸಗಳಾಗಿ ಎರಡು ಅಭಯಾರಣ್ಯಗಳನ್ನು ನಿರ್ಮಿಸಲಾಗಿದೆ. ಇಲ್ಲೆಲ್ಲಾ ಕಸ್ತೂರಿ ಮೃಗಗಳ ಸಂತತಿ ವೃದ್ಧಿಸುತ್ತಿವೆಯೆಂದು ವರದಿಯಾಗಿದೆ.

ಕೊಟಮಾನ್ಯದಲ್ಲಿ ನಿರ್ಬಂಧದಲ್ಲಿಯೇ ಕಸ್ತೂರಿ ಮೃಗಗಳನ್ನು ಬೆಳೆಸುವ ಯತ್ನವು ಸ್ವಲ್ಪಮಟ್ಟಿಗೆ ಸಫಲವಾಗಿದೆ. ಇಲ್ಲಿ ನಡೆಸಿದ ಸಂಶೋಧನೆಗಳಿಂದ ನೂತನ ಆಹಾರ ಪದ್ಧತಿ, ಹೊಸ ಪರಿಸರ, ಮಾನವನ ಸಾಮೀಪ್ಯ ಮೊದಲಾದವು ಮೃಗಗಳ ಸಂತಾನಾಭಿವೃದ್ಧಿ, ಕೋಶಿಕೆಗಳ ಬೆಳವಣಿಗೆ, ಕಸ್ತೂರಿಯ ಪ್ರಮಾಣ ಹಾಗೂ ಗುಣಮಟ್ಟಗಳ ಮೇಲೆ ಯಾವುದೇ ಪ್ರಭಾವ ಬೀರುವುದಿಲ್ಲವೆಂದೂ ಮಾನವರ ಸಾಮೀಪ್ಯದಿಂದ ಮೃಗಗಳ ಸ್ವಭಾವದಲ್ಲಿ ಸ್ವಲ್ಪ ವ್ಯತ್ಯಯವಾಗುವುದೆಂದೂ ತಿಳಿದುಬಂದಿದೆ.

೫೦ರ ದಶಕದಲ್ಲಿ ಚೀನಾದ ಪಾನ್ಲಿ ಕಮ್ಯೂನಿನವರು ಆರಂಭಿಸಿದ ಮೃಗಗಳನ್ನು ಕೊಲ್ಲದೆಯೇ ಕಸ್ತೂರಿಯನ್ನು ಸಂಗ್ರಹಿಸುವ ಪದ್ಧತಿಯನ್ನು ಇಲ್ಲಿಯೂ ಅನುಸರಿಸಲಾಗುತ್ತಿದೆ. ಈಚೆಗೆ ಕಸ್ತೂರಿಯನ್ನು ಸಂಗ್ರಹಿಸಿಕೊಂಡ ಅರ್ಧ ಗಂಟೆಯಲ್ಲಿ ಮೃಗವು ಮೊದಲ ಸ್ಥಿತಿಗೆ ಬರುತ್ತಿದೆ. ಕೆಲವು ಕಡೆ ಕಸ್ತೂರಿಯನ್ನು ಸಂಗ್ರಹಿಸಿದ ನಂತರ ಮೃಗವನ್ನು ಕಾಡಿಗೆ ಬಿಟ್ಟುಬಿಡಲಾಗುತ್ತದೆ. ಅಹಿಂಸಾತ್ಮಕವಾಗಿ ಕಸ್ತೂರಿಯನ್ನು ಸಂಗ್ರಹಿಸುವ ವಿಧಾನವನ್ನು ಗ್ರಾಮಸ್ಥರಿಗೆ ಕಲಿಸಿ, ಅವರಿಗೂ ದುಡಿಮೆಯ ಮಾರ್ಗವನ್ನು ಕಲ್ಪಿಸಿ ಅವರು ಕಳ್ಳ ಬೇಟೆಗಾರರೊಡನೆ ಸಹಕರಿಸುವುದನ್ನು ತಪ್ಪಿಸಲು ಯತ್ನಿಸಲಾಗುತ್ತಿದೆ.

ಈ ಎಲ್ಲಾ ಕ್ರಮಗಳಿಂದ ಕಸ್ತೂರಿ ಮೃಗಗಳ ಕಗ್ಗೊಲೆ ನಿಂತುಹೋಗಿ ಅವುಗಳ ಸಂತತಿ ವೃದ್ಧಿಸುವದೆಂದು ಆಶಿಸಲಾಗಿದೆ. ಹಿಮಾಲಯ ಪರ್ವತಗಳ ನಂದಾದೇವಿ ಮೊದಲಾದ ಹಿಮಾಚ್ಛಾದಿತ ಶಿಖರಗಳು, ನಂದಾದೇವಿ ರಾಷ್ಟ್ರೀಯ ಉದ್ಯಾನ, ಪಿಂಡಾರಾ ಹಿಮನದಿ ಇವುಗಳ ಸನಿಹದಲ್ಲಿರುವ ಕೊಟಮಾನ್ಯದ ಕಸ್ತೂರಿ ಮೃಗ ಸಂರಕ್ಷಣಾ ಹಾಗೂ ಸಂವರ್ಧನಾ ಕ್ಷೇತ್ರವು ಈಚೆಗೆ ಒಂದು ದೊಡ್ಡ ಪ್ರವಾಸಿ ಕೇಂದ್ರವೇ ಆಗಿದೆ. ವಿಹಾರಿಗಳು, ಪ್ರವಾಸಿಗಳು, ನಿಸರ್ಗ ಪ್ರೇಮಿಗಳು ಹಾಗೂ ವನ್ಯಪ್ರಾಣಿ ಪ್ರಿಯರು ಅಲ್ಲಿಗೆ ದಿನಂಪ್ರತಿ ಆಗಮಿಸುತ್ತಾರೆ. ಪ್ರಕೃತಿ ಸೌಂದರ್ಯದ ತಾಣದಲ್ಲಿ ಬೆಳೆಯುತ್ತಿರುವ ಕಸ್ತೂರಿ ಮೃಗಗಳನ್ನು ಕಂಡು ಹರ್ಷಿಸುತ್ತಾರೆ ಎಂದು ವರದಿಯಾಗಿರುವುದು ನಿಜಕ್ಕೂ ಸ್ವಾಗತಾರ್ಹ ಸಂಗತಿಯಾಗಿದೆ.

(ವಿವಿಧ ಮೂಲಗಳಿಂದ)



# ಸಾವಿನ ದವಡೆಯಿಂದಾಚೆಗೆ....

ಸಂಗ್ರಹಾನುವಾದ: ರೇಣುಕ

## ವಾಲ್ಟರ್ ಗಿಬ್ಸನ್ನರ ನೆನಪುಗಳು

*ವಾಲ್ಟರ್ ಗಿಬ್ಸನ್ನರು ಬ್ರಿಟಿಷ್ ಸೇನಾಪಡೆಯಲ್ಲಿ ಅಧಿಕಾರಿಯಾಗಿದ್ದು, ದ್ವಿತೀಯ ಜಾಗತಿಕ ಸಮರ ಪೂರ್ವದಲ್ಲಿ ಭಾರತೀಯ ಸೇನಾಪಡೆಯಲ್ಲೂ ಸೇವೆ ಸಲ್ಲಿಸಿದ್ದರೆಂದು ಅವರ ಬರಹಗಳ ಮೂಲಕ ತಿಳಿಯುತ್ತದೆ. ದ್ವಿತೀಯ ಜಾಗತಿಕ ಸಮರದಲ್ಲಿ ಭಾಗಿಯಾಗಿದ್ದ ಅವರು ಸಮರದ ಪ್ರತ್ಯಕ್ಷ ಅನುಭವಗಳನ್ನು ತಮ್ಮ ಬರಹಗಳಲ್ಲಿ ದಾಖಲಿಸಿದ್ದಾರೆ. ತನ್ನ ಅಳಿವು ಉಳಿವಿನ ಪ್ರಶ್ನೆ ಎದುರಾದಾಗ ಮನುಷ್ಯ ಎಷ್ಟು ಕ್ರೂರಿ ಮತ್ತು ಸ್ವಾರ್ಥಿಯಾಗುತ್ತಾನೆ ಎಂಬುದನ್ನು ಬಿಂಬಿಸುವ ಈ ಲೇಖನದಲ್ಲಿ ಗಿಬ್ಸನ್ನರು ಮನುಷ್ಯ ಸ್ವಭಾವದ ಮತ್ತೊಂದು ಮುಖದ ಪರಿಚಯವನ್ನು ನೀಡುತ್ತಾರೆ. ಕೋವಿಯನ್ನು ಬಳಸುವುದರಲ್ಲಿ ಪರಿಣತವಾಗಿದ್ದ ಅವರ ಕೈ ಬರಹದಲ್ಲೂ ಪರಿಣತವಾಗಿತ್ತೆಂಬುದಕ್ಕೆ ಈ ಬರಹವೇ ಸಾಕ್ಷಿ.*

*SECRETS AND STORIES OF THE WAR - VOL I ಗ್ರಂಥದಲ್ಲಿನ ವಾಲ್ಟರ್ ನಿಬ್ಸನ್ನರ 'THE DEATH IN THE LIFE BOAT" ಲೇಖನದ ಸಂಗ್ರಹಾನುವಾದವಿದು.*

**1939ರ** ಸೆಪ್ಟೆಂಬರ್ ತಿಂಗಳು. ಯೂರೋಪಿನಲ್ಲಿ ದ್ವಿತೀಯ ವಿಶ್ವ ಸಮರದ ಕಿಡಿ ಹಾರಿತು. 1939ರ ಸೆಪ್ಟೆಂಬರ್ ಮೂರರಂದು ಹನ್ನೊಂದು ಗಂಟೆಗೆ ಬ್ರಿಟನ್ ಜರ್ಮನಿಯ ಮೇಲೆ ಯುದ್ಧ ಸಾರಿತು.

ಎರಡನೆ ಮಹಾಯುದ್ಧ ಆರಂಭವಾದ ಮೊದಲ ದಿನವೇ ರಾತ್ರಿ, ಒಂಬತ್ತು ಗಂಟೆಗೆ ಜರ್ಮನಿಯ ಜಲಾಂತರ್ಗಾಮಿ ನೌಕೆಯೊಂದು ಹೆಬ್ರಿಸ್ ಬಳಿ 'ಅಥೇನಿಯ' ಬ್ರಿಟಿಷ್ ಯುದ್ಧ ನೌಕೆಯೊಂದು ಮುಳುಗಿಸಿದ್ದರಿಂದ ಅದರಲ್ಲಿದ್ದ ನೂರ ಹನ್ನೆರಡು ಮಂದಿಯ ಜಲ ಸಮಾಧಿಯಾಯಿತು.

1939 ಸೆಪ್ಟಂಬರ್ ಒಂಬತ್ತರಂದು ಪೋಲೆಂಡ್ ಜರ್ಮನಿಯ ಆಕ್ರಮಣಕ್ಕೆ ಬಲಿಯಾಯಿತು. ಅನಂತರ ಸರದಿಯಂತೆ ನಾರ್ವೆ, ಹಾಲೆಂಡ್, ಬೆಲ್ಜಿಯಂ ದೇಶಗಳ ಪತನ. ಆಸ್ಟ್ರಿಯಾ, ಆಲ್ಬೇನಿಯಾ, ಜೆಕೊಸ್ಲೊವಾಕಿಯಾ ದೇಶಗಳು ಇಟಲಿಯ ಪಾಲಾದವು. 1940ರ ಜೂನ್ ಹತ್ತರಂದು ಪ್ಯಾರಿಸ್ ಜರ್ಮನಿಯ ವಶವಾಗಿ ಬ್ರಿಟಿಷ್ ಫ್ರೆಂಚ್ ಸೇನೆಗಳು ಧೂಳಿಪಟವಾದವು. ಎಲ್ಲೆಲ್ಲಿಯೂ ಜರ್ಮನಿಯ ವಿಜಯ ಪತಾಕೆ ಹಾರಲಾರಂಭಿಸಿತು.

1941ರ ಡಿಸೆಂಬರ್ ಏಳರಂದು ಜಪಾನ್ ಅಮೇರಿಕದ ಪರ್ಲ್ ಹಾರ್ಬರಿನ ಮೇಲೆ

ಹಠಾತ್ ದಾಳಿ ನಡೆಸಿ ಅಮೇರಿಕದ ನೌಕಾ ಬಲವನ್ನು ನಿರ್ನಾಮಗೊಳಿಸಿತು. ಆಸ್ಟ್ರೇಲಿಯದ ಸುತ್ತಮುತ್ತಣ ನ್ಯೂಗಿನಿ ಮೊದಲಾದ ದ್ವೀಪಗಳು ಜಪಾನಿಯರ ವಶವಾದವು.

ಫಿಲಿಫೈನ್ಸ್ ಜಪಾನಿಯರ ವಶವಾದಾಗ ಬ್ರಿಟಿಷ್ ವಸಾಹತುಗಳಾಗಿದ್ದ ಮಲಯ-ಸಿಂಗಪುರಗಳಿಗೆ ಆಕ್ರಮಣದ ಭಯ ತೋರಿತು. 1942ರ ಫೆಬ್ರುವರಿ ಹದಿಮೂರನೆಯ ತಾರೀಖು ರಾತ್ರಿ ಜಪಾನಿ ಯುದ್ಧ ವಿಮಾನಗಳು ಸಿಂಗಪುರ ಮತ್ತು ಸುತ್ತಮುತ್ತಲ ದ್ವೀಪಗಳ ಮೇಲೆ ಬಾಂಬ್ ದಾಳಿ ನಡೆಸಿದವು. ಮೂರನೆಯ ದಿನ ಫೆಬ್ರುವರಿ ಹದಿನಾಲ್ಕರಂದು, ಸಿಂಗಪುರದ ರಕ್ಷಣೆಯ ಬೆನ್ನೆಲುಬಾಗಿದ್ದ 'ಪ್ರಿನ್ಸ್ ಆಫ್ ವೇಲ್ಸ್' ಮತ್ತು 'ರಿಪಲ್ಸ್' ಬ್ರಿಟಿಷ್ ಯುದ್ಧ ನೌಕೆಗಳು ಬಾಂಬ್ ದಾಳಿಗೆ ತುತ್ತಾಗಿ ಸಮುದ್ರ ಪಾಲಾದವು. ಬ್ರಿಟಿಷ್ ವಿಮಾನ ಬಲ ಜಪಾನಿಯರ ಆಕ್ರಮಣವನ್ನು ತಡೆಗಟ್ಟುವಲ್ಲಿ ವಿಫಲವಾಯಿತು.

'ರಾಸೆಬುಮ್' ಎಂಬ ಡಚ್ ನೌಕೆ ಸುಮಾತ್ರದ ಪಾಡುಂಗ್ ಬಂದರಿನಿಂದ ಹೊರಟು ಆಗಲೇ ಮೂರು ದಿನಗಳಾಗಿತ್ತು. ಸಿಂಗಪುರ ಮಲಯಗಳು ಜಪಾನಿಯರ ವಶವಾಗುವುದು ನಿಶ್ಚಿತವಾದಾಗ ಸಿಂಗಪುರದ ರಕ್ಷಣೆಗಿದ್ದ ಬ್ರಿಟಿಷ್ ಪಡೆಗಳನ್ನು ತುರ್ತಾಗಿ ಸುಮಾತ್ರಕ್ಕೆ ರವಾನಿಸಲಾಯಿತು. ಈ ಪಡೆಗಳಲ್ಲಿ ಒಂದು ಭಾಗವನ್ನು ರಾಸೆಬುಮ್ ನೌಕೆಯಲ್ಲಿ ಪಯಣಿಸಲು ವ್ಯವಸ್ಥೆ ಮಾಡಲಾಗಿತ್ತು. ಅಲ್ಲದೆ ಸಿವಿಲ್ ಸರ್ವಿಸ್ ನೌಕರರು, ಅವರ ಪರಿವಾರದವರು ಮತ್ತು ಮಲಯನ್ ನಿರಾಶ್ರಿತರೇ ಮೊದಲಾಗಿ ಐದು ನೂರು ಮಂದಿಯನ್ನು ಹೊತ್ತು ರಾಸೆಬುಮ್ ಭಾರತಾಭಿಮುಖವಾಗಿ ಸಾಗಿತ್ತು. ಜಾವಾ, ಸುಮಾತ್ರ ದ್ವೀಪಗಳು ಯಾವ ಗಳಿಗೆಯಲ್ಲಾದರೂ ಜಪಾನಿಯರ ವಶವಾಗುವ ಸಂಭವವಿತ್ತು.

ಹಡಗಿನ 'ಪ್ರಯಾಣಿಕರ' ಮುಖಗಳಲ್ಲಿ ಹತಾಶೆ, ಭೀತಿ, ಗಾಬರಿಗಳು ತಾಂಡವಾಡುತ್ತಿದ್ದುವು. ಜಪಾನಿಗಳ ಆಕ್ರಮಣ ಸನ್ನಿಹಿತವಾದೊಡನೆ ಅವರೆಲ್ಲರನ್ನೂ ತುರ್ತಾಗಿ ಪಾಡುಂಗಿಗೆ ರವಾನಿಸಲಾಗಿತ್ತು. ತಮ್ಮೆಲ್ಲ ಸಾಧನ-ಸಂಪತ್ತನ್ನು ಹಿಂದೆ ಬಿಟ್ಟು ಕೈಗೆ ಸಿಕ್ಕಿದಷ್ಟನ್ನು ಎಳೆದುಕೊಂಡು ಹಡಗನ್ನೇರಲು ಓಡಿ ಬಂದ ಅವರೆಲ್ಲ ಇಡಿಯ ಬದುಕಿನ ಗಳಿಕೆಯನ್ನು ಒಮ್ಮೆಗೇ ಕಳೆದುಕೊಂಡವರಂತೆ ಹತಾಶರಾಗಿದ್ದರು. ಬಹುತೇಕ ಪ್ರಯಾಣಿಕರು ಹಡಗು ತನ್ನ ಗಮ್ಯ ಸ್ಥಾನವನ್ನು ಸೇರುವುದರ ಬಗ್ಗೆಯೇ ಸಂಶಯಿತರಾಗಿ ಚಿಂತಾಕುಲರಾಗಿದ್ದರು.

ಶಾಂತವಾಗಿದ್ದ ಆ ಸಮುದ್ರದ ಮೇಲೆ ತೇಲುತ್ತಿದ್ದ ಹಡಗಿನಲ್ಲಿದ್ದ ಪ್ರಯಾಣಿಕರ ಮನಸ್ಸು ಮಾತ್ರ ಪ್ರಕ್ಷುಬ್ಧವಾಗಿತ್ತು. ಮಧ್ಯರಾತ್ರಿ ಸಮೀಪಿಸುತ್ತಿದ್ದಂತೆ ಬಹುತೇಕ ಪ್ರಯಾಣಿಕರು ನಿದ್ರಾವಶರಾದರು. ಕೆಲವರು ಪುಟ್ಟ ಬೈಬಲ್ ಪವಿತ್ರ ಗ್ರಂಥಗಳನ್ನು ತೆರೆದಿಟ್ಟುಕೊಂಡು ಪಠಿಸುತ್ತಿದ್ದರು. ಒಂದಿಬ್ಬರು ಮಲಯನ್ ಮೂಲದ ಮುಸ್ಲಿಮ್ ಬೆಸ್ತರು ಹಡಗಿನ ಮೂಲೆಯಲ್ಲಿ ನಮಾಜ್ ಮಾಡುತ್ತಿದ್ದರು. ಇವರೆಲ್ಲರ ಉದ್ದೇಶ ಹಡಗು ಸುರಕ್ಷಿತವಾಗಿ ತನ್ನ ಗುರಿಯನ್ನು ಸೇರಲೆಂಬುದೇ ಆಗಿತ್ತು. ಆದರೆ ಏನಲ್ಲಾ ಆಗಬಾರದೆಂದು ಪ್ರಯಾಣಿಕರು ಮನದಲ್ಲೇ ದೇವರನ್ನು ಪ್ರಾರ್ಥಿಸುತ್ತಿದ್ದರೋ ಅದು ನಡದೇ ಹೋಯಿತು.

ಮಧ್ಯರಾತ್ರಿಗೆ ಇನ್ನೂ ಹತ್ತು ನಿಮಿಷಗಳಿದ್ದುವು. ಮಾರ್ಚ್ 1942ರ ಭಾನುವಾರ ಒಂಬತ್ತನೆಯ ದಿನಾಂಕ ನಿಧಾನವಾಗಿ ಸಮೀಪಿಸುತ್ತಿತ್ತು. ಇದ್ದಕ್ಕಿದ್ದಂತೆ ಹಡಗಿನ ತಳದಲ್ಲಿ ಭಾರಿ ಆಸ್ಫೋಟವಾಯಿತು. ನೌಕೆ ಎರಡು ಹೋಳಾಗಿ ಬಿರಿಯಿತು. ನೀರು ರಭಸದಿಂದ ಹಡಗಿನೊಳಗೆ ನುಗ್ಗಲಾರಂಭಿಸಿತು. ಸುಖ ನಿದ್ರೆಯಲ್ಲಿದ್ದ ನೂರಾರು ಮಂದಿ ಪ್ರಯಾಣಿಕರು ತಮಗರಿವಿಲ್ಲದಂತೆ ಸಮುದ್ರಕ್ಕೆ ಎಸೆಯಲ್ಪಟ್ಟರು.

ನಿದ್ರೆಯಲ್ಲಿದ್ದ ಇನ್ನು ಕೆಲವರಿಗೆ ಇದೆಲ್ಲ ಏನಾಯಿತೆಂದು ತಿಳಿಯುವುದಕ್ಕೆ ಮೊದಲೇ ಜಲಸಮಾಧಿಯಾದರು. ಕೆಲವರು ಕತ್ತಲಲ್ಲಿ ಕೈಗೆ

ಸಿಕ್ಕಿದ ಮುರಿದ ಹಡಗಿನ ಹಲಗೆಗಳನ್ನು ಹಿಡಿದುಕೊಂಡು ಜೀವ ಉಳಿಸಿಕೊಳ್ಳಲು ಹೆಣಗಾಡುತ್ತಿದ್ದರು. ಹೀಗೆ ಹೆಣಗಾಡುತ್ತಿದ್ದ ಅಸಹಾಯಕ ಹೆಂಗಸರು, ಮಕ್ಕಳು ಮತ್ತು ಮುದುಕರ ಆರ್ತನಾದ ಕರುಳು ಕಿವಿಚುವಂತಿತ್ತು. ಗಾಬರಿಯಿಂದ ಕಂಗೆಟ್ಟು ಏಕಾರವಾಗಿ ಕಿರುಚುತ್ತಿದ್ದ ಪ್ರಯಾಣಿಕರಿಂದಾಗಿ ಕೆಲವೇ ನಿಮಿಷಗಳ ಹಿಂದಷ್ಟೇ ಪ್ರಶಾಂತವಾಗಿದ್ದ ಸಾಗರದ ಮೌನಕ್ಕೆ ಭಂಗ ಬಂತು.

ಶತ್ರುಗಳ ಜಲಾಂತರ್ಗಾಮಿ ಟಾರ್ಪೆಡೊ ಆ ಮಧ್ಯರಾತ್ರಿಯಲ್ಲಿ ರಾಸೆಬುಮ್ ನೌಕೆಯನ್ನು ಆಸ್ಫೋಟಿಸಿತ್ತು. ಆ ಅದೃಷ್ಟಹೀನ ನೌಕೆಯಲ್ಲಿ ಪ್ರಯಾಣಿಸುತ್ತಿದ್ದ ವಾಲ್ಟರ್ ಗಿಬ್ಸನ್ನರ ಮುಖದಿಂದಲೇ ಮುಂದಿನ ಕತೆಯನ್ನು ಕೇಳೋಣ.

''ಫಿಲಿಫೈನ್ಸ್ ಜಪಾನಿಯರ ವಶವಾಗುವುದೆಂದು ನಾವು ಕನಸುಮನಸಿನಲ್ಲಿಯೂ ನೆನೆಸಿರಲಿಲ್ಲ. ಸಿಂಗಪುರದ ರಕ್ಷಣೆಗಿದ್ದ ನಮ್ಮ ಪಡೆಯನ್ನು ಭಾರತಕ್ಕೆ ಹಿಂದಕ್ಕೆ ಕರೆಸಿಕೊಳ್ಳಲು ಆದೇಶ ಬಂದಿತ್ತು. ಮಲಯಾ, ಸಿಂಗಪುರಗಳು ಜಪಾನಿಯರ ವಶವಾದರೆ ಶತ್ರುಗಳು ಭಾರತದ ಬಾಗಿಲಿಗೇ ಬಂದಂತೆ. ಬರ್ಮಾದ ಗಡಿಯನ್ನು ಭದ್ರಪಡಿಸುವುದು ಅತ್ಯಗತ್ಯವಾಗಿತ್ತು. ಸಿಂಗಪುರದಿಂದ ಭಾರತಕ್ಕೆ ಹೊರಡಲು ಸಾಕಷ್ಟು ನೌಕೆಗಳು ಲಭ್ಯವಿರಲಿಲ್ಲ. ಸುಮಾತ್ರಾದ ಪಾಡಂಗಿನಿಂದ ಭಾರತಕ್ಕೆ ಹೊರಡಲಿದ್ದ 'ರಾಸೆಬುಮ್' ಎಂಬ ನೌಕೆಯಲ್ಲಿ ನಮ್ಮ ಪಡೆಗಳ ಒಂದು ವಿಭಾಗಕ್ಕೆ ಪ್ರಯಾಣ ಮಾಡಲು ವ್ಯವಸ್ಥೆ ಮಾಡಲಾಗಿತ್ತು.

''ಹಡಗಿನಲ್ಲಿ ಸಾಮಾನ್ಯ ಅದರ ಮಿತಿಯನ್ನು ಮೀರಿ ಪ್ರಯಾಣಿಕರಿದ್ದರು. ಅಲ್ಲೆಲ್ಲ ಅವ್ಯವಸ್ಥೆಯ ತಾಂಡವವಾಡುತ್ತಿತ್ತು. ಆ ತುರ್ತುಪರಿಸ್ಥಿತಿಯಲ್ಲಿ ಅವ್ಯವಸ್ಥೆಯ ಬಗ್ಗೆ ದೂರಲು ಯಾರಿಗೂ ವ್ಯವಧಾನವಿರಲಿಲ್ಲ. ಹೇಗೋ ಜೀವ ಉಳಿಸಿಕೊಂಡು ಅಲ್ಲಿಂದ ಪಾರಾಗುವುದೇ ಎಲ್ಲರ ಗುರಿಯಾಗಿತ್ತು. ಹಡಗು ಪಾಡಂಗ್ ಬಿಟ್ಟು ಆಗಲೇ ಮೂರು ದಿನಗಳಾಗಿದ್ದವು.

''ಯೂರೋಪಿನಲ್ಲಿ ಸಂಭವಿಸುತ್ತಿದ್ದ ಮಿತ್ರರಾಷ್ಟ್ರಗಳ ಸೇನೆಯ ಸೋಲಿನ ಸುದ್ದಿಯಿಂದ ನಾನು ಚಿಂತಿತನಾಗಿದ್ದೆ. ಜತೆಗೆ ಮನೆ ಮಂದಿಯ ಬಗೆಗಿನ ಕಾಳಜಿಯೂ ಮನಸ್ಸನ್ನು ಕೊರೆಯುತ್ತಿತ್ತು. ಸಾಗರ ಪ್ರಶಾಂತವಾಗಿತ್ತು. ಆಕಾಶದಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರಗಳು ಮಿನುಗುತ್ತಿದ್ದವು. ಮಲಗುವ ಮುನ್ನ ಕೆಲವು ನಿಮಿಷ ಮೌನವಾಗಿ ದೇವರನ್ನು ಪ್ರಾರ್ಥಿಸಿ ಡೆಕ್ಕಿನ ಮೇಲೆ ಮಲಗಿದೆ. ದಣಿದ ಮೈಮನಗಳನ್ನು ನಿದ್ರೆ ಆವರಿಸಿದುದೇ ತಿಳಿಯಲಿಲ್ಲ.

''ಆದರೆ ಎಸೆಯಲ್ಪಟ್ಟ ನಾನು ಹಠಾತ್ತನೆ ಎಚ್ಚರಗೊಂಡೆ. ನೀರಿನಲ್ಲಿ ಮುಳುಗೇಳುತ್ತಿದ್ದ ಪ್ರಯಾಣಿಕರ ಆರ್ತನಾದ, ಕಿರುಚಾಟವನ್ನು ಕೇಳಿ ಏನಾಗಿರಬಹುದೆಂದು ಊಹಿಸಲು ಸ್ವಲ್ಪ ಸಮಯವೇ ಹಿಡಿಯಿತು. ನನ್ನ ಸಮೀಪದಲ್ಲಿ ಬೆತ್ತಲೆ ವ್ಯಕ್ತಿಯೊಬ್ಬ ಹಡಗಿನ ಮುರಿದ ಹಲಗೆಯೊಂದನ್ನು ಹಿಡಿದುಕೊಂಡು ನೇತಾಡುತ್ತಿದ್ದ. ಆ ಹಲಗೆಯ ಮತ್ತೊಂದು ತುದಿಯನ್ನು ಹಿಡಿದು ನಾನೂ ನೇತಾಡತೊಡಗಿದೆ. ಹೀಗೇ ಒಂದು ಗಂಟೆಯ ಕಾಲ ನಾವಿಬ್ಬರೂ ನೇತಾಡುತ್ತಿದ್ದವೇನೋ.

''ಸನಿಹದಲ್ಲಿ ಜೀವರಕ್ಷಕ ದೋಣಿಯೊಂದರಲ್ಲಿ ಜನರು ನಿಂತಿರುವುದು ಆ ಕತ್ತಲಲ್ಲಿ ಅಸ್ಪಷ್ಟವಾಗಿ ಗೋಚರಿಸಿತು. ಜನರು ದೋಣಿಯನ್ನು ಹತ್ತಲು ಒಬ್ಬರೊಡನೊಬ್ಬರು ಹೋರಾಡುತ್ತಿದ್ದರು. ಸ್ವಲ್ಪ ಹೊತ್ತಿಗೆ ಒಬ್ಬೊಬ್ಬರನ್ನಾಗಿ ನಮ್ಮೆಲ್ಲರನ್ನೂ ದೋಣಿಯೊಳಕ್ಕೆ ಎಳೆದುಕೊಳ್ಳಲಾಯಿತು. ಆ 'ತೇಲುವ ನರಕ'ದ ಮೇಲೆ ಮುಂದಿನ ದಾರುಣವಾದ ಇಪ್ಪತ್ತಾರು ದಿನಗಳನ್ನು ಹೇಗೆ ಕಳೆದೆನೋ ಎಂದು ನನಗೆ ಅಚ್ಚರಿಯಾಗುತ್ತದೆ.

''ನಾವಿದ್ದ ದೋಣಿ ಇಪ್ಪತ್ತೆಂಟು ಅಡಿಗಳಷ್ಟು ಉದ್ದವಿದ್ದು ಎಂಟು ಅಡಿಗಳಷ್ಟು ಅಗಲವಾಗಿತ್ತು. ಬೆಳಗಿನ ಜಾವದಲ್ಲಿ ದೋಣಿಯಲ್ಲಿದ್ದ ಜನರನ್ನು ಎಣಿಸಿದಾಗ ಒಟ್ಟು ಎಂಬತ್ತು ಜನರಿದ್ದುದು ಕಂಡು ಬಂತು. ಇಪ್ಪತ್ತೆಂಟು

ಮಂದಿ ಪ್ರಯಾಣಿಕರು ಮಾತ್ರ ಕೂಡಬಹುದಾಗಿದ್ದ ಆ ದೋಣಿಯಲ್ಲಿ ಎಂಬತ್ತು ಜನ ತುರುಕಲ್ಪಟ್ಟಿದ್ದರು. ದೋಣಿಯಲ್ಲಿದ್ದವರೆಲ್ಲಾ ಮುಖಾಮುಖಿಯಾಗಿಯೋ ಬೆನ್ನಿಗೆ ಬೆನ್ನು ಕೊಟ್ಟುಕೊಂಡೋ ನಿಂತಿದ್ದರು. ನಿಂತ ಸ್ಥಳದಿಂದ ಕದಲುವ ಮಾತಂತೂ ದೂರವೇ. ನೌಕಾಘಾತದಲ್ಲಿ ಉಳಿದುಕೊಂಡಿದ್ದ ಇನ್ನೂ ಐವತ್ತೈದು ಜನ ನಮ್ಮ ದೋಣಿಯ ಹೊರಭಾಗದ ಅಂಚನ್ನು ಹಿಡಿದುಕೊಂಡು ಸುತ್ತಲೂ ಜೋತು ಬಿದ್ದಿದ್ದರು. ಅವರೆಲ್ಲಾ ಎದೆಯವರೆಗೂ ನೀರಿನಲ್ಲಿ ಮುಳುಗಿದ್ದರು.

''ಮುಳುಗಿ ಹೋದ ರಾಸಬುಮ್ ನೌಕೆಯ ಡಚ್ ಕ್ಯಾಪ್ಟನ್ ಕೆಂಪುಮೂತಿಯ ಧಡೂತಿ ಆಸಾಮಿ. ದೋಣಿಯ ಚುಕ್ಕಾಣಿಯನ್ನು ಆತನೇ ಹಿಡಿದು ನಿಂತಿದ್ದ. ದೋಣಿಯಲ್ಲಿದ್ದ ಮತ್ತೊಬ್ಬ ಪ್ರಮುಖ ವ್ಯಕ್ತಿ ಹನ್ನೊಂದನೇ ಭಾರತೀಯ ಸೇನಾವಿಭಾಗದ ಬ್ರಿಗೆಡಿಯರ್ ಪ್ಯಾರಿಸ್. ಆತ ಮೇಲಂಗಿಯನ್ನು ಮಾತ್ರ ತೊಟ್ಟಿದ್ದರಿಂದ ಅಂಗಿಯ ಕೆಳಗೆ ಆತನ ಬೆತ್ತಲ ಕಾಲುಗಳು ಕಾಣಿಸುತ್ತಿದ್ದುವು. ನಮ್ಮೊಂದಿಗೆ ಮೂವರು ಮಹಿಳೆಯರೂ ಇದ್ದರು. ಅವರಲ್ಲಿ ಶ್ರೀಮತಿ ನನ್ ಎಂಬುವರು ಸಿಂಗಪುರದಲ್ಲಿನ ಕಾಮಗಾರಿ ಇಲಾಖೆಯ ಅಧಿಕಾರಿಯೊಬ್ಬರ ಪತ್ನಿ. ಮತ್ತೊಬ್ಬಾಕೆ ಡಚ್ ನೌಕೆಯ ಚೀಫ್ ಆಫೀಸರನೊಬ್ಬನ ಮೂವತ್ತರ ಪ್ರಾಯದ ಹೆಂಡತಿ. ಮೂರನೆಯಾಕೆ ಬ್ರಿಟಿಷ್ ಗುಪ್ತಚರ ವಿಭಾಗದಲ್ಲಿ ಕಾರ್ಯನಿರತಳಾಗಿದ್ದ ತೆಳು ದೇಹದ ಚೀನೀ ಯುವತಿ ಡೋರಿಸ್‌ಲಿಮ್. ದೋಣಿಯ ಅಡ್ಡ ಕಂಬಿಯನ್ನೊರಗಿಕೊಂಡು ಹನ್ನೆರಡು ಮಂದಿ ಬೆಸ್ತರು ನಿಂತಿದ್ದರು. ಅವರೆಲ್ಲ ಜಾವಾದವರು.

''ಬ್ರಿಗೇಡಿಯರ್ ಪ್ಯಾರಿಸ್ ಪರೇಡ್ ಮೈದಾನದಲ್ಲಿ ಸೈನಿಕರನ್ನುದ್ದೇಶಿಸಿ ಹೇಳುವ ರೀತಿಯಲ್ಲಿ, ಕಾಲುಗಳನ್ನು ಜೋಡಿಸಿ ನೇರವಾಗಿ ನಿಂತು, 'ಎಲ್ಲರೂ ಕೇಳಿ ದೋಣಿಯ ಸಂಪೂರ್ಣ ಹೊಣೆಗಾರಿಕೆ ಕ್ಯಾಪ್ಟನ್ನರಿಗೆ ಸೇರಿದ್ದು. ಆಹಾರ ವಿತರಣೆ ಮತ್ತು ಶಿಸ್ತನ್ನು ಕಾಪಾಡುವ ಹೊಣೆ ನನ್ನದು. ಬೇರೆ ನೆರವು ನಮಗೆ ಬರುವವರೆಗೂ ನಾವೆಲ್ಲರೂ ಶಿಸ್ತಿನಿಂದ ಮತ್ತು ಸೋದರ-ಭಾವದಿಂದ ವರ್ತಿಸಬೇಕು,' ಎಂದು ಅಪ್ಪಣೆ ಕೊಡಿಸಿದರು. ಎರಡು ಜಾಗತಿಕ ಸಮರಗಳಲ್ಲಿ ಭಾಗವಹಿಸಿ ಅಪಾರ ಅನುಭವ ಗಳಿಸಿದ್ದ ಬ್ರಿಗೇಡಿಯರ್ ಪ್ಯಾರಿಸ್ ಶಿಸ್ತಿಗೆ ಹೆಸರುವಾಸಿಯಾದವರೆಂದು ಭಾರತೀಯ ಸೇನೆಯಲ್ಲಿ ಸೇವೆಯಲ್ಲಿದ್ದ ನಮಗೆ ಮೊದಲೇ ತಿಳಿದಿತ್ತು. ಆದರೆ ಅಂಥ ಪರಿಸ್ಥಿತಿಯಲ್ಲಿಯೂ ಶಿಸ್ತನ್ನು ಪಾಲಿಸುವ ಅವರ ಮನೋಗುಣವನ್ನು ಕಂಡು ನಮಗೆಲ್ಲಾ ಬೆರಗಾಯಿತು.

''ದೋಣಿಯಲ್ಲಿನ ಆಹಾರ ಸಂಗ್ರಹದಲ್ಲಿ ಕುಡಿಯುವ ನೀರು ತುಂಬಿದ್ದ ನಾಲ್ಕು ಬಾಟಲಿಗಳಿದ್ದುವು. ಸೂರ್ಯ ಮೇಲೇರಿದಾಗ ಒಬ್ಬೊಬ್ಬರಿಗೆ ಒಂದೊಂದು ಚಮಚೆಯಷ್ಟು ನೀರನ್ನು ಕುಡಿಯಲು ಕೊಡಲಾಗುತ್ತಿತ್ತು. ಸಂಜೆಗೆ ಇನ್ನೊಂದು ಚಮಚೆ ಕುಡಿಯುವ ನೀರು ಮತ್ತು ಒಂದು ಚಮಚೆ ಡಬ್ಬದ ಹಾಲು. ಹನ್ನೆರಡು ಔನ್ಸ್ ದನದ ಮಾಂಸದ ಒಂದು ಡಬ್ಬಿಯನ್ನು ಹಂಚಿಕೊಂಡು ತಿನ್ನಲು ಹನ್ನೆರಡು ಮಂದಿಗೆ ಕೊಡಲಾಗುತ್ತಿತ್ತು. ಮುಂದೆ ನಮ್ಮ ನೆರವಿಗೆ ಸಹಾಯ ಬರುವವರೆಗೆ ದೋಣಿಯಲ್ಲಿ ಲಭ್ಯವಿದ್ದ ಮಿತವಾದ ಆಹಾರ ಮತ್ತು ಸಿಹಿನೀರಿನ ಸಂಗ್ರಹಣೆಯ ಮೇಲೆಯೇ ದೋಣಿಯಲ್ಲಿದ್ದವರೆಲ್ಲ ಬದುಕುಳಿಯಬೇಕಾದ್ದರಿಂದ ಆದಷ್ಟು ಮಿತವಾಗಿ ಆಹಾರ ಸಂಗ್ರಹವನ್ನು ಬಳಸಿಕೊಳ್ಳಬೇಕಾಗಿತ್ತು.

''ಆ ಅಸಾಧ್ಯ ಜನಸಂದಣಿಯನ್ನು ಆದಷ್ಟು ತಗ್ಗಿಸುವ ಸಲುವಾಗಿ ಗಾಯಗೊಳ್ಳದೆ ಗಟ್ಟಿಮುಟ್ಟಾಗಿದ್ದ ಪ್ರತಿಯೊಬ್ಬನೂ ಸರದಿಯಂತೆ ದಿನಕ್ಕೆ ನಾಲ್ಕು ಗಂಟೆಗಳವರೆಗೆ ಕಡ್ಡಾಯವಾಗಿ ದೋಣಿಯ ಹೊರಮೈ ಅಂಚನ್ನು ಹಿಡಿದುಕೊಂಡು ನೇತಾಡುತ್ತಿರಬೇಕೆಂಬ ನಿಯಮವನ್ನು ಪ್ಯಾರಿಸರು ತುರ್ತಾಗಿ ಜಾರಿ ಮಾಡಿದರು.

''ಸಂಜೆಯ ಹೊತ್ತಿಗೆ ಮುರಿದ ಹಡಗಿನ

ಹಲಗೆಗಳಿಂದ ಅಡ್ಡಾದಿಡ್ಡಿಯಾಗಿ ಕಟ್ಟಿದ್ದ ತೆಪ್ಪವೊಂದು ತೇಲುತ್ತಾ ನಮ್ಮ ದೋಣಿಯನ್ನು ಸಮೀಪಿಸಿತು. ಅದರಲ್ಲಿನ ಇಂಡಿಯನ್ ಆರ್ಡ್‌ನನ್ಸ್ ಕೋರ್‌ಗೆ ಸೇರಿದ ಲೆಫ್ಟಿನೆಂಟ್ ಕರ್ನಲ್ ಡಗ್ಲಸ್ ತೆಪ್ಪದಿಂದ ಈಜಿಕೊಂಡು ದೋಣಿಯ ಬಳಿ ಬಂದರು. ತಮ್ಮನ್ನು ದೋಣಿಯೊಳಗೆ ಎಳೆದುಕೊಂಡ ಕೂಡಲೆ ಡಗ್ಲಸ್ ಆಯಾಸದಿಂದ ಕುಸಿದು ಬಿದ್ದರು. ತೆಪ್ಪದ ಮೇಲಿದ್ದ ಇನ್ನಿಬ್ಬರನ್ನೂ ದೋಣಿಯೊಳಗೆ ಎಳೆದುಕೊಳ್ಳಲಾಯಿತು. ಅವರಲ್ಲಿ ನೌಕಾಘಾತವಾದಾಗ ಆ ಸ್ಫೋಟದಲ್ಲಿ ಕಾಲೊಂದನ್ನು ಕಳೆದುಕೊಂಡಿದ್ದ ಇಂಗ್ಲಿಷ್ ಮಹಿಳೆಯೊಬ್ಬಳು ಆಗಲೋ ಈಗಲೋ ಕೊನೆಯುಸಿರೆಳೆಯುವ ಸ್ಥಿತಿಯಲ್ಲಿದ್ದಳು. ಮತ್ತೊಬ್ಬ ಮೇಜರ್ ಅಂಗಸ್ ಮ್ಯಾಕ್ ಡೊನಾಲ್ಡ್. ಹೇಗೋ ಆತನ ಬಳಿ ಬ್ರಾಂದಿಯ ಬಾಟಲಿಯೊಂದನ್ನು ಉಳಿದುಕೊಂಡಿತ್ತು. ದಾಹದಿಂದ ಕಂಗೆಟ್ಟಿದ್ದ ಆತ ಬ್ರಾಂದಿಯನ್ನು ಕುಡಿಯುತ್ತಲೇ ದಿನವನ್ನು ಕಳೆದಿದ್ದ. ಸುಡು ಬಿಸಿಲಲ್ಲಿ ಮಿತಿ ಮೀರಿ ಬ್ರಾಂದಿಯನ್ನು ಕುಡಿದುದರ ಪರಿಣಾಮವಾಗಿ ಆತ ಅರೆ ಹುಚ್ಚನಾಗಿದ್ದ. ತೆಪ್ಪದ ಮೇಲಿನಿಂದ ಡಗ್ಲಸ್‌ರನ್ನು ಸಮುದ್ರಕ್ಕೆ ತಳ್ಳಲು ಅನೇಕ ಸಲ ಮ್ಯಾಕ್ ಪ್ರಯತ್ನಿಸಿದ್ದ. ದೋಣಿಯಲ್ಲಿ ಆತನ ಹುಚ್ಚಾಟ ಅತಿಯಾಯಿತು. ಸುತ್ತಲಿದ್ದವರೆದುರು ತಾನು ಇದುವರೆಗೆ ಪಟ್ಟ ಬವಣೆಯನ್ನು ಹೇಳುತ್ತ ಇದ್ದಕ್ಕಿದ್ದಂತೆ ಹುಚ್ಚನಂತೆ ಜೋರಾಗಿ ಕಿರುಚುತ್ತಿದ್ದ. ಇಂಗ್ಲಿಷಿನಲ್ಲಿ ಮಾತನಾಡಲಾರಂಭಿಸಿ ಉರ್ದುವಿನಲ್ಲಿ ಮಾತು ಮುಗಿಸುತ್ತಿದ್ದ. ಕೊನೆಗೆ ತನ್ನ ಸುತ್ತಲಿದ್ದವರನ್ನೆಲ್ಲ ಹೊಡೆಯುವ ಮಟ್ಟಕ್ಕೆ ಆತನ ಹುಚ್ಚು ಹೆಚ್ಚಿದಾಗ ದೋಣಿ ಬುಡಮೇಲಾಗುವುದನ್ನು ತಪ್ಪಿಸುವ ಸಲುವಾಗಿ ಯಾರೋ ಅವನನ್ನು ನೀರಿಗೆ ತಳ್ಳಿದರು.

''ದೋಣಿಯಲ್ಲಿನ ಜನಸಂದಣಿಯನ್ನು ಆದಷ್ಟು ತಗ್ಗಿಸುವ ಸಲುವಾಗಿ ಮೇಜರ್ ನಯಿಲ್ ಕೋರೆ ಮತ್ತು ಕೆಲವು ಪ್ರಯಾಣಿಕರು ಸಮುದ್ರದಲ್ಲಿ ತೇಲುತ್ತಿದ್ದ ಮುರಿದ ಹಡಗಿನ ಹಲಗೆಗಳು ತಗಡುಗಳು ಮತ್ತು ಹಗ್ಗಗಳಿಂದ ಒಂದು ತೆಪ್ಪವನ್ನು ತಯಾರಿಸಿದರು. ಆ ತೆಪ್ಪವನ್ನು ಹಗ್ಗದಿಂದ ದೋಣಿಯ ಹಿಂಭಾಗಕ್ಕೆ ಕಟ್ಟಿದರು. ದೋಣಿಯಲ್ಲಿದ್ದ ಪ್ರಯಾಣಿಕರಲ್ಲಿ ಇಪ್ಪತ್ತು ಮಂದಿ ಅಸ್ತವ್ಯಸ್ತವಾಗಿ ಆ ಡೋಲಾಯಮಾನ ತೆಪ್ಪದ ಮೇಲೆ ಒಬ್ಬರನ್ನೊಬ್ಬರು ಹಿಡಿದುಕೊಂಡು ನಿಂತ ಭಾರದಿಂದ ಅದು ಮತ್ತಷ್ಟು ಆಳಕ್ಕಿಳಿದು, ಸಮುದ್ರದ ನೀರು ನಿಂತಿದ್ದವರ ನಡುವಿನವರೆಗೂ ಬಂದಿತು.

''ಮೂರು ದಿನಗಳವರೆಗೂ ಆ ತೆಪ್ಪವನ್ನೆಳೆದುಕೊಂಡು ನಮ್ಮ ಜೀವರಕ್ಷಕ ದೋಣಿ ಗೊತ್ತುಗುರಿಯಿಲ್ಲದೆ ಸಾಗಿತ್ತು. ಈ ಅವಧಿಯಲ್ಲಿ ತೆಪ್ಪದ ಮೇಲೆ ನಿಂತಿದ್ದವರೆಲ್ಲ ಒಬ್ಬೊಬ್ಬರಾಗಿ ಜಾರಿ ಸಮುದ್ರದ ಪಾಲಾದಾಗ, ತೆಪ್ಪದ ಮೇಲೆ ಜೀವಚ್ಛವವಾಗಿ ಉಳಿದುಕೊಂಡಿದ್ದ ಮೇಜರ್ ನಯಿಲ್ ಕೋರೆಯನ್ನು ದೋಣಿಯ ಮೇಲೆಳೆದುಕೊಳ್ಳುವಂತೆ ಬ್ರಿಗೇಡಿಯರ್ ಪ್ಯಾರಿಸ್ ಆಜ್ಞಾಪಿಸಿದರು. ನಯಿಲ್ ಕೋರೆಯ ಸೊಂಟದ ಮೇಲ್ಭಾಗವೆಲ್ಲಾ ಸುಡುಬಿಸಿಲಿನ ತಾಪದಿಂದ ಕಪ್ಪಾಗಿ ಹೋಗಿತ್ತು. ಆ ರಾತ್ರಿಯೇ ಆತ ಕೊನೆಯುಸಿರೆಳೆದ.

''ಅದೊಂದು ದಿನ ಮಧ್ಯಾಹ್ನ ಆಕಾಶದಲ್ಲಿ ಒಂದು ಹೆಲಿಕಾಪ್ಟರ್ ಕಾಣಿಸಿಕೊಂಡಿತು. ಅದು ಮಿತ್ರರಾಷ್ಟ್ರದ್ದೋ ಅಥವಾ ಶತ್ರುಗಳದ್ದೋ ಎಂದು ತಿಳಿಯುತ್ತಿರಲಿಲ್ಲ. ಯಾವುದಾದರೇನಂತೆ! ವಿಮಾನ ನಡೆಸುತ್ತಿದ್ದವನಿಗೆ ನಮ್ಮ ದುಸ್ಥಿತಿಯ ಅರಿವಾಗಿ ಆತ ನೆರವಿಗೆ ಬರಬಹುದೆಂಬ ಆಸೆಯಿಂದ ತಲೆ ಎತ್ತಿ ಗಂಟಲು ಬಿರಿಯುವಂತೆ ಕಿರುಚಿ ವೈಮಾನಿಕನ ಗಮನ ಸೆಳೆಯಲು ಪ್ರಯತ್ನಿಸಿದೆವು. ದುರದೃಷ್ಟಕ್ಕೆ ನಮ್ಮೆಲ್ಲಾ ಕಿರುಚಾಟಗಳು, ನಾನಾ ರೀತಿಯಲ್ಲಿ ಸೂಚಿಸಲು ಪ್ರಯತ್ನಪಟ್ಟ ಹಾವ, ಭಾವ, ಭಂಗಿಗಳು ವೈಮಾನಿಕನ ಗಮನ ಸೆಳೆಯಲು ಸಮರ್ಥವಾಗಲಿಲ್ಲ. ಹೆಲಿಕಾಪ್ಟರು ನಮ್ಮ ತಲೆಯ ಮೇಲೆ ಹಾರಿ ಹೋದಾಗ ನಮಗಾದ ದುಃಖ ನಿರಾಸೆಗಳು ವರ್ಣಿಸಲಸದಳವಾಗಿತ್ತು.

''ಅದೇ ಹೊತ್ತಿಗೆ ಹೆಲಿಕಾಪ್ಟರನ್ನು ಕಂಡ ಬ್ರಿಟಿಷ್ ಸಿಪಾಯಿಯೊಬ್ಬನಿಗೆ ಮನೋವಿಕಲ್ಪ ವಾಯಿತು. ಹೆಲಿಕಾಪ್ಟರಿನಲ್ಲಿ ತಾನು ತುರ್ತಾಗಿ ಇಂಗ್ಲೆಂಡಿಗೆ ಹೋಗಬೇಕಾಗಿದೆಯೆಂದೂ, ಮಾರನೆಯ ದಿನವೇ ತನ್ನ ಮದುವೆಯೆಂದೂ ಹಲುಬತೊಡಗಿದ. ತನ್ನನ್ನು ಹೇಗಾದರೂ ಮಾಡಿ ಇಂಗ್ಲೆಂಡಿಗೆ ಕಳುಹಿಸಿ ಕೊಡಬೇಕೆಂದೂ, ಹೆಲಿಕಾಪ್ಟರನ್ನು ಹಿಂದಕ್ಕೆ ಕರೆಸಿಕೊಳ್ಳಿರೆಂದೂ ಸುತ್ತಲಿದ್ದವರನ್ನು ಗೋಗರೆಯತೊಡಗಿದ. ಅವನ ಹಲುಬುವಿಕೆಯನ್ನು ಕಂಡು ಕೆಲವರಿಗೆ ಅಂಥ ಸ್ಥಿತಿಯಲ್ಲೂ ನಗೆ ಬಾರದಿರಲಿಲ್ಲ. ಸ್ವಲ್ಪ ಹೊತ್ತಿಗೆ ಅವನ ಹುಚ್ಚು ಬೇರೊಂದು ರೀತಿ ಯಲ್ಲಿ ಕೆರಳಿತು. ಇಂಗ್ಲೆಂಡಿನಲ್ಲಿರುವ ತನ್ನ ವಧುವಿಗೆಂದು ಸಿಂಗಪುರದಿಂದ ಕೊಂಡು ತಂದಿದ್ದ ಚಿನ್ನದ ನೆಕ್‌ಲೇಸನ್ನು ಯಾರೋ ಅಪ ಹರಿಸಿರುವರೆಂದು ಕಂಡ ಕಂಡವರ ಮೇಲೆ ಹರಿ ಹಾಯತೊಡಗಿದ. ಕೊನೆಗೆ ಅವನ ಹುಚ್ಚು ಉಗ್ರರೂಪ ತಳೆಯಿತು. ಕಂಡಕಂಡವರನ್ನು ಪರ ಚತೊಡಗಿದ ಅವನು ತಕತಕನೆ ಕುಣಿಯತೊಡಗಿ ದಾಗ ಸಮತೋಲನ ತಪ್ಪಿ ನಾವಿದ್ದ ದೋಣಿ ಯೆಲ್ಲ ಅವಘಡಕ್ಕೀಡಾಗುವುದೋ ಎಂದು ಭಯವಾಗತೊಡಗಿತು. ಹೆಲಿಕಾಪ್ಟರನ್ನು ಏಕೆ ಕೆಳಗಿಳಿಸಲಿಲ್ಲವೆಂದು ಆತ ತಮ್ಮನ್ನು ಎರ್‍ರಾಬಿರ್‍ರಿ ಬಯ್ಯತೊಡಗಿದಾಗಲೂ ಬ್ರಿಗೇಡಿಯರ್ ಪ್ಯಾರಿಸ್ ತುಟಿ ಪಿಟುಕ್ಕೆನ್ನಲಿಲ್ಲ. ಆತನ ಸ್ಥಿತಿ ಯನ್ನು ಕಂಡು ಮರುಕಪಟ್ಟರು ಅಷ್ಟೆ. ಯಾರೆಷ್ಟೇ ಸಮಾಧಾನ ಮಾಡಿದರೂ ಅವನ ಹುಚ್ಚು ಶಾಂತವಾಗಲಿಲ್ಲ. ಸಮುದ್ರದಂಚಿನಲ್ಲಿ ಸೂರ್ಯ ಮುಳುಗಿ ಕತ್ತಲಾದರೂ ಅವನ ಹುಚ್ಚಾಟ ನಡದೇ ಇತ್ತು. ಬೆಳಗಾದಾಗ ಮಾತ್ರ ಆತ ಕಾಣಲೇ ಇಲ್ಲ. ಅವನು ಎಲ್ಲಿಗೆ ಹೋದ, ಏನಾದ ಎಂದು ವಿಚಾರಿಸುವ ಗೋಜಿಗೂ ಯಾರೂ ಹೋಗಲಿಲ್ಲ. ಬಹುಶಃ ಯಾರೋ ಅವನನ್ನು ಸಮುದ್ರಕ್ಕೆ ತಳ್ಳಿರಬೇಕು.

''ಆ ದಿನ ಮಧ್ಯಾಹ್ನ ಸಮಯ ಇದ್ದಕ್ಕಿದ್ದ ಹಾಗೆ ಸಮುದ್ರ ಪ್ರಕ್ಷುಬ್ಧಗೊಂಡಿತು. ಪಡು ವಣ ಕಡಲ ಬಿರುಗಾಳಿಗಳು ಬೀಸಲಾರಂಭಿಸಿ ತೆರೆಗಳು ಎಲ್ಲಾ ದಿಕ್ಕಿನಲ್ಲೂ ಅಪ್ಪಳಿಸತೊಡಗಿ ದವು. ಬಿರುಗಾಳಿ ನಮ್ಮ ದೋಣಿಯನ್ನು ಹಿಂದಕ್ಕೆ ದಬ್ಬತೊಡಗಿತು. ಕಡಲಿನಲ್ಲಿ ದೈತ್ಯಾ ಕಾರದ ಅಲೆಗಳು ಏಳತೊಡಗಿದವು. ಮೊದಲೇ ನಮ್ಮ ದೋಣಿ ಅತಂತ್ರ ಸ್ಥಿತಿಯಲ್ಲಿತ್ತು. ಏರಿಳಿ ಯುವ ಅಲೆಗಳ ನಡುವೆ ತುಯ್ದಾಡುತ್ತಿದ್ದ ನಮ್ಮ ದೋಣಿ ಡೋಲಾಯಮಾನ ಸ್ಥಿತಿಯಲ್ಲಿ ಸಾಗಿತ್ತು. ದೈತ್ಯಾಕಾರದ ಅಲೆಯೊಂದರ ಹೊಡೆ ತಕ್ಕೆ ದೋಣಿ ಸಿಕ್ಕಿದ್ದರೆ ನಮ್ಮೆಲ್ಲರ ಕತೆ ಮುಗಿ ಯುತ್ತಿತ್ತು. ಅವಘಡದ ಈ ಕತೆ ನಿಮಗಾರಿಗೂ ತಿಳಿಯುತ್ತಿರಲಿಲ್ಲ.

''ದೋಣಿಯಲ್ಲಿದ್ದವರೆಲ್ಲ ಉದ್ವಿಗ್ನಗೊಂಡಿ ದ್ದರು. ಕೆಲವೊಮ್ಮೆ ಯಾರೋ ಗದರಿಸಿದಂತೆ ಬಿರುಗಾಳಿ ನಿಶ್ಚಲವಾಗಿ ನಿಂತುಬಿಡುತ್ತಿತ್ತು. ಕೆಲ ವೊಮ್ಮೆ ನೂರಾರು ಮೈಲು ವೇಗದಿಂದ ಬೀಸುವ ಬಿರುಗಾಳಿಗೆ ಸಿಲುಕಿ ನಮ್ಮ ದೋಣಿ ಕಾಗದದ ದೋಣಿಯಂತೆ ಗಿರ್‍ರನೆ ಸುತ್ತುತ್ತಿತ್ತು. ಜಲದುಬ್ಬರದಲ್ಲಿ ಏಳುತ್ತಾ ಬೀಳುತ್ತಾ ತೆರೆಗಳ ನಡುವೆ ನುಸುಳಿಯೂ ಅದು ಅಪಾಯಕ್ಕೀಡಾಗ ದಂತೆ ಸಾಗುತ್ತಿದ್ದುದೇ ಒಂದು ಪವಾಡದಂ ತಿತ್ತು. ಕಡಲಿನೊಡಲಲ್ಲಿ ಅಡಗಿ ಕುಳಿತು ಸನ್ನಿ ತ್ತನೆ ಮೇಲೆರಗುವ ಸಂಚುಗಾರ ಕೊಲೆಗಡುಕ ನಂತೆ ಆ ಭಯಂಕರ ಬಿರುಗಾಳಿ ತೋರುತ್ತಿತ್ತು. ಕಡಲಿನ ಅಲೆಗಳ ಬೊಬ್ಬಿರಿಯುವ ಅಬ್ಬರ, ಬಿರುಗಾಳಿಯ ಭಯಂಕರ ಸಿಳ್ಳು ನಮ್ಮೆಲ್ಲರ ಎದೆಗಳನ್ನು ನಡುಗಿಸುತ್ತಿತ್ತಲ್ಲದೆ ಬದುಕುವ ಆಸೆಯನ್ನೇ ಕಮರಿಸುತ್ತಿತ್ತು.

''ಆ ವಿಶಾಲ ಕಡಲಿನ ಅಪಾರ ಜಲರಾಶಿಯ ಮೇಲೆ ಸಾಗಿದ್ದ ಈ ಪುಟ್ಟ ದೋಣಿಯಲ್ಲಿದ್ದ ನತದೃಷ್ಟ ಪ್ರಯಾಣಿಕರ ಜೀವದೊಡನೆ ಬಿರುಗಾ ಳಿಯೆಂಬ ಹಂತಕ ಚೆಲ್ಲಾಟವಾಡುತ್ತಿದ್ದ. ದೋಣಿಯ ಚುಕ್ಕಾಣಿ ಹಿಡಿದಿದ್ದ ಡಚ್ ಕ್ಯಾಪ್ಟನ್ ಸಮುದ್ರದ ಆಳದ ಅರಿವಿಲ್ಲದಿದ್ದರೂ ಅದ್ಭುತ ರೀತಿಯಲ್ಲಿ ದೋಣಿಯ ಚಲನೆಯನ್ನು ನಿಯಂತ್ರಿಸುತ್ತಿದ್ದ.

''ದೋಣಿಯಲ್ಲಿದ್ದ ಜಾವಾ ಬೆಸ್ತರು ಭಯ ಭಕ್ತಿಗಳಿಂದ 'ಬಟುಕ್' ಭಾಷೆಯಲ್ಲಿ ವಿಚಿತ್ರ ವಾದ ದನಿಯಲ್ಲಿ ಹಾಡುತ್ತಾ ಜಲದೇವತೆ ಯನ್ನು ಶಾಂತಗೊಳಿಸಲು ಪ್ರಾರ್ಥಿಸತೊಡಗಿ ದರು. ದೋಣಿಯಲ್ಲಿ ವಿಚಿತ್ರವಾದ ವಾತಾವ ರಣ ಮೂಡಿತು. ಕಡಲಿನೊಂದಿಗೆ ಹೋರ್‍ರಾಡು ತ್ತಿದ್ದ ನಮ್ಮೆಲ್ಲರ ಮನಸ್ಸಿನಲ್ಲಿ ನಮಗರಿವಿಲ್ಲ ದಂತೆ ದೈವೀ ಆಶ್ವಾಸನೆಯ ಭಾವವೊಂದು ಮೂಡತೊಡಗಿದ ನಮ್ಮ ಮನಸ್ಸು ಶಾಂತಗೊ ಳ್ಳಲಾರಂಭಿಸಿತು. ಆಗ ನನಗೆ ಬದುಕಿನಲ್ಲಿ ಮೊದಲ ಸಲ ಪ್ರಾರ್ಥನೆಯ ಪ್ರಭಾವದ ಅರಿ ವಾಯಿತು.

ಸಂಜೆಯಾಗುತ್ತಿದ್ದಂತೆ ಸಮುದ್ರದ ಅಲೆಗಳು ಮಂದಗತಿಗೆ ಇಳಿಯತೊಡಗಿದವು. ಕಡಲ ಮಾರಿ ತನ್ನ ರೌದ್ರ ಮೊಗವನ್ನು ಮರೆಮಾಚಿ ಮತ್ತೆ ಪ್ರಶಾಂತಳಾದಳು. ಬಿರುಗಾಳಿಯ ದಾಳಿಗೆ ಸಿಕ್ಕ ದೋಣಿಯಲ್ಲಿದ್ದವರಲ್ಲಿ ಎಷ್ಟು ಮಂದಿ ಕಡಲ ಪಾಲಾದರೆಂದು ಲೆಕ್ಕಹಾಕುವ ಗೋಜಿಗೆ ಯಾರು ಹೋಗಲಿಲ್ಲ. ನಮ್ಮ ಜೀವ ರಕ್ಷಕ ದೋಣಿ ಕಾಣದ ಗುರಿಯತ್ತ ಸಾಗತೊಡಗಿತು. ಬಿರುಗಾಳಿ ಅಪಾಯದಿಂದ ಪಾರಾದ ನಮಗೆ ದೋಣಿಯಲ್ಲಿನ ನರಕ ಸದೃಶ ಕ್ಷಣಗಳನ್ನೆದುರಿ ಸುವುದು ಘೋರ ಅನುಭವವಾಗಿತ್ತು.''

*

''ಹಸಿವಿನಿಂದ ನಾವೆಲ್ಲರೂ ಕಂಗೆಟ್ಟಿದ್ದೆವು. ಹಸಿ ವನ್ನೇನೋ ಸಹಿಸಿಕೊಳ್ಳಬಹುದಿತ್ತು. ಆದರೆ ಬಾಯಾರಿಕೆ ನಮ್ಮನ್ನೆಲ್ಲ ಜೀವನ್ಮೃತರನ್ನಾಗಿ ಸಿತ್ತು. ದಾಹವನ್ನು ತೀರಿಸಿಕೊಳ್ಳಲು ಎಲ್ಲರೂ ತಮ್ಮ ತುಟಿಗಳನ್ನು ನಾಲಿಗೆಯಿಂದ ಸವರಿ ಕೊಂಡು ಎಂಜಲನ್ನು ನುಂಗುತ್ತಿರುವ ದೃಶ್ಯ ಸಾಮಾನ್ಯವಾಗಿತ್ತು. ಸಮುದ್ರದ ನೀರನ್ನು ಕುಡಿ ಯಬಾರದೆಂದು ನಮ್ಮೆಲ್ಲರಿಗೂ ತಿಳುವಳಿಕೆ ನೀಡ ಲಾಗಿದ್ದರೂ, ಕೆಲವರು ರಾತ್ರಿಯಲ್ಲಿ ಕದ್ದು ಕಡಲಿನ ಉಪ್ಪು ನೀರನ್ನು ಕುಡಿಯತೊಡಗಿ ದರು. ಕ್ರಮೇಣ ಬಾಯಾರಿಕೆಯನ್ನು ತಡೆಯಲಾ ರದೆ ಬಹಳ ಜನ ಕಡಲ ನೀರನ್ನು ಬಹಿರಂಗವಾ ಗಿಯೇ ಕುಡಿಯತೊಡಗಿದರು. ಹೀಗೆ ಹೆಚ್ಚು ಪ್ರಮಾಣದಲ್ಲಿ ಉಪ್ಪು ನೀರನ್ನು ಕುಡಿದವರು ಪ್ರಜ್ಞಾಹೀನರಾದರು. ಮುಂದೆ ಇಹಲೋಕ ಯಾತ್ರೆಯನ್ನು ಮುಗಿಸಿದರು. ಮತ್ತೆ ಕೆಲವರು ಮನೋವಿಕಲ್ಪಕ್ಕೊಳಗಾದರು.

''ಸೂರ್ಯನ ತಾಪದಿಂದ ನಮ್ಮ ಮೈಮೇ ಲೆಲ್ಲ ಬೊಕ್ಕೆಗಳೆದ್ದುವು. ಕೆಲವರು ತಾವು ತೊಟ್ಟಿದ್ದ ಬಟ್ಟೆಯನ್ನು ಬಿಚ್ಚಿ ಕಡಲ ನೀರಲ್ಲದ್ದಿ ತಲೆಯ ಮೇಲೆ ಹಾಕಿಕೊಂಡಾಗ, ಬೊಕ್ಕೆಗಳನ್ನು ತೋಯಿಸಿದಾಗ ಅಸಾಧ್ಯ ಉರಿತದಿಂದ ಕಿರಿಚಿ ಕೊಳ್ಳುತ್ತಿದ್ದರು.

''ಹೆಚ್ಚು ಕಮ್ಮಿ ದೋಣಿಯಲ್ಲಿದ್ದವರೆಲ್ಲಾ ಒಂದು ತೆರನಾದ ವಿಭ್ರಾಂತ ಸ್ಥಿತಿಯನ್ನು ಮುಟ್ಟಿ ಅರೆಹುಚ್ಚರಾಗಿದ್ದರು. ಗಾರ್ಡನ್ ಹೈಲಾಂಡರ್ ಸೇನಾವಿಭಾಗಕ್ಕೆ ಸೇರಿದ್ದ ಸಾರ್ಜಂಟನೊಬ್ಬ ಈ ರೀತಿಯ ಮನೋವಿಕಲ್ಪಕ್ಕೆ ಬಲಿಯಾದ. ಒಂದು ಪ್ರಾತಃಕಾಲ ಆತ ಬಡಬಡಿಸಹತ್ತಿದ. 'ಹಾರುವ ದೋಣಿ ಹಿಂದಿರುಗಿ ಬರಲು ತಡವಾಗದು,' ಎಂದು ಆತ ನುಡಿದಾಗ ನಾನು ಅಚ್ಚರಿಯಿಂದ 'ಹಾರುವ ದೋಣಿ ಎಂದರೆ ಯಾವುದು?' ಎಂದು ಕೇಳಿದೆ.

'' 'ಅದೇ, ನಿನ್ನೆ ರಾತ್ರಿ ಬಂದ ಹೆಂಗಸರು ಮತ್ತು ಗಾಯಾಳುಗಳನ್ನು ಕರೆದುಕೊಂಡು ಹೋದ ಹಾರುವ ದೋಣಿ' ಎಂದಾತ ಉತ್ತರಿಸಿ ದಾಗ ಆತನ ಮನೋವಿಕಲ್ಪ ಸ್ಥಿತಿಯ ಅರಿವಾಗಿ ಸುಮ್ಮನಾದೆ.

''ಅಷ್ಟರಲ್ಲಿ ಸಿಪಾಯಿಯೊಬ್ಬ ದೋಣಿ ಯಿಂದ ಬಾಗಿ ಕಡಲಿನ ಉಪ್ಪು ನೀರನ್ನು ಬೊಗ ಸೆಯಿಂದ ತುಂಬಿಕೊಂಡು ಕುಡಿದು, 'ನೀರು ಸಿಹಿಯಾಗಿದೆ' ಎಂದು ಕಿರುಚತೊಡಗಿದ. ನನಗ ರಿವಿಲ್ಲದಂತೆ ನಾನೂ ಊಟ ಕುಡಿತಗಳ ಮೇಜ ವಾನಿಯ ಕನಸನ್ನು ಕಾಣುತ್ತ ಭ್ರಾಮಕ ಸ್ಥಿತಿಯ ಲ್ಲಿರುತ್ತಿದ್ದೆ. ದೋಣಿ ನೀರಿನ ಸುಳಿಯಲ್ಲಿ ಸಿಕ್ಕಿ ಕ್ರಿಕ್ ಕ್ರಿಕ್ ಎಂದು ಸದ್ದಾದಾಗ ಎಚ್ಚರಗೊಳ್ಳು ತ್ತಿದ್ದೆ.

''ಪ್ರಾರಂಭದಲ್ಲಿ ದೋಣಿಯಲ್ಲಿ ಕುಳಿತು

ಹೊರಟಾಗ ಇದ್ದ ಸೋದರಭಾವ ದಿನಗಳು ಉರುಳಿದಂತೆ ನಮ್ಮಲ್ಲಿ ಕಾಣಲಾರದಾಯಿತು. ಮೊದಮೊದಲು ಉಳಿದಷ್ಟೇ ಆಹಾರ ಸಂಗ್ರಹ ಮೇಲೆಯೇ ಎಲ್ಲರ ದೃಷ್ಟಿ ಕೇಂದ್ರೀಕೃತವಾಗಿರುತ್ತಿತ್ತು. ತಾವು ಪಡೆಯುತ್ತಿರುವ ಆಹಾರದ ಪಾಲಿಗಿಂತಲೂ ಬೇರೆಯವರು ಹೆಚ್ಚು ಪಡೆಯುತ್ತಿರಬಹುದೆಂದು ಒಬ್ಬೊರನ್ನೊಬ್ಬರು ಸಂಶಯಿಸತೊಡಗುವುದು ಸಾಮಾನ್ಯವಾಯಿತು. ದೋಣಿಯಲ್ಲಿ ಆಹಾರದ ವಿತರಣೆ ಪ್ರಾರಂಭವಾದೊಡನೆ ಎಲ್ಲರ ಹಸಿವು ಕೆರಳಿ ಪಶುಗಳಂತೆ ತಮ್ಮ ಪಾಲನ್ನು ಪಡೆದುಕೊಳ್ಳಲು ಕಾತರದಿಂದ ಚಡಪಡಿಸುತ್ತಿದ್ದರು.

"ದಿನಗಳುರುಳಿದಂತೆ ಹೊರಗಿನಿಂದ ಬರುವ ನೆರವಿನ ಆಶೆ ಕಡಿಮೆಯಾಗತೊಡಗಿತು. ದೋಣಿಯಲ್ಲಿನ ಜೀವನ ತಾಳಲಾರದಷ್ಟು ದುರ್ಭರವಾದಂತೆ ಜನರಲ್ಲಿನ ಸ್ವಾರ್ಥ ತಾನೇ ತಾನಾಗಿ ತಾಂಡವವಾಡತೊಡಗಿತು. ಅಂಥ ಪ್ರಸಂಗವೊಂದು ದೋಣಿಯಲ್ಲಿ ಜರುಗಿತು.

"ಬ್ರಿಗೇಡಿಯರ್ ಪ್ಯಾರಿಸ್ಸನ ನಿಯಮದಂತೆ, ಈಜು ಬಾರದ ಸಾರ್ಜಂಟನೊಬ್ಬ ಸರದಿಯಂತೆ ಜೀವರಕ್ಷಕ ನಡುಪಟ್ಟಿಯನ್ನು ಕಟ್ಟಿಕೊಂಡು ಕೆಲವು ಗಂಟೆಗಳು ಸಮುದ್ರದಲ್ಲಿ ಈಜಿಕೊಂಡು ಬರಬೇಕಿತ್ತು. ಆದರೆ ಆ ಸಾರ್ಜಂಟ್ ಜೀವರಕ್ಷಕ ನಡುಪಟ್ಟಿಯೊಂದೇ ತನಗೆ ಈ ಲೋಕದೊಂದಿಗಿರುವ ಕಟ್ಟ ಕಡೆಯ ಕೊಂಡಿಯೆಂಬಂತೆ ಈಜು ಬಾರದ ಬೇರೆಯವರಿಗೆ ಅದನ್ನು ಕೊಡಲು ನಿರಾಕರಿಸಿದ. ಬಲವಂತವಾಗಿಯೇ ಆದನ್ನು ಅವನಿಂದ ಅದನ್ನು ಕಿತ್ತುಕೊಂಡು ಬೇರೆಯವರಿಗೆ ಕೊಡಬೇಕಾಯಿತು.

"ಆ ದಿನ ರಾತ್ರಿ ಆ ಸಾರ್ಜಂಟ್ ಯಾರನ್ನೋ ದೂರುತ್ತಾ ಜೋರಾಗಿ ಕೂಗಾಡುತ್ತಿದ್ದಾಗ ಅವನನ್ನು ಯಾರೋ ಹೊಡೆದದ್ದು ಕೇಳಿಸಿತು. ಮಾರನೆಯ ದಿನ ಬೆಳಿಗ್ಗೆ ಆತ ನಾಪತ್ತೆ. ದಿನಗಳುರುಳಿದಂತೆ ಪ್ರತಿರಾತ್ರಿಯೂ ಹೀಗೆ ಕೆಲವರ ನಾಪತ್ತೆ ನಿತ್ಯದ ಮಾತಾಯಿತು. ಹೀಗಾಗಿ ಆ ಬಗ್ಗೆ ಯಾರೂ ಕಾಳಜಿ ಮಾಡುತ್ತಿರಲಿಲ್ಲ. ದೋಣಿಯಲ್ಲಿ ಸಾಧ್ಯವಾದಷ್ಟು ಮಂದಿ ನಾಪತ್ತೆಯಾದಷ್ಟು ಹೆಚ್ಚೆಚ್ಚು ಸ್ಥಳಾವಕಾಶ ತಮಗೆ ಸಿಕ್ಕುತ್ತದೆಂಬ ಮನೋಭಾವ ವಾಸ್ತವವಾಗಿ ಅಮಾನವೀಯವೆನಿಸಿದರೂ ಎಲ್ಲರ ತಲೆಯಲ್ಲೂ ಅದು ಸಹಜವೆಂಬಂತೆ ರೂಪುಗೊಂಡಿತ್ತು.

ದೋಣಿ ಡೆಕ್ಕಿನ ಕೆಳ ಅಂಕಣದ ಮೂಲೆಯಲ್ಲಿ ಐದು ಮಂದಿ ಒತ್ತಾಗಿ ಕುಳಿತು ಗುಟ್ಟಾಗಿ ಮಾತನಾಡುತ್ತಿರುವುದು ನನ್ನ ಗಮನಕ್ಕೆ ಬಂತು. ಅವರ ಬಗ್ಗೆ ನನಗೆ ಸಂಶಯ ಉಂಟಾಯಿತು. ಒಂದು ರಾತ್ರಿ ಬರುಗಾಳಿ ಜೋರಾಗಿ ಬೀಸಿತು. ದೋಣಿ ಅತ್ತಿಂದಿತ್ತ ಓಲಾಡತೊಡಗಿತು. ಆಗ ಮೂಲೆಯಲ್ಲಿ ಯಾರೋ ಒಬ್ಬ ಕಿಟಾರನೆ ಕಿರಚಿಕೊಂಡದ್ದೂ ಜತೆಗೇ ನೀರಿಗೆ ಧುಮುಕಿದ ಸದ್ದೂ ಕೇಳಿಸಿದವು. ಸಹಾಯಕ್ಕಾಗಿ ಮೊರೆಯಿಟ್ಟು ಕೂಗುತ್ತಿರುವ ಆರ್ತನಾದ. ಮತ್ತೆ ಕೆಲವರು ಎತ್ತರದ ಧ್ವನಿಯಲ್ಲಿ ಕೂಗಿಕೊಳ್ಳತೊಡಗಿದರು. ಬೀಸುವ ಬಿರುಗಾಳಿಯ ರಭಸದ ಅಬ್ಬರದಲ್ಲಿ ಬೊಬ್ಬಿರಿಯುವ ಅಲೆಗಳ ಗರ್ಜನೆಯಲ್ಲಿ ಆ ಕೂಗು ಕಿರುಚಾಟಗಳು ಅಡಗಿಹೋದವು.

"ಮಾರನೆಯ ದಿನ ಬೆಳಗಾದಾಗ ಹಿಂದಿನ ದಿನ ನೋಡಿದ್ದ ಇಪ್ಪತ್ತು ಜನ ಪ್ರಯಾಣಿಕರು ಕಾಣೆಯಾಗಿದ್ದರು. ಒಡನೆ ನನ್ನ ಗಮನ ದೋಣಿಯ ಡೆಕ್ಕಿನ ಕೆಳ ಅಂಕಣದ ಮೂಲೆಯಲ್ಲಿ ಕುಳಿತು ಗುಟ್ಟಾಗಿ ಮಾತಾಡಿಕೊಳ್ಳುತ್ತಿದ್ದ ಆ ಐವರ ಕಡೆಗೆ ಹರಿಯಿತು. ಅವರೇ ಕೊಲೆಪಾತಕರೆಂಬುದರಲ್ಲಿ ನನಗೆ ಸಂಶಯವೇ ಉಳಿಯಲಿಲ್ಲ. ದೋಣಿಯಲ್ಲಿದ್ದವರನ್ನೆಲ್ಲಾ ಕಡಲಿಗೆ ದಬ್ಬಿ ಮುಗಿಸಿದರೆ ತಾವು ಬದುಕುಳಿಯಬಹುದೆಂದು ಅವರು ನಿಶ್ಚಯಿಸಿದಂತಿತ್ತು.

"ದಿನಗಳು ಉರುಳಿದಂತೆ ದೋಣಿಯಲ್ಲಿನ ಜನ ಹತಾಶರಾಗಿ ತಮ್ಮ ಜೀವನದ ಕೊನೆಯ ಗಳಿಗೆಯನ್ನು ಸ್ಥಿತ ಪ್ರಜ್ಞರಂತೆ ಎದುರು ನೋಡಲಾರಂಭಿಸಿದರು. ಕಳೆದ ಎರಡು ದಿನಗಳಿಂದ ಡಚ್ ಕ್ಯಾಪ್ಟನ್ ಪ್ರಜ್ಞಾಹೀನ ಸ್ಥಿತಿಯಲ್ಲಿ ತನ್ನ

ಹೆಂಡತಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದ. ಬಿಸಿಲಿನ ಝಳದಿಂದಾಗಿ ಆತನ ಮುಖದ ತುಂಬ ಬೊಕ್ಕೆಗಳೆದ್ದಿದ್ದುವು. ಆಕೆ ಆಗಾಗ ಆತನ ಮುಖದ ಮೇಲೆ ಬಾಗಿ ಸಾಂತ್ವನದ ನುಡಿಗಳನ್ನಾಡುತ್ತಿದ್ದಳು. ಒಮ್ಮೊಂದೊಮ್ಮೆ ಆಕೆ ಕಿಟ್ಟನೆ ಕಿರುಚಿಕೊಂಡಳು. ಕ್ಯಾಪ್ಟನ್ನನು 'ನಾನು ಈಜಲು ಹೋಗುತ್ತೇನೆ. ಈಜಲು ಹೋಗುತ್ತೇನೆ' ಎಂದು ಭ್ರಾಂತನಂತೆ ಕೂಗುತ್ತ ತಟ್ಟನೆ ಸಮುದ್ರಕ್ಕೆ ಧುಮುಕಿಕೊಂಡು ಮುಳುಗಿ ಹೋದ. ಆತನ ಹೆಂಡತಿ ಆ ದಿನವೆಲ್ಲಾ ಅಳುತ್ತಲೇ ಇದ್ದಳು. ಸಮುದ್ರದಂಚಿನಲ್ಲಿ ಸೂರ್ಯ ಮುಳುಗಿ ಕತ್ತಲಾವರಿಸಿತು. ಯಾರೋ ದೋಣಿಯಿಂದ ಕಡಲಿಗೆ ಧುಮುಕಿದ ಸದ್ದಾಯಿತು. 'ಕ್ಯಾಪ್ಟನ್ನನ ಹೆಂಡತಿ ನೀರಿಗೆ ಹಾರಿ ಕೊಂಡ'ಳೆಂದು ಯಾರೋ ಕೂಗಿ ಹೇಳಿದರು.

"ದೋಣಿಯಲ್ಲಿ ಶಿಸ್ತು ಪರಿಪಾಲನೆಯ ಹೊಣೆಯನ್ನು ಹೊತ್ತಿದ್ದ ಬ್ರಿಗೇಡಿಯರ್ ಪ್ಯಾರಿಸರು ಬಳಲಿಕೆಯಿಂದ, ದಾಹದಿಂದ ಕಂಗೆಟ್ಟು ಅವರ ದೇಹಸ್ಥಿತಿ ದಿನದಿನಕ್ಕೂ ಕ್ಷೀಣಿಸತೊಡಗಿತು. ಕ್ಯಾಪ್ಟನ್ ಬ್ಲಾಕ್‌ವುಡ್ ಎಂಬ ತರುಣ ಅಧಿಕಾರಿಯೊಬ್ಬ ತನ್ನ ಪಾಲಿಗೆ ದೊರೆಯುತ್ತಿದ್ದ ಕುಡಿಯುವ ನೀರನ್ನು ಮಿಗಿಸಿ ಪ್ಯಾರಿಸ್ಸರ ದಾಹವನ್ನು ಇಂಗಿಸಲು ಪ್ರಯತ್ನಿಸುತ್ತಿದ್ದ.

"ಒಂದು ದಿನ ಪ್ಯಾರಿಸರು ಇದ್ದಕ್ಕಿದ್ದಂತೆ ಎದ್ದು ಕುಳಿತು ಬ್ಲಾಕ್‌ವುಡ್‌ನನ್ನು ಕುರಿತು ಸಂತೋಷಚಿತ್ತರಾಗಿ 'ಮದ್ಯಪಾನ ಮಾಡಲು ಕ್ಲಬ್ಬಿಗೆ ಹೋಗೋಣ ನಡೆ....' ಎಂದು ಬಡಬಡಿಸಿದಾಗ ಅವರೂ 'ಆ' ಸ್ಥಿತಿಯನ್ನು ತಲುಪಿರುವರೆಂದು ತರುಣ ಕ್ಯಾಪ್ಟನ್ನನಿಗೆ ಮನವರಿಕೆಯಾಯಿತು. ಆದರೂ ಅದನ್ನು ತೋರಿಸಿಕೊಳ್ಳದೆ 'ಸರ್, ಕ್ಲಬ್ಬಿಗೆ ಆಮೇಲೆ ಹೋಗೋಣ' ಎಂದು ಹಸನ್ಮುಖನಾಗಿಯೇ ನುಡಿದ. ಆ ದಿನ ರಾತ್ರಿ, ಬ್ರಿಗೇಡಿಯರ್ ಪ್ಯಾರಿಸ್ ಕೊನೆಯುಸಿರೆಳೆದರು. ಶವವನ್ನು ನಾವೆಲ್ಲ ಸೇರಿ ಸಮುದ್ರದಲ್ಲಿ ಇಳಿಯಬಿಟ್ಟು ಅವರ ಆತ್ಮಕ್ಕೆ ಶಾಂತಿ ಕೋರಿ ಪ್ರಾರ್ಥನೆ ಸಲ್ಲಿಸಿದೆವು. ಮಾರನೆಯ ದಿನ ಕ್ಯಾಪ್ಟನ್ ಬ್ಲಾಕ್‌ವುಡ್ಡನೂ ಪ್ರಜ್ಞಾಹೀನ ಸ್ಥಿತಿ ತಲುಪಿ ರಾತ್ರಿಯೇ ಪ್ಯಾರಿಸ್ಸರ ಹಾದಿ ಹಿಡಿದ.

"ಬ್ರಿಗೆಡಿಯರ್ ಪ್ಯಾರಿಸ್ ಸತ್ತ ಎರಡು ಗಂಟೆಗಳೊಳಗೆ ಆಹಾರದ ದಿನಪಡಿಯನ್ನು ವಿತರಣೆ ಮಾಡುತ್ತಿದ್ದ ಡಚ್ ಅಧಿಕಾರಿಯ ಬಳಿಯಿಂದ ಹೆಚ್ಚು ಆಹಾರವನ್ನು ಕಿತ್ತುಕೊಳ್ಳಲು ಒಬ್ಬಾತ ಪ್ರಯತ್ನಿಸಿದಾಗ ಗಲಭೆಯಾಯಿತು ಅವರು ಡಚ್ ಭಾಷೆಯಲ್ಲಿ ಒಬ್ಬರನ್ನೊಬ್ಬರು ನಿಂದಿಸತೊಡಗಿದರು. ದೋಣಿಯಲ್ಲಿದ್ದವರಲ್ಲಿ ಹಲವರು ಜಗಳವನ್ನು ಬಿಡಿಸಲು ಧಾವಿಸುವ ಮುನ್ನ ಆತ ಚಾಕುವನ್ನು ಕ್ಯಾಪ್ಟನ್ನನ ಪಕ್ಕೆಗೆ ತಿವಿದು ಆಹಾರದ ಡಬ್ಬಿಯನ್ನು ಕಿತ್ತುಕೊಂಡ. ಇದನ್ನು ಕಂಡವರು ಆಕ್ರಮಣಕಾರಿಯನ್ನು ಹಿಡಿದುಕೊಳ್ಳಲು ಮುನ್ನುಗ್ಗಿದರು. ಆ ಆಕ್ರಮಣಕಾರಿ ಹಿಂದೆ ಮುಂದೆ ನೋಡದೆ ಅವರಿಂದ ತಪ್ಪಿಸಿಕೊಳ್ಳಲು ಆಹಾರದ ಡಬ್ಬಿಯೊಂದಿಗೆ ಸಮುದ್ರಕ್ಕೆ ನೆಗೆದು ಬಿಟ್ಟ. ಪ್ರತಿದಿನ ಈ ಬಗೆಯ ಘಟನೆಗಳು ಇದ್ದದ್ದೇ ಎನ್ನುವಂತಾಯಿತು. ಬದುಕು ದುಸ್ಸಹವಾದಾಗ ಬೇರೊಬ್ಬನ ತುತ್ತನ್ನು ಕಸಿದುಕೊಳ್ಳಲು ಆತನ ಕೊಲೆಮಾಡಲೂ ಹಿಂದೆ ಮುಂದೆ ನೋಡದಷ್ಟು ಕ್ರೂರಿಗಳಾಗಿ ಜನ ಬದಲಾಗುತ್ತಿದ್ದರು.

"ಅಂದು ಏಳನೆಯ ದಿನ, ಭಾನುವಾರ. ಸಂಜೆಯ ಹೊತ್ತಿಗೆ ನಮ್ಮ ಬಳಿಯಿದ್ದ ಕಟ್ಟಕಡೆಯ ಸೀಸೆಯಿಂದ ಕುಡಿಯುವ ನೀರನ್ನು ಎಲ್ಲರಿಗೂ ಹಂಚಲಾಯಿತು.

"ಲೆಫ್ಟಿನೆಂಟ್ ಕರ್ನಲ್ ಜೆ.ಎ. ಪಾಮರ್ ಎಂಬವರು ದೋಣಿಯಲ್ಲಿದ್ದವರನ್ನುದ್ದೇಶಿಸಿ, 'ನಮಗೆಲ್ಲ ಇನ್ನು ಬದುಕಲು ಯಾವ ದಾರಿಯೂ ಕಾಣುತ್ತಿಲ್ಲ. ನಮ್ಮ ನೀರಿನ ಸಂಗ್ರಹಣೆ ತೀರಿತು. ಹೊರಗಿನಿಂದ ನಮಗೆ ಯಾವ ನೆರವೂ ಬರುವ ಭರವಸೆ ಕಾಣುತ್ತಿಲ್ಲ. ಭಗವಂತನಿಗೆ ನಾವೆಲ್ಲರೂ ಶರಣಾಗುವುದನ್ನುಳಿದು ಬೇರೆ ಮಾರ್ಗವಿಲ್ಲ. ಶ್ರೀಮತಿ ನನ್ ಅವರು ಪ್ರಾರ್ಥನಾ ಸಭೆಯನ್ನು ಸೇರಿಸುತ್ತಾರೆ. ನಾವೆಲ್ಲ ಒಮ್ಮನಸ್ಸಿನಿಂದ ಪ್ರಾರ್ಥಿಸೋಣ.'

ಎಂದು ಹೇಳಿದರು.

"ನಮ್ಮ ಬಳಿ ಹೇಗೋ ನೀರಿನಲ್ಲಿ ನೆನೆದು ಜೀರ್ಣವಾಗಿದ್ದ ಬೈಬಲ್ಲೊಂದು ಉಳಿದುಕೊಂಡಿತ್ತು. ಶ್ರೀಮತಿ ನನ್‌ರವರ ಮುಖ ಬಿಸಿಲಿನಿಂದ ಬೆಂದು ಕಪ್ಪಿಟ್ಟಿತ್ತು. ಬಾಯಾರಿಕೆ ಹಸಿವಿನಿಂದ ಬಳಲಿ ಕಂಗೆಟ್ಟಿದ್ದ ಆಕೆ ಬೆಬಲ್ಲಿನಿಂದ ಕೆಲವು ವಾಕ್ಯಗಳನ್ನು ನಡುಗುವ ದನಿಯಲ್ಲಿ ಉದ್ಗರಿಸಿದಾಗ ನಾವೆಲ್ಲ ಆಕೆಯೊಡನೆ ಒಮ್ಮನಸ್ಸಿನಿಂದ ದೇವರಿಗೆ ಪ್ರಾರ್ಥನೆ ಸಲ್ಲಿಸಿದೆವು. ಪ್ರಾರ್ಥನಾ ಸಭೆಯಲ್ಲಿ ಒಟ್ಟು ಐವತ್ತು ಜನರಿದ್ದುದು ಕಂಡು ಬಂದಿತು.

"ಒಂದು ದಿನ, ಲೆಫ್ಟಿನೆಂಟ್ ಕರ್ನಲ್ ಪಾಮರ್ ದೋಣಿಯಲ್ಲಿ ಕಾಣಲಿಲ್ಲ. ಶ್ರೀಮತಿ ನನ್ ನನ್ನ ಕಿವಿಯಲ್ಲಿ, 'ಪಾಮರ್ ಕೊಲೆ ಮಾಡಲ್ಪಟ್ಟದ್ದನ್ನು ಕಂಡೆ' ಎಂದು ಮೆಲ್ಲನೆ ಉಸುರಿ ದೋಣಿಯ ಡೆಕ್ಕಿನ ಕೆಳ ಅಂಕಣದತ್ತ ಕೈ ತೋರಿಸಿದಳು. ಆ ಐವರು ಕೊಲೆಪಾತಕರು ಮೂಲೆಯಲ್ಲಿ ಕುಳಿತು ಪರಸ್ಪರ ಪಿಸುಗುಟ್ಟಿಕೊಂಡು ಮಾತನಾಡುತ್ತಿದ್ದರು. ಆ ದಿನ ಶ್ರೀಮತಿ ನನ್ ಪ್ರಜ್ಞಾಹೀನಳಾಗಿ ಅದೇ ರಾತ್ರಿ ಸತ್ತಳು.

"ಅನಂತರ ಆ ಐವರು ಕೊಲೆಪಾತಕರು ಬಹಿರಂಗವಾಗಿಯೇ ಕಾರ್ಯಾಚರಣೆಗೆ ತೊಡಗಿದರು. ನಮ್ಮ ಕಣ್ಣ ಮುಂದೆಯೇ ಅವರು ತರುಣ ಸಿಪಾಯಿಯೊಬ್ಬನ ಮೇಲೆರಗಿ ನಜ್ಜುಗುಜ್ಜಾಗಿದ್ದ ತಗಡಿನ ಡಬ್ಬಿಯೊಂದರ ಮೊನಚಾದ ಭಾಗದಿಂದ ಅವನ ಕತ್ತನ್ನು ಕೊಯ್ದು ಕಡಲಿಗೆ ನೂಕಿದರು.

ಆ ಅಮಾನುಷ ಪ್ರಕರಣವನ್ನು ಕಂಡ ವಾರಂಟ್ ಆಫೀಸರ್ ಮೆಕೆಂಜಿ ಎಂಬವರು, 'ನಾವೆಲ್ಲರೂ ಈ ಕೊಲೆಪಾತಕರಿಂದ ಹತರಾಗುತ್ತೇವೆಂಬುದು ಈಗಲಾದರೂ ನಿಮಗೆ ಮನವರಿಕೆಯಾಯಿತೆ? ನೋಡುತ್ತೀರಿ, ಈ ದೋಣಿಯನ್ನು ಅವರು ತಮ್ಮ ವಶಕ್ಕೆ ತೆಗೆದುಕೊಂಡು ನಮ್ಮನ್ನೆಲ್ಲಾ ನೀರು ಪಾಲು ಮಾಡುತ್ತಾರೆ.' ಎಂದರು.

ಈಗಲಾದರೂ ನಾವು ಬಲಪ್ರದರ್ಶನ ಮಾಡದೆ ಹೋದರೆ ನಮಗೆ ಕ್ರೂರ ಸಾವು ಖಂಡಿತವೆಂಬ ಅಂಶ ನನಗೆ ಮನದಟ್ಟಾಯಿತು. ಮೆಕೆಂಜಿಯೊಡನೆ ಮುಂದಿನ ಯೋಜನೆಯ ಬಗ್ಗೆ ಸಮಾಲೋಚಿಸಿದೆ. ದೋಣಿಯಲ್ಲಿದ್ದವರಲ್ಲಿ ಹದಿನಾಲ್ಕು ಜನ, ಕೊಲೆಗಡುಕರನ್ನು ಸದೆಬಡಿಯುವ ನಮ್ಮ ಯತ್ನದಲ್ಲಿ ಪಾಲ್ಗೊಳ್ಳಲು ಸಿದ್ಧರಿರುವರೆಂದು ಮೆಕೆಂಜಿ ತಿಳಿಸಿದರು.

ಕತ್ತಲಾದಾಗ ನಾವು ಹದಿನಾರು ಜನ ಡೆಕ್ಕಿನ ಮೇಲಿನಿಂದ ದೋಣಿಯ ಕೆಳ ಅಂಕಣಕ್ಕಿಳಿದು ಮೂಲೆಯಲ್ಲಿ ಕುಳಿತಿದ್ದ ಕೊಲೆಪಾತಕಗಳೆಡೆಗೆ ನಿಧಾನವಾಗಿ ಸಾಗಿದೆವು. ಅವರಲ್ಲೊಬ್ಬ ನಮ್ಮನ್ನು ಕಂಡು, 'ಅಗೋ ಅವರು ಬಂದರು.' ಎಂದು ಕೂಗಿಕೊಂಡ. ನಮ್ಮಲ್ಲಿನ ಹಾರ್ಡಿ ಎಂಬವ ಮೊದಲು ಹೋಗಿ ಅವರ ಮೇಲೆ ಬಿದ್ದ. ಕೊಲೆಪಾತಕನೊಬ್ಬ ಅಡಗಿಸಿಟ್ಟುಕೊಂಡಿದ್ದ ಸೀಸೆಯಿಂದ ಸಾರ್ಡಿಯ ತಲೆಯ ಮೇಲೆ 'ಪಳ್' ಎಂದು ಹೊಡೆದ. ಚೂರು ಚೂರಾಯಿತು. ಅದೆಂಥ ಶಕ್ತಿ ಅಡಗಿತ್ತೋ! ನಾವೆಲ್ಲ ಸೇರಿ ಕೊಲೆಪಾತಕಗಳೊಡನೆ ಬರಿಗೈಯಲ್ಲೇ ಹೋರಾಡಿ ಅವರನ್ನೆಲ್ಲ ಅನಾಮತ್ ಎತ್ತಿ ನೀರಿಗೆಸೆದುಬಿಟ್ಟೆವು.

"ಆ ಪೈಕಿ ಮೂವರು ಈಜಿಕೊಂಡು ಬಂದು ಬಂದೂಕುಗಳನ್ನಿರಿಸಲು ಮಾಡಿದ್ದ ದೋಣಿಯ ಕಿಂಡಿಗಳಲ್ಲಿ ಕೈ ಹಾಕಿ ನೇತಾಡುತ್ತಾ ಮೇಲೆ ಬರಲು ಪ್ರಯತ್ನಿಸುತ್ತಿದ್ದರು. ಹುಟ್ಟು ಹಾಕಲು ಅನುಕೂಲವಾಗುವಂತೆ ದೋಣಿಗೆ ಅಳವಡಿಸಲಾಗಿದ್ದ ಕಬ್ಬಿಣದ ಬಳೆಗಳನ್ನು (Row Lock) ಕಳಚಿಕೊಂಡು ಕಿಂಡಿಯಲ್ಲಿ ಕೈ ಹಾಕಿ ನೇತಾಡುತ್ತಿದ್ದ ಕೊಲೆಪಾತಕರ ಬೆರಳುಗಳನ್ನು ಬಲವಾಗಿ ಜಜ್ಜಿದಾಗ ಅವರು ಕೈ ಬಿಟ್ಟು ನೀರಿನಲ್ಲಿ ಮುಳುಗಿ ಹೋದರು.

" ಈ ಹೋರಾಟದಲ್ಲಿ ನಮ್ಮಲ್ಲಿನ ಹಲವಾರು ಮಂದಿ ನೀರಿನ ಪಾಲಾಗಿದ್ದರು. ಸುಡುವ ಬಿಸಿಲಿನಿಂದ, ಉಪ್ಪು ನೀರಿನ ಸೇಚನದಿಂದ ನಮ್ಮ ಮೈ ಮೇಲಿನ ಬಟ್ಟೆಗಳು ರಟ್ಟಿನಂತಾಗಿ

ಚಂದಿ ಚಂದಿಯಾಗಿ. ಕೊನೆಗೆ ನಾವು ಅರೆ ನಿರ್ವಾಣ ಸ್ಥಿತಿಗಿಳಿದೆವು. ನಮ್ಮ ಮೈ ಚರ್ಮ ಸೂರ್ಯನ ತಾಪದಿಂದಾಗಿ ಕಪ್ಪಾಗಿ ಹೋಗಿತ್ತು. ಮುಖ ಮೈ ಮೇಲೆ ಎದ್ದಿದ್ದ ಬೊಕ್ಕೆಗಳ ಮೇಲಿನ ಚರ್ಮ ಬಿಸಿಲಿನ ಝಳಕ್ಕೆ ಕರಗಿ ಹೋಗಿ ಗಾಯಗಳಲ್ಲೆಲ್ಲ ಹುಣ್ಣುಗಳಾಗಿದ್ದವು.

ಮುಂದೆ ಒಂದು ದಿನ ಮಳೆ ಬರುವತನಕ ದೋಣಿಯಲ್ಲಿ ನಡೆದ ಘಟನೆಗಳ ಬಗ್ಗೆ ನನಗೆ ಸ್ಪಷ್ಟವಾದ ಅರಿವಿರಲಿಲ್ಲ. ಒಂದು ತೆರನಾದ ಮಂಕು ನನ್ನನ್ನಾವರಿಸಿಕೊಂಡಿದ್ದಿತು. ಕಣ್ಣಿಗೆ ಕಾಣುತ್ತಿದ್ದುದನ್ನು ಮಿದುಳು ಗ್ರಹಿಸುತ್ತಲೇ ಇರಲಿಲ್ಲ. ಈ ಭ್ರಾಮಕ ಸ್ಥಿತಿಯಿಂದ ನಾನು ಹೊರಬಂದದ್ದು ಆ ದಿನ ಅಪರೂಪದ ಮಳೆ ಬಿದ್ದಾಗಲೆ. ಆಕಾಶದಿಂದ ದೇವತೆಗಳು ನಮಗಾಗಿ ಕಳುಹಿಸಿಕೊಟ್ಟ ಮಳೆ ಅದು!

''ದೂರದಲ್ಲಿ ಬೀಳುತ್ತಿದ್ದ ಮಳೆ ನಮ್ಮೆಡೆಗೆ ನಿಧಾನ ಗತಿಯಲ್ಲಿ ಚಲಿಸುತ್ತಾ ಬರುತ್ತಿತ್ತು. ನಾವೆಲ್ಲ ಜಾತಕ ಪಕ್ಷಿಗಳಂತೆ ಬಾಯಿ ತೆರೆದುಕೊಂಡು ಆಕಾಶವನ್ನೇ ದಿಟ್ಟಿಸುತ್ತಾ ನಿಂತಿದ್ದೆವು. ಇದ್ದಕ್ಕಿದ್ದಂತೆ ಪ್ರಾರಂಭವಾದ ಬಿರುಗಾಳಿಯ ಭರಾಟೆಗೆ ನಮ್ಮತ್ತ ಧಾವಿಸಿ ಬರುತ್ತಿದ್ದ ಮಳೆಯ ಮೋಡಗಳು ಬೇರೆ ಕಡೆಗೆ ಚಲಿಸಿ ಹೋಗಲಾರಂಭಿಸಿದಾಗ ನಮಗಾಗುತ್ತಿದ್ದ ನಿರಾಸೆ ಹೇಳತೀರದು.

''ಕೊನೆಗೊಮ್ಮೆ ನಮ್ಮ ಮೇಲೆ ಮಳೆ ಬೀಳಲಾರಂಭಿಸಿತು. ಅಥಂಥ ಮಳೆಯಲ್ಲ, ಅದು. ಆಕಾಶದ ಒಡಲನ್ನೇ ಸೀಳಿಕೊಂಡು ದಬದಬನೆ ಸುರಿದ ಮಳೆ ಬರಿದಾದ ನೀರಿನ ಕುಪ್ಪಿಗಳನ್ನು ತುಂಬುವತನಕ ಯಾರೂ ನೀರನ್ನು ಕುಡಿಯಬಾರದೆಂದು ಹೇಳಿದೆ. ಕುಪ್ಪಿಗಳನ್ನು ತುಂಬಿಟ್ಟುಕೊಂಡಾದ ಮೇಲೆ ಮಳೆಯ ನೀರನ್ನು ಬೊಗಸೆಗಳಲ್ಲಿ ಹಿಡಿದುಕೊಂಡು ಎಲ್ಲರೂ ಮತ್ತೆಂದೂ ಇದು ಸಿಕ್ಕದೇನೋ ಎಂಬಂತೆ ಯಥೇಚ್ಛವಾಗಿ ಕುಡಿದು ತಣಿದೆವು.

''ದೇವರ ಕರುಣೆ ಇಷ್ಟಕ್ಕೇ ತೀರಲಿಲ್ಲ. ಎಲ್ಲಿಂದಲೋ ಹನ್ನೆರಡು ನೀಲಿ ಬಣ್ಣದ ಸಮುದ್ರ ಪಕ್ಷಿಗಳು ಬಂದು ನಮ್ಮ ಮೇಲೆ ಹಾರಲಾರಂಭಿಸಿ ಕೊನೆಗೆ ದೋಣಿಯ ಅಂಚಿನ ಮೇಲೆ ನಮ್ಮ ತಲೆ ಭುಜಗಳ ಮೇಲೆ ಕುಳಿತುಕೊಂಡವು. ನಾವು ಶಿಲಾಪ್ರತಿಮೆಗಳಂತೆ ನಿಂತಿದ್ದು ಗಕ್ಕನೆ ಅವುಗಳನ್ನು ಹಿಡಿದುಕೊಂಡೆವು. ಆದರೆ ಏಳು ಪಕ್ಷಿಗಳನ್ನು ಮಾತ್ರ ಹಿಡಿದುಕೊಳ್ಳಲು ಸಾಧ್ಯವಾಯಿತು. ಪಕ್ಷಿಗಳ ರೆಕ್ಕೆಪುಕ್ಕಗಳನ್ನು ಕೀಳುವುದನ್ನೂ ಮರೆತು ಹಸಿಹಸಿಯಾಗಿ ತೋಳಗಳ ಹಾಗೆ ಪಕ್ಷಿಗಳನ್ನು ಕಚ್ಚಿ ಕವರಿ ತಿಂದೆವು. ಬಹು ದಿನಗಳ ಹಸಿವು ಬಾಯಾರಿಕೆಗಳ ಅನಿರೀಕ್ಷಿತ ಶಮನದಿಂದ ಸೊಕ್ಕಿದಂತಾಗಿ ಎಲ್ಲರೂ ಒಂದು ತೆರನಾದ ಮಂಪರಿನ ಸ್ಥಿತಿಗಳಿದ್ದೆವು. ಅನಂತರ ಗಂಟೆಗಳು ಕಳೆದಂತೆ ದಿನಗಳು ಸರಿದಂತೆ ದೋಣಿ ಗಾಳಿ ಬೀಸಿದತ್ತ ಕೊಚ್ಚಿಕೊಂಡು ಹೋಗುತ್ತಿತ್ತು.

''ದೋಣಿಯಲ್ಲಿ ಯಾರೂ ಮಾತನಾಡದೆ ಕುಳಿತಲ್ಲೇ ತೂಕಡಿಸುತ್ತಿದ್ದರು. ಆಗ ಕೇಳಿ ಬರುತ್ತಿದ್ದ ದೋಣಿಯ ಕ್ರಿಕ್ ಕ್ರಿಕ್ ಸದ್ದು ಅಲೆಗಳ ಅಬ್ಬರ ಮೌನವನ್ನು ಕಲಕುತ್ತಿತ್ತು. ಆ ವಿಚಿತ್ರ ಮೌನದಲ್ಲೇ ಎಷ್ಟೋ ದಿನಗಳು ಸದ್ದಿಲ್ಲದೆ ಉರುಳಿದುವು.

''ಕೊನೆಗೆ ದೋಣಿಯಲ್ಲಿ ಉಳಿದುಕೊಂಡವರು ಏಳೇ ಜನ ಚೀನಿ ಯುವತಿ ದೋರಿಸ್ ಲಿಮ್, ಒಬ್ಬ ಸಿಪಾಯಿ ನಾಲ್ಕು ಜನ ಜಾವಾಬೆಸ್ತರು ಮತ್ತು ನಾನು.

ಒಂದು ದಿನ ಮಂಪರಿನಲ್ಲಿದ್ದ ನನಗೆ ಇದ್ದಕ್ಕಿದ್ದಂತೆ ಎಚ್ಚರವಾಯಿತು. ದೋಣಿಯ ಕೆಳ ಅಂಕಣದಲ್ಲಿ ಮಲಗಿದ್ದ ಸಿಪಾಯಿ ಸಹಾಯಕ್ಕಾಗಿ ಕಿರುಚುತ್ತಿದ್ದ. ನಾನು ಮೆಲ್ಲನೆ ಒಳಗೆ ಇಣಕಿ ನೋಡಿದೆ. ಜಾವಾ ಬೆಸ್ತರಿಬ್ಬರು ಕಬ್ಬಿಣದ ಬಳೆಗಳಿಂದ ಸಿಪಾಯಿಯ ತಲೆಯನ್ನು ಚುಚ್ಚುತ್ತಿದ್ದರು. ಮತ್ತೊಬ್ಬ ಖಾಲಿ ಡಬ್ಬಿಯೊಂದರ ತಗಡನ್ನು ಮಡಚಿ ಚೂಪಾಗಿ ಮಾಡಿಕೊಂಡು ಸಿಪಾಯಿಯ ಮೈಯನ್ನು ಗೀರುತ್ತಿದ್ದ. ಅವರಿಗೆ ಹುಚ್ಚು ಹಿಡಿದಿದೆಯೆಂದು ತಕ್ಷಣವೇ ನನಗೆ ಮನ

ವರಿಕೆಯಾಯಿತು. ಆ ದಿನ ಸಿಪಾಯಿಯೂ ಸತ್ತ. ಅದೇ ರಾತ್ರಿ ಒಬ್ಬ ಜಾವಾ ಬೆಸ್ತನೂ ಅಸು ನೀಗಿದ.

''ಕತ್ತಲಲ್ಲಿ ನಾನು ಡೆಕ್ಕಿನ ಮೇಲಿನಿಂದ ಮೆಲ್ಲನೆ ತೆವಳಿಕೊಂಡು ದೋಣಿಯ ಕೆಳ ಅಂಕಣಕ್ಕೆ ಇಳಿದು ಹೋದೆ. ಕೆಳಗೆ ಬಿದ್ದಿದ್ದ ಹುಟ್ಟಿನ ಕಬ್ಬಿಣದ ಬಳೆಗಳನ್ನು ತೆಗೆದುಕೊಂಡು ಬಂದು ನೀರಿಗೆಸೆದೆ. ನನ್ನನ್ನೂ ಡೋರಿಸ್ ಲಿಮ್‌ಳನ್ನೂ ಕೊಲ್ಲಬೇಕೆಂದರೆ ಅವರು ಬೇರೆ ಆಯುಧಗಳನ್ನು ಹುಡುಕಿಕೊಳ್ಳಬೇಕಿತ್ತು.

''ನಾವಿಬ್ಬರು ಎಚ್ಚರವಹಿಸಿ ಆ ಮೂವರು ಹುಚ್ಚು ಬೆಸ್ತರ ಮೇಲೆ ಕಣ್ಣಿಟ್ಟಿರುತ್ತಿದ್ದೆವು. ರಾತ್ರಿಯಾಗುತ್ತ ನಮಗರಿವಿಲ್ಲದಂತೆ ನಿದ್ರೆ ನಮ್ಮನ್ನು ತನ್ನ ಮಡಿಲಿಗೆಳೆದುಕೊಳ್ಳುತ್ತಿತ್ತು.

''ಒಂದು ರಾತ್ರಿ ಇದ್ದಕ್ಕಿದ್ದಂತೆ ನನಗೆ ಎಚ್ಚರವಾಯಿತು. ಬೆಸ್ತನೊಬ್ಬ ನನ್ನ ಮೊಳಕೈ ಅಲುಗಿಸುತ್ತ ಯಾವುದೋ ಪದವನ್ನು ಪದೇ ಪದೇ ಉಚ್ಚರಿಸುತ್ತ ತೋಳದಂತೆ ಕೂಗುತ್ತಿದ್ದ, ಅವನು ಕೂಗುತ್ತಿದ್ದುದು ಜಾವಾ ಭಾಷೆಯಲ್ಲಿ 'ಭೂಮಿ' ಎಂದು ಅನಂತರ ತಿಳಿಯಿತು. ಅವನು ತೋರಿಸಿದ ಕಡೆ ಕಣ್ಣು ಹಾಯಿಸಿದೆ! ಕತ್ತಲೆಗಿಂತ ಕಪ್ಪಾದ ಆಕೃತಿಯೊಂದು ಕಂಡುಬಂತು.

''ದೋಣಿ ಉಳಿದಿದ್ದ ನಾವು ಐವರೂ ದೋಣಿಯ ಅಷ್ಟ ಕಂಬಿಯನ್ನು ಹಿಡಿದು ಬಾಗಿಕೊಂಡು ಜಾವಾ ಬೆಸ್ತ ತೋರಿಸಿದತ್ತ ತದೇಕ ದೃಷ್ಟಿಯಿಂದ ನೋಡತೊಡಗಿದೆವು ಅದು ಭೂಮಿಯೋ ಅಥವಾ ನಮ್ಮ ಭ್ರಾಮಕ ಕಲ್ಪನೆಯೋ ಎಂದು ಸಂಶಯಿತರಾದೆವು. ಅಷ್ಟರಲ್ಲಿ ಸ್ಪಷ್ಟವಾಗಿ ಕೇಳಿ ಬಂತು ಬಂಡೆಗೆ ಅಪ್ಪಳಿಸುವ ಸಮುದ್ರದಲೆಗಳ ಗರ್ಜನೆ.

''ನಾವು ದೋಣಿಯಲ್ಲಿ ಕುಳಿತು ಅಂದಿಗೆ ಇಪ್ಪತ್ತಾರು ದಿನಗಳು ಉರುಳಿದ್ದವು. ಒಂದು ಸಾವಿರ ಮೈಲುಗಳಿಗಿಂತ ಹೆಚ್ಚು ದೂರವನ್ನು ನಾವು ಕ್ರಮಿಸಿದ್ದೆವು. ಅದು ದಿಕ್ಕು ದೆಸೆಯಿಲ್ಲದ. ಗಾಳಿ ಬಿಸಿದತ್ತ ಸಾಗಿದ ಪ್ರಯಾಣ. ದಡವನ್ನು ಕಾಣಿಸಿದ ಆ ಅಗೋಚರ ದೈವಕ್ಕೂ, ಭಯಂಕರ ಬಿರುಗಾಳಿಯಲ್ಲೂ ಮುಳುಗದೆ ನಮಗೆ ರಕ್ಷಣೆಯಿತ್ತ ಆ ಜೀವರಕ್ಷಕ ದೋಣಿಗೂ ಮನದಲ್ಲೇ ಸಾವಿರ ಸಾವಿರ ನಮಸ್ಕಾರಗಳನ್ನು ಸಲ್ಲಿಸಿದೆವು.

''ದೋಣಿ ದಡವನ್ನು ತಲುಪಿದಾಗ ಇನ್ನೂ ಬೆಳಗಾಗಿರಲಿಲ್ಲ. ನಾವೆಲ್ಲಾ ದೋಣಿಯಿಂದ ಹಾರಿ ದಡವನ್ನು ತಲುಪಿ ದಡದ ಮೇಲೆ ಸಂಭ್ರಮದಿಂದ ಉರುಳಾಡಿದೆವು. ಅತ್ತೆವು, ನಕ್ಕೆವು. ನಾವಾಗ ಕನಸೋ ನನಸೋ ಒಂದು ತಿಳಿಯದಂಥ ಒಂದು ರೀತಿಯ ಭ್ರಾಮಕ ಸ್ಥಿತಿಯಲ್ಲಿದ್ದೆವು.

''ದೋಣಿಯಲ್ಲಿದ್ದಾಗ ನಾವು ಬದುಕಿದ್ದ ಜೀವಚ್ಛವಗಳಂತಿದ್ದೆವು. ದೋಣಿಯಾನದ ದಿನಗಳು ಆ ಕ್ಷಣಕ್ಕೆ ನಮಗೆ ಗತಜನ್ಮದ ನೆನಪುಗಳಂತೆ ಅನಿಸಿಬಿಟ್ಟವು. ನಮಗೆ ಭೂಮಿ ಎಂಬ 'ಸ್ವರ್ಗ' ದೊರೆತಿತ್ತು. ಅಲ್ಲದೆ ನಿಜವಾಗಿಯೂ ನಮಗೆ ಜನ್ಮವಾಗಿತ್ತು. ನಾವು ಅಪ್ಪಿ ಮಲಗಿದ್ದ ಭೂಮಿ, ಬೀಸುತ್ತಿದ್ದ ಚೇತನದಾಯಕ ತಂಗಾಳಿ ನಮಗೆ ಸ್ವರ್ಗ ಸುಖವನ್ನೆ ನೀಡಿತ್ತು.

''ನಾವು ದೋಣಿಯಿಂದಿಳಿದು ಕಾಲಿರಿಸಿದ ನೆಲ ಪಶ್ಚಿಮ ಸುಮಾತ್ರಾದಿಂದ ಸುಮಾರು ಅರವತ್ತು ಮೈಲುಗಳಷ್ಟು ದೂರದಲ್ಲಿದ್ದ 'ಸಿಪೋರ' ಎಂಬ ಚಿಕ್ಕ ದ್ವೀಪವೆಂದು ನಂತರ ನಮಗೆ ತಿಳಿಯಿತು.

''ಅಪೂರ್ವವಾದ ಸುಖದ ಸುರೆಯನ್ನು ಸವಿದು ಸೊಕ್ಕಿದಂತೆ ನಾವೆಲ್ಲ ಬೆಳಗಾಗುವವರೆಗೂ ಸಮುದ್ರ ದಡದ ಮೇಲೆ ಮಲಗಿದ್ದೆವು. ಅಂಥ ಸುಖನಿದ್ರೆಯನ್ನನುಭವಿಸದೆ ತುಂಬಾ ದಿನಗಳಾಗಿತ್ತು. ಸಮುದ್ರದ ಮೇಲೆ ಬೆಳಗಿನ ತಂಗಾಳಿ ಮೈದಡವಿದಾಗ ನಾನು ಎಚ್ಚೆತ್ತೆ. ಬಾಲರವಿಯ ಹೊಂಗಿರಣಗಳು ಸಮುದ್ರದ ಜಲರಾಶಿಯ ಮೇಲೆ ಪ್ರತಿಫಲಿಸುತ್ತಿದ್ದವು. ನಮ್ಮ ಹಿಂದೆಯೇ ವನರಾಜಿಗಳಿಂದ ಕೂಡಿದ ದಟ್ಟವಾದ ನಿತ್ಯ ಹರಿದ್ವರ್ಣದ ಕಾಂತಾರ.

''ಸೂರ್ಯ ಕಿರಣಗಳು ನೆಲತಾಕದಂತೆ ಸುಮಾರು ನೂರಐವತ್ತು ಅಡಿಗಳಷ್ಟು ಎತ್ತರಕ್ಕೆ

ಬೆಳೆದು ನಿಂತ ಕಪೂರ್, ಬಲರ್, ಮೆರಂತಿ, ಕೆರಂಗ್ ಮೊದಲಾದ ಬಗೆಬಗೆಯ ಮಹಾವೃಕ್ಷಗಳೆದುರು ನಾವೆಲ್ಲಾ ಕುಬ್ಜರಂತೆ ಕಂಡು ಬಂದೆವು. ದೃಷ್ಟಿ ಹಾಯುವವರೆಗೂ ಎಲ್ಲೆಲ್ಲೂ ಹಸಿರೇ ಹಸಿರು! ಹಿಂದೆಂದೂ ನಾವು ಕಾಡು ಬೆಟ್ಟಗುಡ್ಡಗಳನ್ನು ಕಂಡಿರಲಿಲ್ಲವೆಂದಲ್ಲ. ಆದರೆ ಅಂದು ಪ್ರಕೃತಿಯ ಪ್ರತಿಯೊಂದೂ ಅದ್ಭುತವಾಗಿ, ಆಕರ್ಷಣೀಯವಾಗಿ ನಮ್ಮನ್ನು ಸೆಳೆಯುತ್ತಿತ್ತು; ಮೋಡಿಗೆ ಒಳಪಡಿಸುತ್ತಿತ್ತು.

''ಕಾಡಿನ ಅಂಚಿನಲ್ಲಿ ಮೇಯುತ್ತಿದ್ದ ಹೊಂಬಣ್ಣದ ಜಿಂಕೆಗಳು ನಮ್ಮ ಆಗಮನದಿಂದ ಬೆದರಿ ಚಿಮ್ಮಿ ನೆಗೆಯುತ್ತ ಕ್ಷಣ ಮಾತ್ರದಲ್ಲಿ ಕಾಡಿನಲ್ಲಿ ಕಾಣೆಯಾದವು. ಸೂರ್ಯನ ಬಿಸಿಲು ನೆಲ ಮುಟ್ಟದಷ್ಟು ಗಿಡಮರಬಳ್ಳಿಗಳು ಒಂದಕ್ಕೊಂದು ಹೆಣೆದುಕೊಂಡು ದಟ್ಟ ಕಾಡಿನಲ್ಲಿ ಹಗಲಲ್ಲೂ ಒಂದು ಬಗೆಯ ಮಬ್ಬುಗತ್ತಲಿನ ವಾತಾವರಣವನ್ನು ನಿರ್ಮಿಸಿದ್ದವು. ಹಾದಿಯೇ ಕಾಣದ ಬಿದಿರು ಮೆಳೆಗಳ, ಮುಳ್ಳಿನ ಪೊದೆಗಳ ಕಾಡಿನ ಜೌಗು ನೆಲದಲ್ಲಿ ನಾವು ಐವರೂ ಕಾಲು ಸಾಗಿದತ್ತ ನಡೆದೆವು. ಎದುರಿಗೆ ಬೆಟ್ಟವೊಂದು ಎದುರಾಯಿತು. ನಾವೆಲ್ಲ ನಿಧಾನವಾಗಿ ಗುಡ್ಡವನ್ನೇರಿದೆವು. ಗುಡ್ಡದ ತುದಿಯಲ್ಲಿ ನಿಂತು ಕಣ್ಣು ಹಾಯಿಸಿದಾಗ ನೋಟ ಹಾಯುವವರೆಗೂ ದಟ್ಟ ಕಾಡನ್ನು ಹೊತ್ತ ಗಿರಿಗಳ ಸಾಲೇ ಸಾಲು. ಗುಡ್ಡದ ನಡುಭಾಗದಲ್ಲಿ ಅನೇಕ ಗುಹೆಗಳಿದ್ದವು. ಅದುವರೆಗೂ ಮರೆಯಾಗಿದ್ದ ಹೊಟ್ಟೆ ಹಸಿವು ತಾನೂ ನಮ್ಮ ಜೊತೆಗಿರುವ ನೆನಪನ್ನುಂಟು ಮಾಡಿತು. ಸಮೀಪದಲ್ಲಿ ನೀರಿನ ಒರತೆಯೊಂದು ಕಾಣಿಸಿತು. ಫಲಭಾರದಿಂದ ಬೀಗುತ್ತಿದ್ದ ಕಾಡುಬಾಳೆಯ ಗಿಡಗಳು ಅಲ್ಲಲ್ಲಾ ಹೇರಳವಾಗಿ ಬೆಳೆದು ನಮ್ಮ ಬರವಿಗಾಗಿ ಕಾದು ನಿಂತಂತೆ ತೋರಿತು.

''ಒರತೆಯ ಬಳಿ ಹೋಗಿ ಸಿಹಿಯಾದ ತಿಳಿನೀರನ್ನು ಬೊಗಸೆಗಳಲ್ಲಿ ತುಂಬಿಕೊಂಡು ಕುಡಿದಾಗ ಶರೀರದಲ್ಲಿ ನವ ಚೈತನ್ಯ ಮೂಡಿತು. ಬಗೆಬಗೆಯ ಪಕ್ಷಿಗಳು ಚಿಲಿಪಿಲಿಗುಟ್ಟುತ್ತಾ ಗೊನೆಯಲ್ಲಿ ಮಾಗಿ ನಿಂತ ಹಣ್ಣುಗಳನ್ನು ಕುಕ್ಕಿ ಕುಕ್ಕಿ ತಿನ್ನುತ್ತಿದ್ದವು. ಹಿಂಡು ಹಿಂಡು ಮಂಗಗಳು ಅಲ್ಲಿ ಜೀಡು ಬಿಟ್ಟು ಹಣ್ಣಿನ ಸಮಾರಾಧನೆಯನ್ನೇ ನಡೆಸಿದ್ದವು. ವನದೇವಿ ವನ್ಯ ಜೀವಿಗಳಿಗಾಗಿ ಏರ್ಪಡಿಸಿದ್ದ ಔತಣ ಕೂಟದಂತಿತ್ತು ಆ ಸಹಜ ಸುಂದರ ನೋಟ. ನಾವೂ ಬಾಳೆ ಹಣ್ಣುಗಳನ್ನು ತಿಂದು ತೇಗಿದೆವು.

''ಅಂದು ಹಗಲೆಲ್ಲಾ ಕಾಡಿನಲ್ಲಿ ಅಲೆದಾಡಿದೆವು. ಕಾಡಿನಲ್ಲಿ ಆನೆಗಳ ಹಿಂಡೊಂದನ್ನು ಕಂಡೆವು. ಕೊಂಬಿನ ಸಲಗನ ಹಿಂದೆ ಶಿಸ್ತಿನಿಂದ ಸಾಗುತ್ತಿದ್ದ ಆನೆಗಳ ಘನಗಾಂಭೀರ್ಯವನ್ನು ಕಂಡು ಬೆರಗಾದೆವು. ಬಂಗಾರದ ಮೈಬಣ್ಣದ ಚುಕ್ಕೆ ಜಿಂಕೆಗಳು ಕಾಡಿನಲ್ಲಿ ಅಲೆದಾಡುವುದನ್ನು ಕಂಡು ಆನಂದಿಸಿದೆವು. ಅಂದು ಕತ್ತಲಾಗುವ ಮುನ್ನ ತಂಗಲು ಆಸರೆಯೊಂದನ್ನು ಹುಡುಕಬೇಕಿತ್ತು. ಚೀನೀ ಯುವತಿ ಡೋರಿಸ್‌ಲಿಮ್ ಅನೇಕ ಭಾಷೆಗಳನ್ನು ಬಲ್ಲವಳಾಗಿದ್ದಳು. ಜಾವಾ ಬೆಸ್ತರೊಂದಿಗೆ 'ಬಟುಕ್' ಭಾಷೆಯಲ್ಲಿ ಸಹಜವಾಗಿ ಮಾತಾಡುತ್ತಿದ್ದಳು. ನಡುವಯಸ್ಸಿನ ಆ ಜಾವ ಬೆಸ್ತರಾದರೋ ಮುಗ್ಧರಾದ ಸರಳಸ್ವಭಾವದ ಜನರಾಗಿದ್ದರು.

''ಸಂಜೆ ತಂಗಲು ಸೂಕ್ತವಾದ ತಾವನ್ನು ಹುಡುಕುತ್ತಿರಬೇಕಾದರೆ ಆಕಾಶದಲ್ಲಿ ಮೋಡಗಳು ದಟ್ಟೈಸಿ ಮಳೆ ಆರಂಭವಾಯಿತು. ನಾವು ದೊಡ್ಡ ಕೆರಂಗ್ ಮರವೊಂದರ ಕೆಳಗೆ ಹೋಗಿ ನಿಂತೆವು. ಇದ್ದಕ್ಕಿದ್ದಂತೆ ಮರದ ಮೇಲಿನಿಂದ ಕಾಡನ್ನೇ ನಡುಗಿಸುವಂಥ ಕೇಕೆಯೊಂದು ಕೇಳಿಬಂತು. ನಮ್ಮೆಲ್ಲರ ಎದೆಗಳು ಝುಲ್ಲೆಂದವು. ಮರದ ಮೇಲಿದ್ದ ಪಕ್ಷಿಗಳು ಗಾಬರಿಯಿಂದ ಪಟಪಟನೆ ರೆಕ್ಕೆ ಬಡಿಯುತ್ತಾ ಚೆಲ್ಲಾಪಿಲ್ಲಿಯಾಗಿ ಹಾರಿಹೋದವು. ನಾವೆಲ್ಲಾ ತಲೆ ಎತ್ತಿ ಮೇಲೆ ನೋಡಿದಾಗ ನಮಗೆಲ್ಲಾ ಆಶ್ಚರ್ಯಕಾದಿತ್ತು. ಜಾವಾ ಬೆಸ್ತರು 'ಒರಂಗ್ ಉತನ್' ಎಂದು ಕಿರುಚಿದರು. ನಾಲ್ಕೂವರೆ ಅಡಿ ಎತ್ತರದ ದೊಡ್ಡ ಕೋತಿಯೊಂದು ನಿದ್ದೆಯಿಂದೆದ್ದು ಕಣ್ಣುಗಳನ್ನು ಹೊಸಕಿಕೊಳ್ಳುತ್ತಾ ಮತ್ತೊಮ್ಮೆ

ಕಾಡೆಲ್ಲಾ ನಡುಗುವಂತೆ ಕೇಕೆ ಹಾಕಿತು. ಉದ್ದನೆಯ ತೋಳುಗಳ ಉಬ್ಬಿದ ತೋಳಿನ ಬಲವಾದ ಸ್ನಾಯುಗಳ, ದಾಂಡಿನಾಕಾರದ ದಪ್ಪ ಬೆರಳುಗಳ ಆ ಕೋತಿಯ ಮೈ ತುಂಬ ರೋಮದಿಂದ ಕೂಡಿ ಭಯಂಕರವಾಗಿ ಕಾಣಿಸುತ್ತಿತ್ತು. ಸುಮಾರು ಇನ್ನೂರ ಐವತ್ತು ಪೌಂಡುಗಳಷ್ಟು ತೂಗುವ, ಮೂವರು ಮಾನವರ ದೈಹಿಕ ಬಲಕ್ಕೆ ಸಮನಾದ ಒರಂಗ್ ಉತನ್ ಎಂಬ ಆ ವಾನರ ಸುಮಾತ್ರ, ಬೋರ್ನಿಯೋ ಮತ್ತು ಮಲೆಯನ್ ಗೊಂಡಾರಣ್ಯಗಳಲ್ಲಿ ಕಾಣಸಿಗುವವೆಂದು ಜಾವಾನಿಗಳು ಹೇಳಿದರು. ಮಲೆಯನ್ ಆದಿವಾಸಿಗಳು 'ಮವಾಸ್' ಎಂದು ಕರೆಯುವ ಸಭ್ಯ ಸ್ವಭಾವದ ಈ ವಾನರ ಪೂರ್ಣಾಯುವನ್ನು ಹೊಂದಿದ್ದು ಮುಪ್ಪಿನವರೆಗೂ ಬದುಕುವುದೆಂದು ಬೆಸ್ತರಿಂದ ತಿಳಿಯಿತು. ಸಂಕೋಚ ಪ್ರವೃತ್ತಿಯ ಆ ವಾನರ ನಮ್ಮನ್ನು ಕಂಡು ಮರದಿಂದ ಮರಕ್ಕೆ ಜಿಗಿಯುತ್ತಾ ಕಣ್ಮರೆಯಾದಾಗ ನಾವೆಲ್ಲಾ ನೆಮ್ಮದಿಯ ನಿಟ್ಟುಸಿರುಬಿಟ್ಟೆವು.

ಮಳಲೆಯ ಜೋರು ಕಡಿಮೆಯಾಗಿತ್ತು. ಕೆಲವು ಕಾಡು ಕೋಳಿಗಳು ರೆಕ್ಕೆ ಬಡಿಯುತ್ತಾ ನಮ್ಮೆದುರು ಹಾದು ಸಮೀಪದ ಪೊದೆಗಳಲ್ಲಿ ನುಸುಳಿ ಕಣ್ಮರೆಯಾದವು. ನಮ್ಮೊಂದಿಗಿದ್ದ ಜಾವಾನಿ ಬೆಸ್ತರಿಗೆ ಕಾಡು ಕೋಳಿಗಳನ್ನು ಹಿಡಿಯುವ ಚಪಲವಾಯಿತು. ಅವರಿಬ್ಬರೂ ಪೊದೆಯ ಬಳಿ ಹೋಗಿ ಗಿಡಗಂಟಿಗಳನ್ನು ಸರಿಸಿ ನೋಡಿದಾಗ ಕೋಳಿಗಳು ಕಾಣಿಸಲಿಲ್ಲ. ಅಲ್ಲಿ ಅವರಿಗೆ ಕಂಡದ್ದು ಆಳೊಬ್ಬ ತೆವಳಿಕೊಂಡು ಒಳಗೆ ಹೋಗಬಹುದಾದಂತ ಒಂದು ದ್ವಾರ. ಕಾಡು ಪ್ರಾಣಿಗಳೇನಾದರೂ ಅಲ್ಲಿ ಅಡಗಿರಬಹುದೆಂಬ ಅನುಮಾನ ಮೂಡಿತು. ಅಷ್ಟರಲ್ಲಿ ಒಳಗಿನಿಂದ ಕಾಡುಕೋಳಿಗಳ ಚಿಲಿಪಿಲಿ ಸದ್ದು ಕೇಳಿಸಿತು. ಅವರಲ್ಲೊಬ್ಬ ತೆವಳಿಕೊಂಡು ಒಳಗ ಹೋದಂತೆ ಅದೊಂದು ವಿಶಾಲವಾದ ಗುಹೆಯಾಗಿರುವುದು ಕಂಡುಬಂತು. ನಾಲ್ಕಾರು ಮಂದಿ ಆರಾಮವಾಗಿ ಕಾಲು ಚಾಚಿಕೊಂಡು ಮಲಗಲು ಸಾಕಷ್ಟು ಸ್ಥಳಾವಕಾಶವಿತ್ತು. ಪರಕೀಯನ ವಾಸನೆ ಹಿಡಿದ ಕಾಡುಕೋಳಿಗಳು ಗಾಬರಿಯಿಂದ ಕಿಚಗುಟ್ಟಲಾರಂಭಿಸಿದವು. ಎರಡು ಕಾಡುಕೋಳಿಗಳನ್ನು ಹಿಡಿದುಕೊಂಡು ಗುಹೆಯಿಂದ ಹೊರಗೆ ಬಂದ ಜಾವಾ ಬೆಸ್ತ ಅಂದು ರಾತ್ರಿ ಮಲಗಲು ಪೊಗದಸ್ತಾದ ತಾವು ದೊರಕಿತೆಂದು ನಮಗೆ ಹೇಳಿದ.

''ಒಣಗಿದ ಪುಳ್ಳೆಗಳನ್ನು ಒಟ್ಟುಗೂಡಿಸಿ ಬೆಸ್ತರು ಬೆಂಕಿ ಮಾಡಿದರು. ಕಾಡು ಕೋಳಿಗಳ ಗೋಣು ಮುರಿದು ರೆಕ್ಕೆಪುಕ್ಕ ತರಿದು ಶುಚಿ ಮಾಡಿ ಬೆಂಕಿಯಲ್ಲಿ ಕೋಳಿಯನ್ನು ಹದವಾಗಿ ಬೇಯಿಸಿದರು. ಉರಿಯುವ ಬೆಂಕಿಯ ಮುಂದೆ ಕುಳಿತು ಸಪ್ಪೆಯಾದರೂ ಹದವಾಗಿ ಹಿತವಾಗಿದ್ದ ಕೋಳಿಯ ಮಾಂಸವನ್ನು ತಿಂದೆವು. ಅಂದು ರಾತ್ರಿ ಗುಹೆಯಲ್ಲಿ ಮಲಗಿದ್ದಾಗ ಆಗಾಗ ಕೂಗುತ್ತಿದ್ದ ಕಾಡು ಪ್ರಾಣಿಗಳನ್ನು ಕೂಗಿನಿಂದ ನಮಗೆ ಎಚ್ಚರವಾಗುತ್ತಿತ್ತು. ಮರದ ಮೇಲಿನ ಯಾವುದೋ ಜಾತಿಯ ಪಕ್ಕಿಯೊಂದು ವಿಚಿತ್ರವಾಗಿ ಕಿಟಾರನೆ ಕಿರುಚಿದಾಗಲೆಲ್ಲ ಬೆಚ್ಚಿಬೀಳುತ್ತಿದ್ದೆವು.

''ಮರುದಿನ ಬೆಳಿಗ್ಗೆ ಎದ್ದಾಗ ಹೊತ್ತಾಗಿತ್ತು.

''ಜನವಸತಿಯನ್ನರಸುತ್ತ ನಾವು ಆ ಗೊಂಡಾರಣ್ಯದಲ್ಲಿ ಸಾಗಿದಾಗ ಕಣಿವೆಯ ಹಳಿವಿನಲ್ಲಿ 'ಸೆಲಾಡಂಗ್' ಎಂಬ ಕಾಡು ಕಡವೆಗಳ ಹಿಂಡೊಂದನ್ನು ಕಂಡೆವು.

''ಅಂದು ಮಧ್ಯಾಹ್ನ ಬೆಸ್ತರು ಕಾಡಿನಿಂದ 'ಕೆಸವ' ಎಂಬ ಒಂದು ಬಗೆಯ ಗೆಣಸನ್ನು ಹುಡುಕಿತಂದರು. ಬೆಂಕಿ ಉರಿಸಿ ಗೆಣಸನ್ನು ಸುಟ್ಟುತಿಂದೆವು. ಅಂದು ಸಂಜೆಗೆ ಮೊದಲು ಅಡವಿಯಂಚಿನಲ್ಲಿ ಚಿಕ್ಕ ತೊರೆಯೊಂದರ ದಂಡೆಯ ಮೇಲಿದ್ದ 'ಪಗಾನ್' ಬುಡಕಟ್ಟಿನ ಆದಿವಾಸಿಗಳ ಹಳ್ಳಿಯೊಂದನ್ನು ತಲಪಿದೆವು. ಈ ಆದಿವಾಸಿಗಳು ಕುಳ್ಳರು. ಕಪ್ಪು ಮೈಬಣ್ಣದ ಉಣ್ಣೆಗೂದಲಿನ ಚಪ್ಪಟೆ ಮೂಗಿನ ದಪ್ಪ ತುಟಿಗಳ ದೈಹಿಕ ಲಕ್ಷಣಗಳುಳ್ಳ ಮಲಯೋ ಪಾಲಿ

ನೀಷಿಯ ಪ್ರದೇಶದ ನಿಗ್ರೋ ಕಲ್ಪ ಬುಡಕಟ್ಟಿಗೆ ಸೇರಿದವರು.

''ಈ ಆದಿವಾಸಿಗಳ ಬದುಕು ಹೆಚ್ಚಾಗಿ ಕಾಡು ಪ್ರಾಣಿಗಳ ಬೇಟೆಯ ಮೇಲೇ ಅವಲಂಬಿತವಾಗಿತ್ತು. ಅಂದು ರಾತ್ರಿ ತೊರೆಯ ದಂಡೆಯ ಮೇಲೆ ದೊಡ್ಡದಾಗಿ ಬೆಂಕಿ ಉರಿಸಿದರು. ನಮಗೆಲ್ಲಾ ಕುಡಿಯಲು ಮದ್ಯವನ್ನಿತ್ತರು. 'ನಪೊ' ಎಂಬ ಜಿಂಕೆಯ ರುಚಿಕಟ್ಟಾದ ಮಾಂಸವನ್ನು ಉಣಬಡಿಸಿದರು. ಸರಿ ಹೊತ್ತಿನವರೆಗೂ ಬೆಂಕಿಯ ಮುಂದೆ ಕುಣಿಯುತ್ತಾ ಹಾಡುತ್ತಾ ನಮ್ಮನ್ನು ರಂಜಿಸಿದರು.

''ನಾವು ಮನಸ್ಸಿನ ತುಮುಲಗಳಿಂದ ಬಿಡುಗಡೆ ಹೊಂದಿ ನೆಮ್ಮದಿಯಿಂದ ಆರು ವಾರಗಳವರೆಗೆ ಪಗಾನ್ ಆದಿವಾಸಿಗಳೊಂದಿಗೆ ಆ ದ್ವೀಪದಲ್ಲಿ ತಂಗಿದ್ದೆವು. ಒಂದು ದಿನ ಜಪಾನಿ ಸೈನಿಕರು ಆ ದ್ವೀಪವನ್ನು ಪ್ರವೇಶಿಸಿ ನಮ್ಮನ್ನು ಹಿಡಿದುಕೊಂಡು ಹೋಗಿ ಯುದ್ಧ ಕೈದಿಗಳ ಶಿಬಿರಕ್ಕೆ ದೂಡಿದರು. ಅದು ಬೇರೆಯೇ ಒಂದು ಕತೆ.

''ಈಗಲೂ ನನಗೆ ಒಂದು ವಿಷಯ ಎಲ್ಲಕ್ಕಿಂತಲೂ ಹೆಚ್ಚಾಗಿ ನೆನಪಿನಲ್ಲಿ ಉಳಿದಿದೆ. ಅದು ಒಂದು ದಿನ ಪಗಾನ್ ಆದಿವಾಸಿ ಹುಡುಗನೊಬ್ಬ ದೊಡ್ಡ ಕನ್ನಡಿಯ ಚೂರೊಂದನ್ನು ತಂದು ಕೊಟ್ಟಾಗಿನದು. ಕನ್ನಡಿಯಲ್ಲಿ ನೋಡಿದಾಗ ಅದರಲ್ಲಿ ಕಪ್ಪನೆಯ ಕೊಟ್ಟಾಗಿನದು. ಕನ್ನಡಿಯಲ್ಲಿ ನೋಡಿದಾಗ ಅದರಲ್ಲಿ ಕಪ್ಪನೆಯ ಮುಖದಲ್ಲಿ ಮೂಳೆಗಳೆದ್ದು ಕಾಣುತ್ತಿದ್ದ ಜಡಗಟ್ಟಿದ ಒರಟು ಗಡ್ಡ ಮೀಸೆಗಳ ಭಾರತೀಯ ಬೈರಾಗಿಯಂತೆ ಕಾಣುತ್ತಿದ್ದ ಮುಖವೊಂದನ್ನು ಕಂಡು ಬೆಚ್ಚಿ ಬಿದ್ದೆ. ಅದು ನನ್ನ ಮುಖದ್ದೇ ಪ್ರತಿಬಿಂಬವೆಂಬ ಮನವರಿಕೆಯಾಗಲು ಕೆಲವು ನಿಮಿಷಗಳೇ ಬೇಕಾದುವೆಂದರೆ ನಿಮಗೆ ಅಚ್ಚರಿಯಾಗದು!

''ಅಸ್ಥಿಪಂಜರದ ಮೇಲೆ ಬಿಸಿಲಿನಿಂದ ಸುಟ್ಟು ಕರಕಾಗಿದ್ದ ಚರ್ಮವನ್ನು ಅಂಟಿಸಿದಂತಿತ್ತು. ಬೆಂಕಿಯಿಂದ ಹೊರತೆಗೆದ ಸುಟ್ಟು ಕರಕಾಗಿದ್ದ ಕಬ್ಬಿಣದ ಚೌಕಟ್ಟನ್ನು ಹೋಲುತ್ತಿತ್ತು ನಮ್ಮ ಮಾಂಸರಹಿತ, ಮೂಳೆಗಳೆದ್ದು ತೋರುತ್ತಿದ್ದ ಶರೀರ.

''ಕನ್ನಡಿಯನ್ನು ಕೆಳಗಿಟ್ಟು ಚೀನೀ ಯುವತಿ ಡೋರಿಸ್‌ಲಿಮ್ ಮತ್ತು ನಾನು ಒಬ್ಬರನ್ನೊಬ್ಬರು ನೋಡಿಕೊಂಡೆವು. ಸದಾ ಮುಖವನ್ನು ಬಿಗಿದುಕೊಂಡೇ ಇರುತ್ತಿದ್ದ ಡೋರಿಸ್‌ಲಿಮ್ ಕೆಳಗಿದ್ದ ಕನ್ನಡಿಯನ್ನು ತೆಗೆದುಕೊಂಡು ಒಂದು ಸಲ ತನ್ನ ಪ್ರತಿಬಿಂಬವನ್ನು ನೋಡಿ ಬೆಚ್ಚಿ ಕನ್ನಡಿಯನ್ನು ಕೂಡಲೇ ಕೆಳಗೆ ಹಾಕಿದಳು. ಮತ್ತೊಮ್ಮೆ ಒಬ್ಬರನ್ನೊಬ್ಬರು ನೋಡಿಕೊಂಡೆವು. ಮೊದಲ ಸಲ ಮಂದಹಾಸದ ನವಿರಾದ ರೇಖೆಯೊಂದು ಡೋರಿಸ್‌ಲಿಮ್‌ಳ ತುಟಿಗಳ ಮೇಲೆ ಸುಳಿಯಿತು. ಕೊನೆಗೆ ನಾವು ಜೀವಂತವಾಗಿ ಬದುಕಿ ಉಳಿದುಕೊಂಡೆವು.

Printed and Published by V. G. VAIDYA on behalf of Loka Shikshana Trust at 'Samyukta Karnataka Press', Koppikar Road, Hubli-580020 (Phone: 64303) No. 2, Residency Road, Bangalore-560025 (Phone: 213265)
Managing Editor: K. SHAMA RAO.
Representatives: Bombay: V. Satyamurthy (Phone: 5510592)
Madras: S. K. Murthi (Phone: 414870)
New Delhi: V. K. Chopra (Phone:7114785)
Registered with the Registrar of Newspapers for India under No. 3633/57

